# ದಾಸ ಸಾಹಿತ್ಯ ಸುಧೆ



ಟಿ. ಎನ್. ನಾಗರತ್ನ

*DASASAHITYA SUDHE* : A collection of eleven papers in Kannada on Dasa literature contributed by scholars in the field, compiled and edited by Dr. T. N. Nagarathna, and published by Ganabharathi (R), Punarvasu, Navilu main road, Kuvempunagar, Mysore 570 023 with the financial assistance of Tirumalai Tirupati Devasthanams.

**First Edition 1991, One Thousand Copies**

# ಮೊದಲ ಮಾತು

ಮೈಸೂರಿನ ಗಾನಭಾರತೀ (ರಿ) ಸಂಸ್ಥೆ ತನ್ನ ೧೯೯೦ರ ಸಾಹಿತ್ಯ ಚಟಿಕೆಗಳ ಅಂಗವಾಗಿ 'ದಾಸಸಾಹಿತ್ಯ ಸಂಧ್ಯೆ' ಎಂಬ ಪುಸ್ತಕವನ್ನು ಹೊರ ೨ ಯೋಜನೆ ಹಾಕಿಕೊಂಡಿತು. ಕರ್ನಾಟಕದ ಹರಿದಾಸಶ್ರೇಷ್ಠ ದರದಾಸರ ಜೀವನ ಸಾಹಿತ್ಯಗಳೊಂದಿಗೆ ಭಾರತದ ಇತರ ಸಂತರ ನ ಸಾಹಿತ್ಯಗಳನ್ನು ಹೋಲಿಸಿ ಆಸಕ್ತ ಜನತೆಗೆ ಅವುಗಳ ಒಂದು ಪರಿ ಮಾಡಿಕೊಡುವುದು ಪುಸ್ತಕದ ಉದ್ದೇಶ. ಅದಕ್ಕೆ ತಕ್ಕಂತೆ ಲೇಖನ ) ವಿದ್ವಾಂಸರನ್ನು ಸಂಪರ್ಕಿಸಲಾಯಿತು. ಅವರು ಸಂತೋಷದಿಂದ ಸಕಾಲದಲ್ಲಿ ತಮ್ಮ ವಿದ್ವತ್ಪೂರ್ಣ ಲೇಖನಗಳನ್ನು ಒದಗಿಸಿ ಸಹಕರಿಸಿ . ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಪ್ರಸ್ತುತ ಪುಸ್ತಕದಲ್ಲಿ ಹನ್ನೊಂದು ಲೇಖನಗಳಿವೆ. ಭಕ್ತಿಸಾಹಿತ್ಯಕ್ಕೆ ರಿಯಾಗಿ ನಿಲ್ಲುವ 'ಭಾರತೀಯ ಭಕ್ತಿಸಾಹಿತ್ಯ' ಎಂಬ ಲೇಖನ ಮಂತ್ರ ರರು, ಬಸವಣ್ಣನವರು, ಅನ್ನಮಾಚಾರ್ಯರು, ಮಲೆಯಾಳೀ ರು, ಮರಾಠೀಸಂತರು, ಕಬೀರ್, ಮೀರಾ, ಸೂರ್‌ದಾಸ್, ಚೈತನ್ಯ, ದೇವ – ಈ ಸಂತರ ಜೀವನ ಕೃತಿಗಳನ್ನು ಪುರಂದರದಾಸರ ಜೀವನ ಳೊಂದಿಗೆ ತುಲನಾತ್ಮಕವಾಗಿ ನೋಡಿರುವ ಇತರ ಹತ್ತು ಲೇಖನಗಳು. ಲ್ಲ ಸಂತರ ರಾಗ ಭಾವ ಭಕ್ತಿ ಒಂದೇ ; ದೇಶ ಭಾಷೆ ತತ್ತ್ವಗಳು ಮಾತ್ರ ಬೇರೆ – ಬಹುಮುಖತೆಯಲ್ಲಿ ಏಕತೆ. ಈ ಅಂಶವನ್ನು ಪ್ರಸ್ತುತ ಪುಸ್ತಕ ರ್ಣವಾಗಿ ಸೆರೆಹಿಡಿದಿದೆ.

ಪುಸ್ತಕದ ಮುದ್ರಣವನ್ನು ಸುಂದರವಾಗಿ ನಿರ್ವಹಿಸಿರುವ ಹರ್ಷ ಟರ್ಸ್ ಮೈಸೂರು, ಪ್ರಕಾಶನ ಕಾರ್ಯಕ್ಕೆ ಆರ್ಥಿಕ ಸಹಾಯ ನೀಡಿದ ಮಲೆ ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿ, ಈ ಕಾರ್ಯದಲ್ಲಿ ೆ ಮಾರ್ಗದರ್ಶನ ನೀಡಿ ಸಹಕರಿಸಿದ ತಿರುಮಲೆ ತಿರುಪತಿ ದೇವಸ್ಥಾನದ ಣ ವಿಭಾಗದ ಸಂಪಾದಕ ಶ್ರೀ ಕೆ. ಸುಬ್ಬರಾವ್ ಇವರೆಲ್ಲರಿಗೂ ನಮ್ಮ ರ್ವಕ ವಂದನೆಗಳು ಸಲ್ಲುತ್ತವೆ. ಪುಸ್ತಕದ ಕರಡಚ್ಚು ತಿದ್ದುವಲ್ಲಿ ರಿಸಿದ ಶ್ರೀಮತಿಯರಾದ ಕೃಷ್ಣವೇಣಿ, ಟಿ. ಕೆ. ಇಂದುಬಾಯಿ ಹಾಗೂ ಕೆ. ಜಿ. ಪ್ರಕಾಶ್ ಇವರಿಗೆ ನಮ್ಮ ಧನ್ಯವಾದಗಳು.

೧-೧೯೯೧

ಪುನರ್ವಸು ನವಿಲುರಸ್ತೆ

ಪುನಗರ

ಸೂರು–೫೭೦ ೦೨೩

**ಗಾನಭಾರತೀ (ರಿ)**

# ಪರಿವಿಡಿ


| ಲೇಖನ | ಲೇಖಕರು | ಪುಟ |
|---|---|---|
| ಪೀಠಿಕೆ | ಸಂಪಾದಕರು | ೧ |
| ೧ ಭಾರತೀಯ ಭಕ್ತಿಸಾಹಿತ್ಯ (ಪ್ರಾಚೀನರಿಂದ ಪುರಂದರದಾಸರವರೆಗೆ) | ... ಡಾ. ಆರ್ಡ್ವಿಯಸ್ | ೫ |
| ೨ ಪುರಂದರದಾಸರು - ಆಳ್ವಾರರು | ... ಕೃಷ್ಣವೇಣಿ | ೨೧ |
| ೩ ಪುರಂದರದಾಸರು - ಬಸವಣ್ಣನವರು | ... ಟಿ.ಕೆ. ಇಂದುಬಾಯಿ | ೪೨ |
| ೪ ಪುರಂದರದಾಸರು - ಅನ್ನಮಾಚಾರ್ಯರು | ... ಡಾ.ಅಕ್ಕಮಹಾದೇವಿ | ೫೯ |
| ೫ ಪುರಂದರದಾಸರು - ಮಲಯಾಳೀಸಂತರು | ... ಸಿ. ಕಮಲಾದೇವಿ | ೭೦ |
| ೬ ಪುರಂದರದಾಸರು - ಮರಾಠೀಸಂತರು | ... ಸೀತಾರಾಮಜಾಗೀರ್‌ದಾರ್ | ೮೨ |
| ೭ ಪುರಂದರದಾಸರು - ಕಬೀರ್ | ... ಲಕ್ಷ್ಮೀನಾರಾಯಣಅರೋರಾ | ೯೭ |
| ೮ ಪುರಂದರದಾಸರು - ಮೀರಾಬಾಯಿ | ... ಉಮಾ ಅರೋರಾ | ೧೧೨ |
| ೯ ಪುರಂದರದಾಸರು - ಸೂರದಾಸರು | ... ಎ.ಎಂ. ರಾಮಚಂದ್ರ | ೧೨೩ |
| ೧೦ ಪುರಂದರದಾಸರು - ಚೈತನ್ಯದೇವರು | ... ವಿ.ಜಿ. ಕೃಷ್ಣಮೂರ್ತಿ | ೧೩೮ |
| ೧೧ ಪುರಂದರದಾಸರು - ಜಯದೇವಕವಿ | ... ಎಂ.ವಿ. ವರದರಾಜನ್ | ೧೫೧ |
| ಅನುಬಂಧ | | |

# ಲೇಖಕರ ವಿಳಾಸ


ಶ್ರೀಮತಿ/ಶ್ರೀ

೧ ಆರ್.ವಿ.ಎಸ್. ಸುಂದರಂ
ತೆಲುಗು ವಿಶ್ವವಿದ್ಯಾನಿಲಯ
ರಾಜಮಂಡ್ರಿ ಕ್ಯಾಂಪಸ್
ಬೊಮ್ಮೂರು
ಆಂಧ್ರಪ್ರದೇಶ–೫೩೩೧೨೪

೨ ಕೃಷ್ಣವೇಣಿ
ಸಹಾಯಕ ಶಾಸನತಜ್ಞರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೩ ಟಿ.ಕೆ. ಇಂದುಬಾಯಿ
ಸಹಾಯಕ ಸಂಶೋಧಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೪ ಡಾ. ಅಕ್ಕಮಹಾದೇವಿ
ಸಹಾಯಕ ಸಂಶೋಧಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೫ ಸಿ. ಕಮಲಾದೇವಿ
ಅಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೬ ಸೀತಾರಾಮ ಜಾಗೀರ್‌ದಾರ್
ಸಹಾಯಕ ಶಾಸನತಜ್ಞರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೭ ಲಕ್ಷ್ಮೀನಾರಾಯಣ ಅರೋರಾ
ಅಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

೮ ಉಷಾ ಅರೋರಾ
'ಅನುಪಮ' ೧೧೩೬
ಸಿ ಮತ್ತು ಡಿ ಬ್ಲಾಕ್
ಕುವೆಂಪುನಗರ
ಮೈಸೂರು–೫೭೦೦೨೩

೯ ಎ.ಎಂ. ರಾಮಚಂದ್ರ
ನಂ. ೩/೭ ಬಿ. ಕೃಷ್ಣವೇಣಿ ಕಾಲೋನಿ
ಥಿಯೋಬಾಲ್ಡ್ ರಸ್ತೆ, ನಜರ್‌ಬಾದ್
ಮೈಸೂರು–೫೭೦೦೧೦

೧೦ ವಿ. ಜಿ. ಕೃಷ್ಣಮೂರ್ತಿ
ನಂ. ೨೫ 'ಕೃಷ್ಣಾಲಯ' ೧೨ನೇ ಕ್ರಾಸ್
ವಾಣಿವಿಲಾಸ ಮೊಹಲ್ಲಾ
ಮೈಸೂರು–೫೭೦೦೦೨

೧೧ ಎಂ.ವಿ. ವರದರಾಜನ್
ಸಂಶೋಧಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು–೫೭೦೦೦೬

# ಪೀಠಿಕೆ

ಭಾರತದಲ್ಲಿ ಭಕ್ತಿಮಾರ್ಗ ವೇದಕಾಲದಷ್ಟು ಪ್ರಾಚೀನವೆಂಬುದಕ್ಕೆ ದಾಖಲೆಗಳಿವೆ. ಉಪನಿಷತ್ತುಗಳ ಕಾಲದಲ್ಲಿ ವೃದ್ಧಿಯಾದ ಭಕ್ತಿ ಋಷಿಮುನಿಗಳ ಸ್ತೋತ್ರಗಳಲ್ಲಿ ಮೈದುಂಬಿತು. ಮುಂದೆ ಶಿವ ವಿಷ್ಣುಭಕ್ತಿಗಳಾಗಿ ಕವಲೊಡೆದು ತಮಿಳಿನ ನಾಯನ್ಮಾರರ ತೇವಾರಗಳಲ್ಲಿ ಹಾಗೂ ಆಳ್ವಾರರುಗಳ ದ್ರಾವಿಡ ಪ್ರಬಂಧಗಳಾದ ತಿರುವಾಯ್ಮೊಳಿಯಲ್ಲಿ ಭಕ್ತಿಸಾಹಿತ್ಯವಾಗಿ ಹೊರಹೊಮ್ಮಿತು. ಸುಮಾರು ೯–೧೦ ನೆಯ ಶತಮಾನಗಳನ್ನು ತಮಿಳು ಭಕ್ತಿ ಸಾಹಿತ್ಯದ ಕಾಲವೆಂದು ಕರೆಯಲಾಗಿದೆ. ವೇದೋಪನಿಷತ್ತುಗಳಲ್ಲಿಯ ಭಗವಂತನ ವರ್ಣನೆ, ಅವತಾರಗಳು ಈ ಭಕ್ತರ ಸಗುಣೋಪಾಸನೆಗೆ ಮೂಲವಾಯಿತು. ಇವುಗಳಿಂದ ಪ್ರೇರಿತರಾದ ರಾಮಾನುಜರು ತಮ್ಮ ವಿಶಿಷ್ಟಾದ್ವೈತ ತತ್ವದಲ್ಲಿ ಭಕ್ತಿಗೆ ಪ್ರಾಮುಖ್ಯವಿತ್ತರು. ಅವರ ಸಮಕಾಲೀನರೇ ಆದ ರಾಮಾನಂದರು ಉತ್ತರ ಭಾರತದಲ್ಲಿ ಈ ಭಕ್ತಿಯ ಸಸಿಯನ್ನು ಕೊಂಡು ಹೋಗಿ ನೆಟ್ಟರೆಂಬ ಮಾತಿದೆ. ಅವರು ಜ್ಞಾನ–ಯೋಗಮಾರ್ಗಗಳನ್ನೂ ಬೋಧಿಸಿದರು. ಇವರ ಬೋಧನೆಗಳಿಗೆ ಮಾರುಹೋದ ಕಬೀರ್ ಶ್ರೀರಾಮನ ಭಕ್ತನಾದರೂ ನಿರ್ಗುಣಬ್ರಹ್ಮೋಪಾಸಕನಾದನು. ಅವನು ಮೂರ್ತಿಪೂಜೆಯನ್ನು ಖಂಡಿಸಿ ಯಾತ್ರೆ ತೀರ್ಥಗಳನ್ನು ಕಡೆಗಣಿಸಿದನು. ೧೬ನೆಯ ಶತಮಾನದಲ್ಲಿ ಸಂತ ತುಲಸೀದಾಸನು ರಾಮಾನಂದರ ಬೋಧನೆಗಳಿಂದ ಪ್ರಭಾವಿತನಾದನು. ಸಗುಣಬ್ರಹ್ಮೋಪಾಸನೆಯನ್ನು ಅಪ್ಪಿಕೊಂಡ ಅವನು ತನ್ನ "ರಾಮಚರಿತಮಾನಸ" ದಿಂದ ಉತ್ತರ ಭಾರತದಲ್ಲಿ ಮನೆಮಾತಾದನು. ಮುಂದೆ ಮೀರಾ, ಸೂರದಾಸರೂ ಈ ಭಕ್ತಿವಾಹಿನಿಯಲ್ಲಿ ಮಿಂದು ಮುಕ್ತರಾದರು. ಅಂತೆಯೇ ಕರ್ನಾಟಕದಲ್ಲಿ ಶಿವಶರಣರ ಸಾವಿರಾರು ವಚನಗಳಲ್ಲಿ ಅವರ ಭಕ್ತಿಭಾವ ಹೊನಲಿಟ್ಟಿದೆ, ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿಯೇ ಅವರು ತಮ್ಮ ಭಕ್ತಿಕಾಣಿಕೆಯನ್ನು ಸಲ್ಲಿಸಿದ್ದಾರೆ.

ಹದಿಮೂರನೆಯ ಶತಮಾನದ ವೇಳೆಗಾಗಲೇ ಮಹಾರಾಷ್ಟ್ರದಲ್ಲಿ ಪುಂಡಲೀಕನೇ ಮೊದಲಾದವರಿಂದ ವಿಟ್ಠಲಭಕ್ತಿಯ ಪ್ರಸಾರ ಭರದಿಂದ ಸಾಗಿತ್ತು. ಸಂತಜ್ಞಾನೇಶ್ವರನು (೧೩ನೆಯ ಶತಮಾನ) ಮಹಾರಾಷ್ಟ್ರದಲ್ಲಿ ಭಕ್ತಿಪಂಥಕ್ಕೆ ಭದ್ರವಾದ ಬುನಾದಿಯನ್ನು ಹಾಕಿದವನು. ನಿರ್ಗುಣಬ್ರಹ್ಮವಾದಿಯಾದ ಅವನು ತನ್ನ "ಜ್ಞಾನೇಶ್ವರಿ" ಗ್ರಂಥದ ಮೂಲಕ ನಿರ್ಗುಣ ಭಕ್ತಿಯನ್ನು ಪ್ರತಿಪಾದಿಸಿದನು. ಹದಿನಾಲ್ಕನೆಯ ಶತಮಾನ ಮಹಾರಾಷ್ಟ್ರದ

ಭಕ್ತಿಪಂಥಕ್ಕೆ ನವಚೈತನ್ಯವನ್ನು ಕೊಟ್ಟಕಾಲ. ನಾಮದೇವ, ಕಾನ್ಹೋಪಾತ್ರ, ದಾಮಾಜಿಪಂತ್ ಮೊದಲಾದವರು ತಮ್ಮ ಅಭಂಗಗಳಿಂದ, ಕೃತಿಗಳಿಂದ ವಿಟ್ಠಲನನ್ನು ಉಪಾಸಿಸಿದರು. ಮುಂದೆ ಏಕನಾಥ, ತುಕಾರಾಮರು ಇದೇ ಹಾದಿಯನ್ನು ತುಳಿದರು. ಸಗುಣಬ್ರಹ್ಮೋಪಾಸಕನಾದ ತುಕಾರಾಮ ನೂರಾರು ಸಂಖ್ಯೆಯಲ್ಲಿ ಅಭಂಗಗಳನ್ನು ರಚಿಸಿದ್ದಾನೆ.

ಬಂಗಾಳದಲ್ಲಿ ೧೫ನೆಯ ಶತಮಾನದ ವೇಳೆಗೆ ವಿಷ್ಣುಭಕ್ತಿ ಚೈತನ್ಯನಿಂದ ಚೈತನ್ಯ ಪಡೆಯಿತು. ಜಯದೇವನ ಗೀತಗೋವಿಂದದ ಪ್ರಭಾವವೂ ಇಲ್ಲಿ ಗಮನಾರ್ಹ. ರಾಧಾಕೃಷ್ಣಭಕ್ತಿಯೇ ಚೈತನ್ಯ ಪಂಥದ ಮೂಲಾಧಾರ. ಚೈತನ್ಯ ಪಂಥೀಯರ ಮೇಲೆ ಮಧ್ವಾಚಾರ್ಯರ ಪ್ರಭಾವವನ್ನು ಸ್ವಲ್ಪ ಮಟ್ಟಿಗೆ ಕಾಣಬಹುದು. ಗುಜರಾತಿನ ನರಸಿಂಹಮೆಹತಾ ವಿಷ್ಣುಭಕ್ತ. ನಾಮಸಂಕೀರ್ತನೆಗಳಿಂದ ಹರಿಯನ್ನು ಸ್ತುತಿಸಿದವನು.

ಮುಂದೆ ಹದಿನೈದನೆಯ ಶತಮಾನದಲ್ಲಿ ಬಂದ ಶ್ರೀಪಾದರಾಜರೇ ಮೊದಲಾದ ಹರಿದಾಸರು ಕನ್ನಡದ ಭಕ್ತಿಸಾಹಿತ್ಯವನ್ನು ತಮ್ಮ ಕೀರ್ತನೆ, ಸುಳಾದಿ, ಉಗಾಭೋಗಗಳಿಂದ ಶ್ರೀಮಂತಗೊಳಿಸಿದರು. ಆಂಧ್ರದಲ್ಲಿ ಭಕ್ತ ಪೋತನ, ತ್ಯಾಗರಾಜರು ಭಕ್ತಿವಾಹಿನಿಗೆ ಚಾಲನೆಯನ್ನು ಕೊಟ್ಟವರು. ಮಲಯಾಳಮ್‌ನ ಚೆರುಶ್ಶೇರಿ, ಎಳುತ್ತಚ್ಚನ್‌ರು ಕೇರಳದ ಭಕ್ತಿಸಾಹಿತ್ಯದಲ್ಲಿ ಹೆಸರಿಸುವಂತಹವರು.

ಹೀಗೆ ದಕ್ಷಿಣ ಭಾರತದಲ್ಲಿ ಹುಟ್ಟಿ ಉತ್ತರದತ್ತ ಹರಿದು, ಪೂರ್ವ ಪಶ್ಚಿಮ ಭಾಗಗಳಲ್ಲಿ ಹೊರಳಿದ ಭಕ್ತಿವಾಹಿನಿ ಭಾರತದಾದ್ಯಂತ ಆವರಿಸಿಕೊಂಡು ಬೆಳೆಯಿತು. ಈ ಎಲ್ಲ ಭಕ್ತರೂ ಭಾರತದ ವೇದೋಪನಿಷತ್ತುಗಳ ಭಾಷೆಯಾದ ಸಂಸ್ಕೃತವನ್ನು ತಮ್ಮ **ಅಭಿವ್ಯಕ್ತಿಮಾಧ್ಯಮವಾಗಿ ಆರಿಸಿಕೊಳ್ಳಲಿಲ್ಲ** ಎಂಬುದು ಗಮನಾರ್ಹವಾದ ವಿಚಾರ. ತಮ್ಮ ತಮ್ಮ **ಮಾತೃಭಾಷೆಯಲ್ಲಿಯೇ** ತಿಳಿಸಿರುವುದು, ಜನಸಾಮಾನ್ಯರ ಆಡುಭಾಷೆಯನ್ನೇ ಬಳಸಿರುವುದು ಬಹುಮುಖ್ಯ ಸಂಗತಿ. ಇದರಿಂದ ಓದುಬರಹ ಬಾರದ ಅನಕ್ಷರಸ್ಥನಿಗೂ ವೇದೋಪನಿಷತ್ತುಗಳ ಸಂದೇಶ ಮುಟ್ಟಿತು ; ಮನವರಿಕೆಯಾಯಿತು. ಈ ಒಂದು ಜ್ಞಾನದ ಬೆಳಕಿನಲ್ಲಿ ಅಜ್ಞಾನದ ಪರಮಾವಧಿಯಾದ ಜಾತಿ, ಮತ, ಜನಾಂಗಗಳ ಕಟ್ಟುಪಾಡುಗಳು ಕೊಚ್ಚಿಹೋಗಿ ಕೇವಲ ಭಕ್ತಿ-ಭಕ್ತ-ಭಗವಂತ ಎಂಬ ಭಾವನೆ ಜಾಗೃತವಾಯಿತು.

ಭಾರತದ ಬೇರೆ ಬೇರೆ ಭಾಗಗಳಲ್ಲಿರುವ ಭಕ್ತರು ಭಕ್ತಿಭಾವನೆಯಲ್ಲಿ ಒಂದುಗೂಡುವ ಅಂಶ ರೋಮಾಂಚಕಾರಿಯಾದುದು. ಎಲ್ಲರ ಮನಸ್ಸೂ

ಒಂದೇ ನಿಟ್ಟಿನಲ್ಲಿ ಹರಿದಿರುವುದು ಗಮನಾರ್ಹ. ವಿಭಿನ್ನತೆಯಲ್ಲಿ ಏಕತೆಯನ್ನು ಕಾಣುವ ಭಕ್ತಿಯ ಪರಿ ಭಾರತಕ್ಕೇ ವಿಶಿಷ್ಟವಾದುದು. ಅಂತೆಯೇ ಎಲ್ಲ ಭಕ್ತರೂ ತಮ್ಮ ಸಾಧನೆಯ ಮಾರ್ಗದಲ್ಲಿ, ಯಾವುದೋ ಒಂದು ಹಂತದಲ್ಲಿ ಇತರ ಸಂತರ ಭಾವನೆಗಳೊಂದಿಗೆ ಬೆರೆಯುತ್ತಾರೆ. ಪ್ರಸ್ತುತ ಪುಸ್ತಕದಲ್ಲಿ ಈ ಅಂಶವನ್ನು ಎತ್ತಿ ತೋರಿಸಿದೆ. ಅವರ ಆಚರಣೆಯಲ್ಲಿ, ತಾತ್ತ್ವಿಕ ನಂಬಿಕೆಗಳಲ್ಲಿ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಹಲವಾರು ವ್ಯತ್ಯಾಸಗಳೂ ಇವೆ : ಚೈತನ್ಯ, ಮೀರಾ, ಆಳ್ವಾರರು, ಹರಿದಾಸರು ಪ್ರಮುಖವಾಗಿ ವಿಷ್ಣುಭಕ್ತರಾದರೆ ಶಿವಶರಣರು ಶಿವಭಕ್ತರು. ಕಬೀರನು ಹಿಂದೂ, ಮುಸ್ಲಿಮ್ ಹಾಗೂ ಸೂಫೀ ಪಂಥಗಳ ಅನುಯಾಯಿ. ಆಳ್ವಾರರಿಗೆ ಹಾಗೂ ಹರಿದಾಸರಿಗೆ ಭಗವಂತನ (ವಿಷ್ಣುವಿನ) ಅವತಾರಗಳಲ್ಲಿ ನಂಬಿಕೆಯಿದೆ. ಆದರೆ ಚೈತನ್ಯ, ಮೀರಾ, ಕಬೀರರು ಅವತಾರಗಳನ್ನು ನಂಬುವುದಿಲ್ಲ. ಶಿವಶರಣರಲ್ಲಿ ಶಿವನ ಅವತಾರಗಳ ಪ್ರಶ್ನೆಯೇ ಇಲ್ಲ. ಇವರು ನಾಮಸ್ಮರಣೆಗೆ ಚೈತನ್ಯ, ಕಬೀರ, ಮೀರಾ, ಆಳ್ವಾರರಷ್ಟು ಪ್ರಾಶಸ್ತ್ಯ ಕೊಡುವುದಿಲ್ಲ. ಮುಕ್ತಿಗೆ ಜ್ಞಾನ ಅತ್ಯಂತ ಆವಶ್ಯಕವೆಂಬ ಅರಿವು ಎಲ್ಲ ಭಕ್ತರಲ್ಲಿಯೂ ಇದೆ. ನಿಷ್ಕಾಮಭಕ್ತಿಯೇ ಚೈತನ್ಯನ ಗುರಿಯಾದರೆ ಕಬೀರ, ಮೀರಾ, ಶಿವಶರಣರಿಗೆ ಭಗವಂತನಲ್ಲಿ ಐಕ್ಯವೇ ಗುರಿ. ಆಳ್ವಾರರು ಪ್ರಪತ್ತಿಮಾರ್ಗದಿಂದ ಭಗವಂತನಲ್ಲಿ ಐಕ್ಯವಾಗಬಯಸಿದರೆ ಹರಿದಾಸರಿಗೆ ಮಾತ್ರ ಮುಕ್ತಿಯೇ ಗುರಿ. ಜಾತಿಮತಗಳ ವಿಚಾರದಲ್ಲಿ ಈ ಎಲ್ಲ ಸಂತರೂ ಮುಕ್ತಭಾವನೆಯನ್ನುಳ್ಳವರು ; ಗುರುಮುಖೇನ ಮಾರ್ಗದರ್ಶನ ಪಡೆಯುವಲ್ಲಿ ಅವರಿಗೆ ನಂಬಿಕೆಯಿದೆ. ಆದರೆ ಮೀರಾಳಿಗೆ ಮಾತ್ರ 'ಗಿರಧರ ನಾಗರ'ನೇ ಗುರು ; ಅನ್ಯಗುರುಗಳನ್ನು ಆಕೆ ಒಪ್ಪುವುದಿಲ್ಲ. ಮೀರಾ ಹಾಗೂ ಕಬೀರರಿಬ್ಬರೂ ನಿರ್ಗುಣೋಪಾಸಕರು. ಚೈತನ್ಯ, ಆಳ್ವಾರರು, ಹರಿದಾಸರು ಸಗುಣೋಪಾಸನೆಗೆ ಒತ್ತುಕೊಡುತ್ತಾರೆ. ಶಿವಶರಣರಲ್ಲಿ ಸಗುಣ ನಿರ್ಗುಣೋಪಾಸನೆಗಳೆರಡಕ್ಕೂ ಅವಕಾಶವಿದೆ. ಚೈತನ್ಯ, ಕಬೀರರು ಅದ್ವೈತಿಗಳಾದರೆ, ಆಳ್ವಾರರು ವಿಶಿಷ್ಟಾದ್ವೈತಿಗಳು. ಶಿವಶರಣರು ದ್ವೈತಾದ್ವೈತಿಗಳು, ಇವರೆಲ್ಲರಿಗಿಂತ ಭಿನ್ನ ನಿಲುವಿನ ಹರಿದಾಸರು ದ್ವೈತಿಗಳು.

ಹೀಗೆ ವಿಷ್ಣುಭಕ್ತರೂ, ಸಗುಣೋಪಾಸಕರೂ, ಸಾಕಾರಮೂರ್ತಿಪೂಜಕರೂ, ಗುರುಮುಖೇನ ಮುಕ್ತಿಯನ್ನು ಪಡೆಯಬಯಸುವವರೂ ಆದ ಹರಿದಾಸರು ಒಂದೊಂದು ವಿಚಾರದಲ್ಲಿ ಒಬ್ಬೊಬ್ಬರನ್ನು ಹೋಲುತ್ತಾರಾದರೂ ವೇದಗಳಿಗೆ ಮಾನ್ಯತೆ ಕೊಡುವುದಲ್ಲದೆ ಅವನ್ನು ಪ್ರಚಾರ ಮಾಡುವ ದೃಷ್ಟಿಯಿಂದ, ವಿಷ್ಣುವಿನ ಅವತಾರಗಳನ್ನು ನಂಬಿ ಚಿತ್ರಿಸುವ ಹರಿದಾಸರು ಇತರ

ಭಕ್ತಿಪಂಥಗಳವರಿಗಿಂತ ವಿಭಿನ್ನ ನಿಲುವಿನಲ್ಲಿ ನಿಂತಿದ್ದಾರೆ.

ಈ ಹಿನ್ನೆಲೆಯಲ್ಲಿ ಹರಿದಾಸರ ಪ್ರತಿನಿಧಿಗಳಾದ ಪು
ಜೀವನ–ಕೃತಿಗಳನ್ನು ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಬಂ
ಭಕ್ತರ ಜೀವನ–ಕೃತಿಗಳೊಡನೆ ಹೋಲಿಸುವ ಒಂದು ಪ್ರಯತ್ನ
ಮಾಡಿದೆ.

ತಮಿಳಿನ ಆಳ್ವಾರರು, ತೆಲುಗಿನ ಅನ್ನಮಾಚಾರ್ಯರು, ಮಲ
ಚೆರುಶ್ಶೇರಿ, ಮರಾಠಿಯ ತುಕಾರಾಮರು, ಹಿಂದಿಯ ಕಬೀರ
ಸೂರದಾಸ್, ಬಂಗಾಲದ ಚೈತನ್ಯಪ್ರಭು, ಸಂಸ್ಕೃತದ ಜಯ
ಎಲ್ಲ ಭಕ್ತ ಮಹನೀಯರೊಂದಿಗೂ ಪುರಂದರದಾಸರನ್ನು ತು
ನೋಡಲಾಗಿದೆ. ಆಯಾ ಭಕ್ತರೊಂದಿಗೆ ಪುರಂದರದಾಸರ ಜೀವ
ಸಾದೃಶ್ಯಗಳನ್ನು ಗುರುತಿಸಲಾಗಿದೆ. ಪುರಂದರದಾಸರನ್ನು
ಬಲ್ಲ ಕನ್ನಡಿಗರಿಗೆ ಭಾರತೀಯ ಭಕ್ತಿಸಾಹಿತ್ಯದ ಹಿನ್ನೆಲೆಯಲ್ಲಿ
ಪ್ರತಿನಿಧಿಯಾದ ಪುರಂದರದಾಸರನ್ನು ಪರಿಚಯಿಸಿಕೊಡುವ
ಪ್ರಯತ್ನವಿದು. ಸಾವಿರಾರು ಮೈಲುಗಳ ದೂರದಲ್ಲಿ ಸಾವಿರಾ
ಅಂತರದಲ್ಲಿ ಬಾಳಿದರೂ "ಮಾನವ ಕುಲ ತಾನೊಂದೆ ವಲ
ಪಂಪನ ಮಾತಿನಂತೆ ಭಕ್ತರ ಭಾವನೆಗಳೆಲ್ಲ ಒಂದೇ ಎನ್ನು
ಪುಸ್ತಕ ಬಿಂಬಿಸಿದೆ.

ಟಿ. ಎನ್

# ಭಾರತೀಯ ಭಕ್ತಿಸಾಹಿತ್ಯ

(ಪ್ರಾಚೀನರಿಂದ ಪುರಂದರದಾಸರವರೆಗೆ)

ಡಾ. ಆರ್ವಿಯಸ್

ಭಗವದ್ಗುಣ ಶ್ರವಣದಿಂದ ನದೀಧಾರಾಪ್ರವಾಹದಂತೆ ದ್ರವೀಭೂತವಾಗಿ ಸರ್ವೇಶ್ವರನಲ್ಲೇ ಲಯವಾಗುವ ಏಕಾಗ್ರಮನೋವೃತ್ತಿ ಭಕ್ತಿ. ಭಕ್ತಿ ಎಂದರೆ ಈಶ್ವರನಲ್ಲಿ ಅತ್ಯಂತ ಪ್ರೇಮ. ''ಸಾಪರಾನುರಕ್ತಿರೀಶ್ವರೇ''. ಭಾರತೀಯ ಧರ್ಮ ಹಾಗೂ ತತ್ತ್ವಶಾಸ್ತ್ರಗಳ ಲಕ್ಷ್ಯ ಪರಮಾರ್ಥಪ್ರಾಪ್ತಿ. ಮೋಕ್ಷವೆಂಬ ಪರಮಾರ್ಥವನ್ನು ಪಡೆಯಬೇಕಾದರೆ ಭಕ್ತಿ,ಕರ್ಮ, ಜ್ಞಾನಗಳೆಂಬ ಮೂರು ಮುಖ್ಯ ಸಾಧನಗಳು. ಭಾರತೀಯ ದರ್ಶನಗಳೆಲ್ಲಾ ಈ ಮೂರು ಮಾರ್ಗಗಳನ್ನು ಹೇಳುವಂಥವೇ. ಈ ಮೂರರಲ್ಲಿ ಜಾತಿ, ಪಂಥ, ವರ್ಗ ಮುಂತಾದ ಭೇದವಿಲ್ಲದೆ ಎಲ್ಲರೂ ಅನುಸರಿಸಬಹುದಾದ ಮಾರ್ಗ ಭಕ್ತಿಮಾರ್ಗ.

ಭಕ್ತಿ ಎಂದರೆ ಸೇವೆ, ಉಪಾಸನೆ, ಆರಾಧನೆ ಮುಂತಾದ ಅರ್ಥಗಳನ್ನು ಹೇಳಬಹುದು. ಆದರೆ ಭಾರತೀಯ ಹಿನ್ನೆಲೆಯಲ್ಲಿ ಇದಕ್ಕೆ ಗಂಭೀರವಾದ ಮತ್ತು ಪವಿತ್ರವಾದ ಅರ್ಥ ಏರ್ಪಟ್ಟಿದೆ. ಇದರ ಪಾರಿಭಾಷಿಕ ವ್ಯಾಖ್ಯೆ ನಮಗೆ ಮೊದಲು ನಾರದಭಕ್ತಿಸೂತ್ರದಲ್ಲಿ ಲಭಿಸುತ್ತದೆ. ಈ ಸೂತ್ರಗ್ರಂಥದ ಕಾಲ ನಮಗೆ ಸರಿಯಾಗಿ ತಿಳಿಯದು. ಭಕ್ತಿ ಎಂಬುದು ಭಗವಂತನಲ್ಲಿ ಪರಮ ಪ್ರೇಮ. ಇದನ್ನು ಪಡೆದವನು ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ ಮತ್ತು ತೃಪ್ತನಾಗುತ್ತಾನೆ. ಭಕ್ತಿಯನ್ನು ಕುರಿತ ವಿಭಿನ್ನ ಮತಗಳನ್ನೂ ನಾರದ ಭಕ್ತಿಸೂತ್ರ ಉಲ್ಲೇಖಿಸುತ್ತದೆ. ವ್ಯಾಸನ ಮತದಂತೆ ಪೂಜಾದಿಗಳಲ್ಲಿ ಅನುರಾಗವೇ ಭಕ್ತಿ. ಗರ್ಗನ ಮತದಂತೆ ಕಥಾದಿಗಳಲ್ಲಿ ಅನುರಾಗ ತೋರುವುದೇ ಭಕ್ತಿ.

ನಾರದನ ಪ್ರಕಾರ ಭಕ್ತಿ ಹನ್ನೊಂದು ಬಗೆಗಳಲ್ಲಿ ವ್ಯಕ್ತವಾಗುತ್ತದೆ: ೧ ಗುಣಮಹಾತ್ಮ್ಯಾಸಕ್ತಿ ೨ ರೂಪಾಸಕ್ತಿ ೩ ಪೂಜಾಸಕ್ತಿ ೪ ಸ್ಮರಣಾಸಕ್ತಿ ೫ ದಾಸ್ಯಾಸಕ್ತಿ ೬ ಸಖ್ಯಾಸಕ್ತಿ ೭ ವಾತ್ಸಲ್ಯಾಸಕ್ತಿ ೮ ಕಾಂತಾಸಕ್ತಿ ೯ ಆತ್ಮನಿವೇದನಾಸಕ್ತಿ ೧೦ ತನ್ಮಯತಾಸಕ್ತಿ ೧೧ ಪರಮವಿರಹಾಸಕ್ತಿ. ಭಾಗವತದಲ್ಲಿ ಹೇಳಿದ ನವವಿಧಭಕ್ತಿ ಭಾರತದಲ್ಲಿ ಅತ್ಯಂತ ಜನಪ್ರಿಯವಾಗಿ, ಭಕ್ತಿಸಾಹಿತ್ಯಕ್ಕೆ ಶಾಸ್ತ್ರದ ಹಿನ್ನೆಲೆಯನ್ನು ಒದಗಿಸಿತು :

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ

ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ
(ಭಾಗವತ ೭-೫-೨೩)

ಸಾಹಿತ್ಯಶಾಸ್ತ್ರದಲ್ಲಿ ಭಕ್ತಿಗೆ ರಸದ ಸ್ಥಾನವನ್ನು ನೀಡಲಾಯಿತು. ಭಗವಂತನೇ ಆಲಂಬನ ವಿಭಾವ. ತುಲಸೀದಳಾದಿಗಳು ಉದ್ದೀಪನ ವಿಭಾವ. ನಿರ್ವೇದಾದಿಗಳು ಸಂಚಾರೀಭಾವ. ಹೃದಯದಲ್ಲಿ ನೆಲೆಸಿದ ಭಗವದ್ರೂಪ ಸ್ಥಾಯಿ. ರೂಪಗೋಸ್ವಾಮಿ 'ಹರಿಭಕ್ತಿ ರಸಾಮೃತಸಿಂಧು'ಎಂಬ ಗ್ರಂಥವನ್ನು ಬರೆದು ಸಾಧನಭಕ್ತಿ, ಭಾವಭಕ್ತಿ ಮತ್ತು ಪ್ರೇಮಭಕ್ತಿ ಎಂಬ ಮೂರನ್ನು ವಿವರಿಸಿದ.

## ಭಕ್ತಿ ಪಂಥದ ಪ್ರಾಚೀನತೆ

ವೇದಗಳ ಕಾಲದಿಂದ ಭಕ್ತಿಪಂಥ ಭಾರತದಲ್ಲಿ ಬೇರೂರಿ ನಿಂತಿದೆ. ಮೊಹೆಂಜೊದಾರೋ ಮತ್ತು ಹರಪ್ಪ ಸಂಸ್ಕೃತಿಯಲ್ಲೂ ವಿದ್ವಾಂಸರು ಭಕ್ತಿ ಭಾವದ ತುಣುಕುಗಳನ್ನು ಗಮನಿಸಿದರು. ಪರಮೇಶ್ವರನಿಗೂ ಭಕ್ತನಿಗೂ ಇರುವ ಅಂತರಂಗ ಸಂಬಂಧದ ಅಭಿವ್ಯಕ್ತಿಯನ್ನು ಋಗ್ವೇದಮಂತ್ರಗಳಲ್ಲೂ ನೋಡುತ್ತೇವೆ. ರುದ್ರಸೂಕ್ತದ ಒಂದು ಮಂತ್ರದಲ್ಲಿ ವೇದಋಷಿ ಹೀಗೆ ಹೇಳುತ್ತಾನೆ :

ತ್ವಾದತ್ತೇಭೀ ರುದ್ರ ಶಂತಮೇಭಿಃ
ಶತಂ ಹಿಮಾ ಅಶೀಯ ಭೇಷಜೇಭಿಃ
ವ್ಯಸ್ಮದ್ವೇಷೋ ವಿತರಂ ವ್ಯಂಹೋ
ವ್ಯಮೀವಾಶ್ಚಾತಯಸ್ವಾ ವಿಷೂಚೀಃ

(ರುದ್ರನೇ ನೀನು ಕೊಟ್ಟ ಹಿತಕರ ಔಷಧಗಳಿಂದ ನೂರು ಶಿಶಿರ ಗಳನ್ನು ತಡೆಯುವೆನು. ನಮ್ಮಿಂದ ದ್ವೇಷವನ್ನು ಬಹುದೂರ ಓಡಿಸು. ಕ್ಲೇಶ ವನ್ನೂ ರೋಗಗಳನ್ನೂ ದಿಕ್ಕುಗಳಾಚೆಗೆ ತೊಲಗಿಸು)

ಉಪನಿಷತ್ತುಗಳು ಪ್ರಧಾನವಾಗಿ ಜ್ಞಾನಮಾರ್ಗವನ್ನು ಪ್ರತಿಪಾದಿಸು ತ್ತವೆ. ಭಾರತೀಯ ತತ್ತ್ವಶಾಸ್ತ್ರಕ್ಕೆ ಉಪನಿಷತ್ತುಗಳೇ ಬುನಾದಿಗಳಂತೆ ನಿಂತಿವೆ. ಭಕ್ತಿಮಾರ್ಗವನ್ನು ಕುರಿತಂಥ ಚರ್ಚೆಗಳು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಪಾಣಿನಿಯಲ್ಲೇ 'ಭಕ್ತಿ' ಎಂಬ ಪದ ಕಂಡುಬರು ವುದರಿಂದ ಈ ಪಂಥ ಕ್ರಿಸ್ತಪೂರ್ವದಲ್ಲೇ ಬೇರೂರಿ ನಿಂತಿತ್ತೆಂದು ಭಾವಿಸ ಬಹುದು.

ಭಕ್ತಿಪಂಥದ ಮೂಲಗ್ರಂಥವಾಗಿ ಭಾರತೀಯ ಸಾಹಿತ್ಯದಲ್ಲಿ ಪರಿಗಣಿ ಸಲ್ಪಟ್ಟ ಗ್ರಂಥವೆಂದರೆ ಭಗವದ್ಗೀತೆ. ಇದು ವ್ಯಾಸರಚಿತ ಮಹಾಭಾರತದ

ಭೀಷ್ಮಪರ್ವದಲ್ಲಿರುವುದರಿಂದ ಕ್ರಿಸ್ತಪೂರ್ವದಲ್ಲೇ ರಚಿತವಾಯಿತು ಎನ್ನಬಹುದು. ಆದರೆ ಕ್ರಿಸ್ತಶಕದ ಮೂರು ಅಥವಾ ನಾಲ್ಕನೆಯ ಶತಮಾನದಲ್ಲಿ ಯಾರೋ ಇದನ್ನು ಬರೆದು ಮಹಾಭಾರತದಲ್ಲಿ ಸೇರಿಸಿದರೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಇದೇನೇ ಇದ್ದರೂ ಭಾರತೀಯ ಭಕ್ತಿಸಾಹಿತ್ಯದ ಮೇಲೆ ಭಗವದ್ಗೀತೆಯ ಪ್ರಭಾವ ಅಪಾರವಾಗಿದೆ ಎನ್ನಬಹುದು.

ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ

ಎಂಬ ಮಾತು ಭಕ್ತಿಯೋಗದ ಸಾರದಂತಿದೆ.

ಭಾರತೀಯ ಭಕ್ತಿಪಂಥಕ್ಕೆ ಮೂಲಗ್ರಂಥವೆನ್ನಬಹುದಾದ ಭಾಗವತ ಪುರಾಣದ ಕಾಲ ಮತ್ತು ಕರ್ತೃತ್ವಗಳ ಬಗೆಗೆ ವಾದವಿವಾದಗಳಿವೆ. ಶ್ರೀಕೃಷ್ಣನ ಹಲವು ಲೀಲೆಗಳನ್ನು ಅತ್ಯಂತ ಮಧುರವಾಗಿ ನಿರೂಪಿಸಿರುವ ಭಾಗವತ ಭಕ್ತಿ ಸಾಹಿತ್ಯದ ಮೇಲೆ ಮಾತ್ರವಲ್ಲದೆ ನಾಟಕ, ಯಕ್ಷಗಾನ, ಗೊಂಬೆಯಾಟ, ಚಿತ್ರಕಲೆ, ನೃತ್ಯ ಮುಂತಾದ ಅನೇಕ ಕಲಾರೂಪಗಳ ಮೇಲೂ ತನ್ನ ಪ್ರಭಾವ ಬೀರಿದೆ. ಭಾಗವತ ಸಂಪ್ರದಾಯ ಎಂಬುದು ಭಾರತೀಯ ಸಂಪ್ರದಾಯಗಳಲ್ಲಿ ಅತ್ಯಂತ ಪ್ರಧಾನವಾದುದು.

ಶಂಕರ, ರಾಮಾನುಜ, ಮಧ್ವಾಚಾರ್ಯರುಗಳು ತ್ರಿಮತಾಚಾರ್ಯರಾದರೂ ಸಾಹಿತ್ಯದ ಮೇಲೆ ಅವರು ಬೀರಿದ ಪ್ರಭಾವ ಗಮನಾರ್ಹವಾದುದು. ಶಂಕರಾಚಾರ್ಯರು ತಮ್ಮ ವ್ಯಾಖ್ಯಾನಗ್ರಂಥಗಳಿಂದ, ಸ್ತೋತ್ರಗಳಿಂದ ಭಕ್ತಿಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ರಾಮಾನುಜರೂ ಮಧ್ವಾಚಾರ್ಯರೂ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಭಕ್ತಿಸಾಹಿತ್ಯಕ್ಕೆ ಸ್ಫೂರ್ತಿಯನ್ನು ನೀಡಿದ್ದಾರೆ.

### ದಕ್ಷಿಣ ಭಾರತ

ವೇದ, ಪುರಾಣ, ಭಗವದ್ಗೀತೆ, ಸ್ತೋತ್ರಸಾಹಿತ್ಯ ಮುಂತಾದವು ಭಕ್ತಿ ಸಾಹಿತ್ಯಕ್ಕೆ ಶಾಸ್ತ್ರದ ನೇಪಥ್ಯವನ್ನು ಒದಗಿಸಿದ ಗ್ರಂಥಗಳು. ಪರಮಾರ್ಥ ಪ್ರಾಪ್ತಿಗಾಗಿ ಉತ್ತಮಮಾರ್ಗವೆಂದು ಭಾವಿಸಲಾದ ಭಕ್ತಿಮಾರ್ಗವನ್ನು ಅನುಸರಿಸಿ, ಅನುಭವಿಸಿ, ಸಾಹಿತ್ಯ ಸೃಷ್ಟಿ ಮಾಡಿದ ಕವಿಗಳು ಹೆಚ್ಚಾಗಿ ದೇಶ ಭಾಷೆಗಳಲ್ಲೇ ಕಂಡುಬರುತ್ತಾರೆ. ಇಂಥ ಸಾಹಿತ್ಯ ಮೊಟ್ಟಮೊದಲು ತಮಿಳು ಭಾಷೆಯಲ್ಲಿ ಉಗಮವಾಯಿತೆಂದು ಹೇಳಲಾಗಿದೆ. ಹತ್ತನೆಯ ಶತಮಾನಕ್ಕೆ

ಮುಂಚೆ ತಮಿಳಿನಲ್ಲಿ ರಚಿತವಾದ ಶೈವ ಮತ್ತು ವೈಷ್ಣವ ಸಾಹಿತ್ಯ ಭಾರತ ದೇಶದಲ್ಲೇ ಅತ್ಯಂತ ಪ್ರಾಚೀನವಾದುದೆಂದು ಭಾವಿಸಲಾಗಿದೆ.

**ತಮಿಳು :** ಸಂಗಕಾಲದ (ಕ್ರಿ. ಶ. ೯ನೆಯ ಶತಮಾನಕ್ಕೆ ಮುಂಚೆ) ತಮಿಳು ಸಾಹಿತ್ಯದಲ್ಲಿ ಶೃಂಗಾರ ಮತ್ತು ವೀರ ಪ್ರಧಾನವಾಗಿದ್ದರೂ ಕೆಲವು ಭಕ್ತಿಗೀತೆಗಳು ಕೂಡ ರಚಿತವಾದುವು. ಪರಿಪಾಡಲ್ ಎಂಬ ಕಾವ್ಯದಲ್ಲಿ ವಿಷ್ಣು, ಮುರುಗನ್ ಮುಂತಾದ ದೇವತೆಗಳನ್ನು ಸ್ತುತಿ ಮಾಡುವ ಹಾಡುಗಳಿವೆ. ವಿಷ್ಣುವನ್ನು ಸ್ತುತಿಸುತ್ತಾ :

ಕೆಂಡದಲ್ಲಿರುವ ಬಿಸಿ ನೀನು
ಹೂವಿನ ಕಂಪು ನೀನು
ವಜ್ರದ ಸೊಗಸು ನೀನು
ಮಾತಿನಲ್ಲಡಗಿರುವ ಸತ್ಯ ನೀನು . . .
ಸೂರ್ಯನಲ್ಲಿರುವ ಬೆಳಕು ನೀನು
ಚಂದ್ರನೊಳಗಿನ ತಂಪು ನೀನು
ಎಲ್ಲವೂ ನೀನೇ
ಎಲ್ಲದರಲ್ಲಿರುವ ಪರತತ್ವವೂ ನೀನೇ

–ಎಂದು ಹೊಗಳಲಾಗಿದೆ, ತಮಿಳು ಭಕ್ತಿಸಾಹಿತ್ಯದ ಕಾಲ ೯–೧೦ನೆಯ ಶತಮಾನ ಎಂದು ಭಾವಿಸಬಹುದು. ಶೈವ ಸಮಯಾಚಾರ್ಯರಾದ ನಾಯನ್ಮಾರರು ಮತ್ತು ವೈಷ್ಣವ ಸಮಯಾಚಾರ್ಯರಾದ ಆಳ್ವಾರರು ಬರೆದ ಭಕ್ತಿಗೀತೆಗಳನ್ನು ಸುಮಾರು ೧೧ ನೆಯ ಶತಮಾನದಲ್ಲಿ ಸಂಕಲನ ಮಾಡಲಾಯಿತು. ಶೈವ ಗೀತಗಳಿಗೆ 'ತಿರುಮುರೈ' ಎಂದೂ, ವೈಷ್ಣವ ಗೀತಗಳಿಗೆ 'ದಿವ್ಯ ಪ್ರಬಂಧಮ್' ಎಂದೂ ಹೆಸರು. ಶೈವಕವಿಗಳಲ್ಲಿ ತಿರುಮೂಲರ್ ತುಂಬ ಪ್ರಾಚೀನ ಕವಿ ಎಂದು ಹೇಳಲಾಗಿದೆ. ಈತನ 'ತಿರುಮಂತ್ರ' ಶೈವರಿಗೆ ಪವಿತ್ರಗ್ರಂಥ. "ಭಕ್ತಿ–ಶಿವ ಎಂಬವು ಎರಡಲ್ಲ, ಒಂದೇ" ಎನ್ನುವ ತಿರುಮೂಲರ ಅಭಿಪ್ರಾಯ 'ಭಕ್ತಿಸ್ವರೂಪ ಶಿವನಯ್ಯಾ' ಎಂದು ಬಸವೇಶ್ವರನಲ್ಲೂ ವ್ಯಕ್ತವಾಗಿದೆ. "ಶಿವನಿಗಿಂತ ಶಿವಭಕ್ತರೇ ಮುಖ್ಯರು, ಜಂಗಮ ಸೇವೆ ಮಾಡಿದರೆ ಶಿವಸೇವೆ ಮಾಡಿದಂತೆ" ಎಂದು ತಿರುಮೂಲರು ಹೇಳಿದ್ದಾರೆ.

ತಿರುಜ್ಞಾನಸಂಬಂಧರ್, ಅಪ್ಪರ್ ಮತ್ತು ಸುಂದರರ್ ಹಾಡಿದ ಶೈವ ಭಕ್ತಿಗೀತೆಗಳಿಗೆ 'ತೇವಾರಮ್' ಎಂದು ಹೆಸರು. ಇವನ್ನು ಇಂದಿಗೂ ರಾಗಯುಕ್ತವಾಗಿ ಹಾಡುತ್ತಾರೆ. ತಮಿಳುನಾಡಿನ ದೇವಸ್ಥಾನಗಳಲ್ಲಿ ತಮಿಳು ಹಾಡುಗಳನ್ನೇ ಹೇಳುವ ಸಂಪ್ರದಾಯ ನಡೆದುಬಂದಿದೆ. ಶೈವಕವಿಗಳಲ್ಲಿ

ಮುಖ್ಯನಾದ ಸಂಬಂಧರ್ ಜೈನನಾಗಿದ್ದ ಪಾಂಡ್ಯರಾಜನನ್ನು ತನ್ನ ವಾದದಿಂದ ಸೋಲಿಸಿ ಶೈವನನ್ನಾಗಿ ಮಾಡಿದನೆಂದು ಐತಿಹ್ಯವಿದೆ. ಸಂಗೀತಪ್ರಿಯನಾದ ಅಪ್ಪರ್ ಬರೆದ ಹಾಡುಗಳಲ್ಲಿ ಶಬ್ದಮಾಧುರ್ಯ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಇವನು ಬರೆದ ಹಲವು ರಚನೆಗಳು ತಾಳಯುಕ್ತವಾಗಿ ಹಾಡಲು ತಕ್ಕುವಾಗಿವೆ. ವಿನಯ, ಮೃದುತ್ವ ಸರಳತೆಗಳಿಂದ ಮಹಾತತ್ತ್ವಜ್ಞಾನವನ್ನು ತಿಳಿಸಲು ಯತ್ನಿಸಿದವನು ಅಪ್ಪರ್.

ಲೌಕಿಕ ಜೀವನದ ಎಲ್ಲ ಸೌಖ್ಯಗಳನ್ನೂ ಪಡೆಯುತ್ತಲೇ ಭಗವಂತನ ಪ್ರೀತಿಯನ್ನು ಬಯಸುತ್ತಾ ಗೀತೆಗಳನ್ನು ಬರೆದ ಭಕ್ತ ಸುಂದರರ್. ಈತ 'ತಿರುತ್ತೊಂಡತ್ತೊಗೈ' ಎಂಬ ರಚನೆಯಲ್ಲಿ ಭಕ್ತರ ಹೆಸರುಗಳನ್ನು ಉಲ್ಲೇಖಿಸಿ'ಅವರೆಲ್ಲರಿಗೂ ದಾಸ ನಾನು' ಎಂದು ಹೇಳಿಕೊಂಡಿದ್ದಾನೆ. ಒಂಬತ್ತನೆಯ ಶತಮಾನದವನೆಂದು ಭಾವಿಸಲಾದ ಮಾಣಿಕ್ಯವಾಚಕರ್ ವೀರಶೈವರಿಗೆ ಪರಮಾಚಾರ್ಯನೆಂದು ಹೇಳಲಾಗಿದೆ. ಈತ ಚಿದಂಬರಮ್,ತಿರುಕ್ಕಳುಕ್ಕುನ್ರಮ್ ತಿರುಪ್ಪೆರುನ್ದುರೈ ಮುಂತಾದ ಸ್ಥಳಗಳನ್ನು ಸಂದರ್ಶಿಸಿ ಹಾಡುಗಳನ್ನು ರಚಿಸಿದ್ದಾನೆ. ಇವನ ಕೃತಿಗಳಲ್ಲಿ 'ತಿರುವಾಚಕಮ್' ಮುಖ್ಯವಾದುದು. ಅಮ್ಮಾನೈ, ತೆಳ್ಳೇಣಮ್, ಸಾಳಲ್ ಮುಂತಾದ ಜನಪದ ಮಾಧ್ಯಮದ ಲಯಗಳನ್ನು ಈ ಕವಿ ಭಕ್ತಿಗೀತೆಗಳನ್ನು ರಚಿಸುವಾಗ ಬಳಸಿದ್ದಾನೆ. ''ತಿರುವಾಚಕಕ್ಕೆ ಮನಸ್ಸು ಕರಗದವರು ಯಾವ ವಾಚಕಕ್ಕೂ ಕರಗರು'' ಎಂಬುದು ಗಾದೆ ಮಾತಾಗಿದೆ.

ಶೈವ ಭಕ್ತರಾದ ನಾಯನ್ಮಾರರ ಜೀವಿತ ವಿಶೇಷಗಳನ್ನು ವರ್ಣಿಸುವ 'ಪೆರಿಯಪುರಾಣಮ್' ಹನ್ನೆರಡನೆಯ ಶತಮಾನದ ಪ್ರಾರಂಭಕಾಲದ ಶೇಕ್ಕಿಳಾರ್ ಎಂಬ ಕವಿಯಿಂದ ರಚಿತವಾಯಿತು. ಇದಕ್ಕೆ ತಮಿಳುವೇದವೆಂದೂ'ತಿರುತ್ತೊಂಡರ್ ಪುರಾಣಮ್' (ಶ್ರೀ ಭಕ್ತವಿಜಯ) ಎಂದೂ ಹೆಸರಿದೆ. ಇದು ಶಿವಶರಣರ ಕಥೆಗಳಿಗೆ ಆಕರಗ್ರಂಥ. ಕನ್ನಡ ಮತ್ತು ತೆಲುಗು ಶೈವಕಾವ್ಯಗಳ ಮೇಲೆ ಇದರ ಪ್ರಭಾವವಿದೆ.

ಶೈವಕವಿಗಳಂತೆ ವೈಷ್ಣವ ಆಳ್ವಾರರೂ ಇಡೀ ದಕ್ಷಿಣ ಭಾರತದ ಮತ ಪದ್ಧತಿಗಳ ಮೇಲೆ ಮತ್ತು ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದಾರೆ. 'ಆಳ್ವಾರ್' ಎಂದರೆ ಜ್ಞಾನಸಂಪನ್ನನೆಂದು ಅರ್ಥ. ತಮಿಳುನಾಡಿನ ವೈಷ್ಣವ ಸಂಪ್ರದಾಯದಲ್ಲಿ ಪ್ರಸಿದ್ಧರಾದ ಹನ್ನೆರಡು ಜನ ಆಳ್ವಾರರಿದ್ದಾರೆ.ಪೊಯ್‌ಗೈ ಆಳ್ವಾರ್, ಪೂತತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈ ಆಳ್ವಾರ್, ತಿರುಪ್ಪಾಣಾಳ್ವಾರ್, ತೊಂಡರಡಿಪ್ಪೊಡಿ ಆಳ್ವಾರ್, ತಿರುಮಂಗೈ ಆಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ನಮ್ಮಾಳ್ವಾರ್ ಮತ್ತು

ಮಧುರಕವಿ ಎಂಬುವವರೇ ಈ ಹನ್ನೆರಡು ಜನ ಭಕ್ತರು. ಇವರ ರಚನೆಗಳನ್ನು ನಾದಮುನಿ ಎಂಬುವವನು ಸಂಕಲನ ಮಾಡಿದನು. ಅದಕ್ಕೆ 'ನಾಲಾಯಿರ ದಿವ್ಯಪ್ರಬಂಧಮ್' ಎಂದು ಹೆಸರು. ಇದು ಶ್ರೀವೈಷ್ಣವರಿಗೆ ಪಾರಾಯಣ ಗ್ರಂಥವಾಗಿದೆ.

ಪೆರಿಯಾಳ್ವಾರ್ ತನ್ನ ಗೀತಗಳಲ್ಲಿ ಕೃಷ್ಣನನ್ನು ಬಾಲಕನನ್ನಾಗಿ ಊಹಿಸಿಕೊಂಡು ವಾತ್ಸಲ್ಯಭಕ್ತಿಯನ್ನು ತೋರಿದ್ದಾನೆ :

ಮಾಣಿಕ್ಯವನು ಕಟ್ಟಿ ವಜ್ರವನ್ನೂ ಕಟ್ಟಿ
ಹೊನ್ನಿನ ಬಣ್ಣದ ತೊಟ್ಟಿಲನ್ನು
ನಿನಗೆ ಬ್ರಹ್ಮನು ಕಳಿಸಿದನು
ವಾಮನರೂಪನೇ ಲಾಲಿ ಲಾಲಿ
ಲೋಕವ ಅಳೆದವನೇ ಲಾಲಿ ಲಾಲಿ

ಆಂಡಾಳ್ ಎಂಬ ಲೇಖಿಕಿಯು ಆಳ್ವಾರರಲ್ಲಿ ಸೇರಿರುವುದು ಗಮನಾರ್ಹ. ಈಕೆ ರಚಿಸಿದ ಮೂವತ್ತು ಪಾಶುರಗಳು ಮಧುರ ಭಕ್ತಿಯಿಂದ ಕೂಡಿದ ಸುಂದರ ಗೀತೆಗಳಾಗಿವೆ. ಕೃಷ್ಣನ ಗೋಪಿಕೆಯರಲ್ಲಿ ತಾನೂ ಒಬ್ಬಳೆಂದು ಊಹಿಸಿಕೊಂಡು ಆಂಡಾಳ್ ಹಾಡುಗಳನ್ನು ರಚಿಸಿದ್ದಾಳೆ.

ಹದಿನೈದನೆಯ ಶತಮಾನದವನಾದ ಅರುಣಗಿರಿನಾಥ ಮುರುಗನ ಭಕ್ತರು ಹಾಡುವ 'ತಿರುಪ್ಪುಗಳ್' ಎಂಬ ಭಕ್ತಿಗೀತೆಗಳನ್ನು ರಚಿಸಿದ. ಈ ಕವಿ ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಪಂಡಿತ. ಮೂರು ಸಾವಿರ ಗೀತೆಗಳಿಂದ ಕೂಡಿದ ಈ ಗ್ರಂಥ ಇಂದಿಗೂ ಜನಪ್ರಿಯವಾಗಿದೆ.

**ಕನ್ನಡ :** ದಕ್ಷಿಣ ಭಾರತದಲ್ಲಿ ತಮಿಳುಭಾಷೆಯಾದಮೇಲೆ ಪ್ರಾಚೀನತೆಯಲ್ಲಿ ಕನ್ನಡವನ್ನು ಹೇಳಬೇಕು. ಭಕ್ತಿಸಾಹಿತ್ಯದ ವಿಷಯದಲ್ಲೂ ನಾಯನ್ಮಾರರು ಮತ್ತು ಆಳ್ವಾರರ ಅನಂತರ ಕನ್ನಡನಾಡಿನ ಶಿವಶರಣರು ಮತ್ತು ಹರಿದಾಸರನ್ನು ಹೆಸರಿಸಬೇಕು. ದೇವರದಾಸಿಮಯ್ಯನ ಕಾಲದಿಂದ ಕನ್ನಡದ ಅನುಭಾವಸಾಹಿತ್ಯ ಬೆಳೆದುಬಂದು ಹರಿದಾಸರಲ್ಲಿ ಪರಿಪಕ್ವಸ್ಥಿತಿಯನ್ನು ತಲುಪಿತು. ಅಲ್ಲಮಪ್ರಭುವಿನ ಬೆಡಗಿನವಚನಗಳು ಭಕ್ತಿ ಮತ್ತು ಜ್ಞಾನಗಳಪೈಕಿ ಜ್ಞಾನಕ್ಕೆ ಹೆಚ್ಚಿನ ಮಹತ್ವವನ್ನು ನೀಡಿವೆ. ಬಸವೇಶ್ವರ ಭಕ್ತಿಯೇ ಮಾನವಾಕಾರ ತಳೆದಂತಾಗಿ 'ಭಕ್ತಿಯ ಭಂಡಾರಿ ಬಸವ' ಎಂದು ಪ್ರಶಂಸೆಪಡೆದಿದ್ದಾನೆ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಮಾತಿನಲ್ಲಿ ಭಕ್ತರ ಭಕ್ತನಾಗಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ರಾಂತಿಗೆ ಪಾತ್ರನಾದ ಮಹಾಪುರುಷನ ವಿನಯ ಕಂಡುಬರುತ್ತದೆ. ಅಕ್ಕಮಹಾದೇವಿಯಂಥಾದ ಶಿವಶರಣೆ

ಯರು ಕೂಡ ಸಾಹಿತ್ಯಸೃಷ್ಟಿಗೆ ತೊಡಗಿ ಅಪೂರ್ವವಾದ ರೀತಿಯಲ್ಲಿ ವಚನಕಾರ್ತಿಯರ ಒಂದು ಬಳಗವನ್ನು ಸಾಹಿತ್ಯಕ್ಕೆ ನೀಡಿದರು. ಶಿವಶರಣರ ಜೀವನ ಚರಿತ್ರೆಗಳನ್ನು ಹರಿಹರ ಬರೆದಾಗ ತಮಿಳಿನ ಶೈವಸಾಹಿತ್ಯದ ನೆರವನ್ನು ಪಡೆದ ವಿಷಯವನ್ನು ಇಲ್ಲಿ ನೆನೆಯಬೇಕಾಗಿದೆ.

ಕನ್ನಡದ ಹರಿದಾಸಸಾಹಿತ್ಯ ಭಕ್ತಿಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಯಾಗಿದೆ. ಪುರಂದರದಾಸರಿಗಿಂತ ಮೊದಲೇ ದಾಸಸಾಹಿತ್ಯಕ್ಕೆ ಉನ್ನತಮಟ್ಟದ ರಚನೆಗಳು ಸೇರ್ಪಡೆಯಾದುವು. ಹದಿನೈದನೆಯ ಶತಮಾನದ ಶ್ರೀಪಾದರಾಯರು ದಾಸವಾಙ್ಮಯಕ್ಕೆ ಮೊದಲಿಗರೆಂಬ ಹೆಸರು ಪಡೆದರು.ವ್ಯಾಸರಾಯರು ಮತ್ತು ವಾದಿರಾಜರುಗಳು ಪುರಂದರದಾಸರಿಗಿಂತ ಮೊದಲೇ ದಾಸಸಾಹಿತ್ಯಕ್ಕೆ ಭದ್ರವಾದ ಬುನಾದಿ ಹಾಕಿದರು. ವ್ಯಾಸಕೂಟ ಮತ್ತು ದಾಸಕೂಟ ಕನ್ನಡ ಹರಿದಾಸಸಾಹಿತ್ಯಕ್ಕೆ ವ್ಯವಸ್ಥಾರೂಪವನ್ನು ನೀಡಿದುವು ; ಅದೊಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಬೆಳೆಯಲು ನೆರವಾದುವು.

**ತೆಲುಗು :** ತೆಲುಗಿನ ಭಕ್ತಿಸಾಹಿತ್ಯ ಕನ್ನಡದಂತೆ ಹನ್ನೆರಡನೆಯ ಶತಮಾನದಲ್ಲೇ ಪ್ರಾರಂಭವಾಗುತ್ತದೆ. 'ಶೈವಪಂಡಿತತ್ರಯ' ಎಂಬ ಹೆಸರಿನ ಶ್ರೀಪತಿಪಂಡಿತ, ಮಲ್ಲಿಕಾರ್ಜುನಪಂಡಿತ ಮತ್ತು ಶಿವಲೆಂಕಮಂಚನಪಂಡಿತ ಆಂಧ್ರದವರು. ಇವರಲ್ಲಿ ಮಂಚನಪಂಡಿತನ ಹೆಸರು ಕನ್ನಡ ವಚನಕಾರರಲ್ಲೂ ಸೇರಿದೆ. ಮಲ್ಲಿಕಾರ್ಜುನಪಂಡಿತ ಹಲವು ಕೃತಿಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಕೆಲವು ವಚನಗಳು ಮತ್ತು ಪದಗಳು ಸೇರಿವೆ. ಆದರೆ ಈಗ 'ಶಿವತತ್ತ್ವಸಾರ' ವೆಂಬ ಕಂದಪದ್ಯ ಸಂಕಲನವೊಂದು ಮಾತ್ರ ಲಭಿಸುತ್ತದೆ.

ಹದಿಮೂರನೆಯ ಶತಮಾನಕ್ಕೆ ಸೇರಿದ ಪಾಲ್ಕುರಿಕೆ ಸೋಮನಾಥ ತೆಲುಗಿನ ದೇಶಿಕವಿಗಳಲ್ಲಿ ಪ್ರಮುಖಸ್ಥಾನ ಪಡೆದಿದ್ದಾನೆ. ಇವನ 'ಬಸವಪುರಾಣ' ಕರ್ನಾಟಕದ ಶಿವಶರಣರು, ತಮಿಳುನಾಡಿನ ನಾಯನ್ಮಾರರು ಮತ್ತು ಆಂಧ್ರದ ಶಿವಭಕ್ತರ ಚರಿತ್ರೆಗಳನ್ನೊಳಗೊಂಡಿದೆ. ಈ ಕವಿಯ ರಚನೆಗಳಲ್ಲಿ 'ಉದಾಹರಣ' ಎಂಬ ವಿಶಿಷ್ಟ ಕಾವ್ಯಪ್ರಕಾರ ಸೇರಿದೆ. ಇದು ಸ್ತುತಿರೂಪದಲ್ಲಿದ್ದು ಭಕ್ತಿಯ ಅಭಿವ್ಯಕ್ತಿಗೆ ಅನಂತರ ಕಾಲದಲ್ಲಿ ಅನೇಕ ಕವಿಗಳಿಂದ ಬಳಕೆಯಾಗಿದೆ. ಪಾಲ್ಕುರಿಕೆ ಸೋಮನಾಥ ಸ್ತುತಿರೂಪದ ಭಕ್ತಿಗೀತೆಗಳನ್ನು ಬರೆದದ್ದು ಮಾತ್ರವಲ್ಲದೆ ತನ್ನ ಕಾಲಕ್ಕೆ ಮುಂಚೆಯೇ ತೆಲುಗಿನಲ್ಲಿದ್ದ ಹಲವು ಬಗೆಯ ಪದಗಳನ್ನು ಹೆಸರಿಸಿದ್ದಾನೆ.

ತೆಲುಗಿನ ವೈಷ್ಣವಭಕ್ತಿಸಾಹಿತ್ಯದಲ್ಲಿ ಮೊದಲು ಹೆಸರಿಸಬೇಕಾದವನು ಕೃಷ್ಣಮಾಚಾರ್ಯ. ''ಸಿಂಹಗಿರಿ ವಚನಗಳು'' ಎಂಬ ತಾಳಪ್ರಧಾನ ರಚನೆ

ಗಳನ್ನು ಮಾಡಿದ್ದಲ್ಲದೆ ಈತ ಅಭಿನಯಯೋಗ್ಯವಾದ ಭಕ್ತಿಗೀತೆಗಳನ್ನೂ ಬರೆದಿದ್ದಾನೆ. ಪುರಂದರದಾಸರಿಗಿಂತ ಮುಂಚೆ ವಿಸ್ತೃತವಾಗಿ ಕೀರ್ತನೆಗಳನ್ನು ಬರೆದು "ಪದಕವಿತಾ ಪಿತಾಮಹ" ಎಂಬ ಬಿರುದನ್ನು ಪಡೆದ ಅನ್ನಮಾಚಾರ್ಯರು ತೆಲುಗು ಭಕ್ತಿಸಾಹಿತ್ಯದಲ್ಲಿ ಮೇರು ಸದೃಶರು. ಇವರು ಶೃಂಗಾರ ಸಂಕೀರ್ತನಗಳನ್ನೂ ಅಧ್ಯಾತ್ಮ ಸಂಕೀರ್ತನಗಳನ್ನೂ ವೇಂಕಟೇಶ್ವರನ ನಾಮಾಂಕಿತದಲ್ಲಿ ಬರೆದಿದ್ದಾರೆ. ಸಾಹಿತ್ಯ, ಸಂಗೀತ, ಭಕ್ತಿ, ಜೀವನಾನುಭವ, ಛಂದಸ್ಸುಗಳ ವೈವಿಧ್ಯ, ಸಾಂಸ್ಕೃತಿಕ ಮಹತ್ವ, ಅಂತರಂಗದ ಅಭಿವ್ಯಕ್ತಿ ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಕಂಡುಬರುತ್ತದೆ.

ಕೀರ್ತನೆಗಳನ್ನು ಬರೆಯದಿದ್ದರೂ ಕೀರ್ತನಸಾಹಿತ್ಯದಷ್ಟೇ ಜನಪ್ರಿಯವಾದ ಮಹಾಭಾಗವತವನ್ನು ಬರೆದ ಪೋತನನನ್ನೂ (೧೫ನೆಯ ಶ.) ಇಲ್ಲಿ ನೆನೆಯಬೇಕು. ಚಂಪೂ ಮಾಧ್ಯಮದಲ್ಲಿ ಪೋತನ ಬರೆದ ಭಾಗವತ ತೆಲುಗು ಭಕ್ತಿಸಾಹಿತ್ಯದಲ್ಲಿ ಅತ್ಯುನ್ನತ ಸ್ಥಾನ ಪಡೆದಿದೆ. ಇದಕ್ಕೆ ಕಾರಣ ಪೋತನನ ಮಧುರ ಶೈಲಿ. ಇದರ ಪದ್ಯಗಳು ಯಕ್ಷಗಾನ, ಹರಿಕಥೆ ಮುಂತಾದ ಜನಪ್ರಿಯ ಮಾಧ್ಯಮಗಳ ಮೂಲಕವೂ ಆಂಧ್ರದಲ್ಲಿ ಪ್ರಚಾರ ಪಡೆದಿವೆ.

**ಮಲಯಾಳಮ್ :** ಪ್ರಾಚೀನ ಮತ್ತು ಆಧುನಿಕ ಮಲಯಾಳ ಸಾಹಿತ್ಯಗಳ ಸಂಧಿಕಾಲದಲ್ಲಿ ಚೆರುಶ್ಶೇರಿ ಎಂಬ ಕವಿ 'ಕೃಷ್ಣಗಾಥಾ' ಎಂಬ ಭಕ್ತಿ ಕಾವ್ಯವನ್ನು ರಚಿಸಿದ್ದಾನೆ. ಹದಿನೈದನೆಯ ಶತಮಾನದ ಈ ಕೃತಿ 'ಗಾಥಾ' ಎಂಬ ಕಾವ್ಯಶೈಲಿಯಲ್ಲಿ ರಚಿತವಾದುದು. 'ಗಾಥಾ' ಎಂದರೆ ಹಾಡು. ಜನಪದಗೀತೆಗಳ ಮಾದರಿಯಲ್ಲಿರುವ ಜನಪ್ರಿಯಛಂದಸ್ಸಿಗೆ ಕಾವ್ಯಯೋಗ್ಯತೆಯನ್ನು ಕೊಟ್ಟು ಜನಪ್ರಿಯಗೊಳಿಸಿದವನು ಚೆರುಶ್ಶೇರಿ. ಭಾಗವತ ಪುರಾಣವನ್ನು ಆಧಾರವಾಗಿಟ್ಟುಕೊಂಡು ಚೆರುಶ್ಶೇರಿ ಬರೆದ ಕೃಷ್ಣಗಾಥಾ ಸೌಂದರ್ಯ, ಪ್ರೇಮ ಮತ್ತು ಆನಂದಗಳ ಪ್ರತೀಕವಾಗಿ ಕೃಷ್ಣನನ್ನು ಚಿತ್ರಿಸುತ್ತದೆ.

ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿದ ಎಳುತ್ತಚ್ಚನ್ ಮಲಯಾಳಸಾಹಿತ್ಯದಲ್ಲೇ ಅತ್ಯಂತ ಜನಪ್ರಿಯ ಕವಿ. 'ಹರಿನಾಮ ಸಂಕೀರ್ತನಂ', 'ಅಧ್ಯಾತ್ಮ ರಾಮಾಯಣ ಕಿಳಿಪಾಟ್ಟು', 'ಮಹಾಭಾರತ ಕಿಳಿಪಾಟ್ಟು'. 'ಭಾಗವತ' ಮುಂತಾದ ಕೃತಿಗಳನ್ನು ಬರೆದ. ಮುಖ್ಯವಾಗಿ ಕಿಳಿಪಾಟ್ಟು ಎಂಬ ಸಾಹಿತ್ಯಪ್ರಕಾರಕ್ಕೆ ಎಳುತ್ತಚ್ಚನ್‌ನ ಕೊಡುಗೆ ಗಮನಾರ್ಹ. ಆಧ್ಯಾತ್ಮಿಕ ವಿಚಾರಗಳನ್ನು ಗಿಳಿಯ ಮೂಲಕ ಅಪ್ರತ್ಯಕ್ಷವಾಗಿ ಕಥಾನಿರೂಪಣೆ ಮಾಡಿದ್ದು ಇಲ್ಲಿಯ ವಿಶೇಷ. ಮಲಯಾಳ ಸಾಹಿತ್ಯದಲ್ಲಿ ಎಳುತ್ತಚ್ಚನ್ ಹೊಸಯುಗವನ್ನು ಪ್ರವರ್ತಿಸಿದ ಮಹಾಕವಿ.

## ಪಶ್ಚಿಮ ಭಾರತ

ಇಂದಿನ ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳು ಸೇರಿರುವ ಪಶ್ಚಿಮ ಭಾರತದಲ್ಲಿ ಅನೇಕ ಸಂತಕವಿಗಳು ತಮ್ಮ ರಚನೆಗಳಿಂದ ಭಕ್ತಿ ಸಾಹಿತ್ಯಕ್ಕೆ ಪುಷ್ಟಿಯನ್ನು ನೀಡಿದರು. ಇವರಲ್ಲಿ ಅನೇಕರು ಪುರಂದರದಾಸರ ಕಾಲಕ್ಕೆ ಅನಂತರವೇ ಬರುವುದರಿಂದ, ಪ್ರಾರಂಭಕಾಲದಿಂದ ಹದಿನೈದನೆಯ ಶತಮಾನದ ಕೊನೆಯವರೆಗೂ ಇದ್ದ ಭಕ್ತಿಸಾಹಿತ್ಯ ನಿರ್ಮಾಪಕರನ್ನು ಪ್ರಮುಖವಾಗಿ ಇಲ್ಲಿ ಸ್ಮರಿಸಿದೆ.

ಮಹಾರಾಷ್ಟ್ರದ ಭಕ್ತಿಸಾಹಿತ್ಯದ ಪಿತಾಮಹನೆಂದು ಸಂತ ಜ್ಞಾನೇಶ್ವರನನ್ನು ಕರೆಯಲಾಗಿದೆ. ಸಮಕಾಲೀನ ಸಂತರಾದ ನಾಮದೇವ ಮುಂತಾದವರಿಗೆ ಸ್ಫೂರ್ತಿ ನೀಡಿದವನು ಜ್ಞಾನೇಶ್ವರ. ಸಮಸ್ತ ಪ್ರಪಂಚವೂ ಒಂದು ಕುಟುಂಬ ಎಂದು ಭಾವಿಸಿ ವಿಶ್ವಮಾನವಪ್ರೇಮವನ್ನು ಬೋಧಿಸಿದ. ಭಾಗವತ ಧರ್ಮದ ನೇತಾರನೆಂದು ಮಹಾರಾಷ್ಟ್ರದಲ್ಲಿ ಜ್ಞಾನದೇವ ಹೆಸರು ಪಡೆದಿದ್ದಾನೆ. ಈತ ತನ್ನ ಸೋದರ ಸೋದರಿಯರೊಂದಿಗೆ ಪಂಡರಾಪುರಕ್ಕೆ ಹೋದಾಗ ವಿಟ್ಠಲನ ಭಕ್ತನಾದ ನಾಮದೇವನ ಪರಿಚಯವಾಯಿತು. ಇವರಿಬ್ಬರೂ ಆತ್ಮೀಯ ಸ್ನೇಹಿತರಾಗಿ ಉತ್ತರ ಭಾರತದಲ್ಲೆಲ್ಲಾ ಸಂಚರಿಸಿದರು. ಇಬ್ಬರೂ ತಮ್ಮ ಕೀರ್ತನೆಗಳಿಂದ ಭಕ್ತಿಸಾಹಿತ್ಯವನ್ನು ಸಮೃದ್ಧಗೊಳಿಸಿದರು. ನಾಮದೇವ ಅಭಂಗ ವೃತ್ತಗಳಿಗೆ ಹೆಸರುವಾಸಿಯಾಗಿದ್ದಾನೆ. ಅನುಭಾವ ಸಾಹಿತ್ಯದಲ್ಲಿ ಈತನದು ದೊಡ್ಡ ಹೆಸರು. "ದೇವ ನೀನು ನನ್ನಿಂದ ತಪ್ಪಿಸಿಕೊಂಡು ಓಡುತ್ತಿರುವೆ. ಪ್ರೇಮವೆಂಬ ಹಗ್ಗದಿಂದ ನಿನ್ನ ಕಾಲನ್ನು ಬಂಧಿಸಿ ಕರೆತರುವೆ" ಎಂದು ಮಧುರ ಭಕ್ತಿಯ ಮೂಲಕ ತನ್ನ ಅಂತರಂಗವನ್ನು ಅಭಿವ್ಯಕ್ತಿಗೊಳಿಸಿದ್ದಾನೆ ನಾಮದೇವ.

ಹದಿಮೂರು ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ 'ಆಧ್ಯಾತ್ಮಿಕ ಲೋಕಸತ್ತ' ಎಂಬ ಹೆಸರಿನಲ್ಲಿ ಜ್ಞಾನದೇವ ಮತ್ತು ನಾಮದೇವರ ಪ್ರಭಾವದಿಂದ ಅನೇಕ ಭಕ್ತಕವಿಗಳು ರಚನೆಗೆ ತೊಡಗಿದರು. ವಿಸೋಭಾ ಖೇಚರ್, ಪರಿಸಾ ಭಾಗವತ್, ಗೋರಾಕುಂಭಾರ್ ಮುಂತಾದವರು ಈ ಕಾಲಕ್ಕೆ ಸೇರಿದವರು. ಈ ಭಕ್ತರ ಬಗೆಗಿನ ಹಲವು ಕಥೆಗಳು ಪ್ರಚಾರದಲ್ಲಿವೆ. ಕರ್ನಾಟಕದ ಶಿವಶರಣರಂತೆ ಬೇರೆ ಬೇರೆ ಜಾತಿಗಳಿಗೆ ಸೇರಿದ ಭಕ್ತರು ಸಾಹಿತ್ಯ ಸೃಷ್ಟಿಗೆ ತೊಡಗಿ ಸಾಮಾನ್ಯಜನರಿಗೂ ಸಾಹಿತ್ಯವನ್ನು ನೀಡಿದ್ದನ್ನು ಮಹಾರಾಷ್ಟ್ರದಲ್ಲೂ ನೋಡಬಹುದು. ನರಹರಿಸೋನಾರ್, ಚೋಖಾಮೇಳಾ, ಸೇನಾನ್ಹಾವೀ ಮುಂತಾದವರು ಈ ಕಾಲದ ಕವಿಗಳಲ್ಲಿ ಕೆಲವರು.

ಜ್ಞಾನದೇವ ಆದಮೇಲೆ ಹೆಸರಿಸಬೇಕಾದ ಪ್ರಸಿದ್ಧ ಸಂತರಲ್ಲಿ
ಒಬ್ಬನು(ಸು.೧೫೪೮). ಸಾಮಾನ್ಯ ಜನರ ಭಾಷೆಯಲ್ಲಿ ಭಾಗವತಧ
ಜ್ಞಾನಸಾರವನ್ನೂ ಪ್ರಚಾರ ಮಾಡಲು ಬದುಕನ್ನೆಲ್ಲಾ ಮೀಸಲಿಟ್ಟ
ಪ್ರಾಣಿಗಳಲ್ಲಿ ಪರಮಾತ್ಮನನ್ನು ಕಾಣುವುದೇ ಭಕ್ತಿಯ ಪರಮಾ
ಭಾವಿಸಿದವನು ಏಕನಾಥ. ಭಾಗವತದ ಹನ್ನೊಂದನೆಯ ಸ್ಕಂಧವ
ಎಂಬ ಜಾನಪದ ಮಟ್ಟಿನಲ್ಲಿ ಬರೆದ. ಓವಿ ಹಾಗೂ ಅಭಂಗಗಳಿಂ
ಯಶಸ್ಸನ್ನು ಪಡೆದು ಅನಂತರದ ಕವಿಗಳ ಮೇಲೂ ಪ್ರಭಾವವನ
ವನು ಏಕನಾಥ.

ತುಕಾರಾಂ (ಸು. ೧೫೯೮–೧೬೪೯) ಮಹಾರಾಷ್ಟ್ರದ ಸಂ
ಅಗ್ರಮಾನ್ಯನೆಂದು ಭಾವಿಸಲಾಗಿದೆ. ಈತನ ಮನೆತನದವರೆಲ್ಲರೂ
ಪುರದ ವಿಠೋಬಾನ ಭಕ್ತರಾಗಿದ್ದರು. ತುಕಾರಾಮ್‌ಗೆ ನಾಮದೇ
ಬಂದು ಶತಕೋಟಿ ಅಭಂಗಗಳನ್ನು ರಚಿಸುವಂತೆ ಸೂಚಿಸಿದನೆಂ
ವಿದೆ. ಈತನ ಅಭಂಗಗಳ ಜನಪ್ರಿಯತೆಯನ್ನು ಸಹಿಸದ ಪಂಡಿತ
ವಿಧವಾಗಿ ತೊಂದರೆ ಕೊಟ್ಟರು. ಅವನ್ನೆಲ್ಲ ಸಹಿಸಿಕೊಂಡು ಈತ
ಗಳನ್ನು ಹೇರಳವಾಗಿ ರಚಿಸಿದ. ಭಗವಂತನ ಸ್ಮರಣೆಯೇ ಆತನನ
ಸಾಧನವೆಂದು ನಂಬಿದ. ಭಗವಂತನ ಪ್ರೀತಿಯನ್ನು ಗಳಿಸಲು ಜ
ಅಡ್ಡಿಯಾಗುವುದಿಲ್ಲವೆಂದು ಸಾರಿದ. ಈತನ ವಾಣಿ ಬೆಣ್ಣೆಗಿಂ
ವಾದುದು ಕಲ್ಲಿಗಿಂತ ಕಠೋರವಾದುದು ಎಂದು ಹೆಸರಾಯಿತು.

ಗುಜರಾತಿನ ಭಕ್ತಿಸಾಹಿತ್ಯದ ಮೂಲಪುರುಷನೆಂಬ ಹೆಸರು
ಮೆಹತಾಗೆ ಸಲ್ಲುತ್ತದೆ. ಈತನ ರಚನೆಗಳು ಆ ಕಾಲದ ಸಾಮಾಜಿ
ಗಳಿಗೆ ವಿರುದ್ಧವಾಗಿದ್ದು ಪ್ರತಿಭಟನೆಗೆ ಕಾರಣವಾದುವು. ಸಾಮ
ರಿಗೂ ತಲುಪುವ ಸರಳ ಶೈಲಿಯಲ್ಲಿ ಮಧುರಭಕ್ತಿಯನ್ನು ಪ್ರಚ
ಕವಿ ನರಸಿಂಹಮೆಹತಾ. ಗಾಂಧೀಜಿಗೆ ಅತ್ಯಂತ ಪ್ರಿಯವಾದ
ಜನತೋ..." ಭಜನಗೀತವನ್ನು ಬರೆದದ್ದು ಈ ಕವಿಯೇ. ಜ
ಗೀತಗೋವಿಂದದ ಪ್ರಭಾವ ನರಸಿಂಹನ ಮೇಲೆ ಆಗಿದ್ದು, ನರಸಿಂ
ದಲ್ಲಿರುವ ನಾಟಕೀಯತೆ ಮತ್ತು ಮಧುರಭಕ್ತಿಗೆ ಜಯದೇವ
ಕಾರಣವಾಗಿದೆ ಎಂದು ಭಾವಿಸಲಾಗಿದೆ. ಕೃಷ್ಣನನ್ನು ಬಾಲಕನಾ
ವಯಸ್ಕನಾಗಿ, ಗೋಪಿಕಾಪ್ರಿಯನಾಗಿ, ಪರಿಪೂರ್ಣಜ್ಞಾನದ ಸ
ತನ್ನ ಗೀತೆಗಳಲ್ಲಿ ನರಸಿಂಹಮೆಹತಾ ನಿರೂಪಿಸಿದ್ದಾನೆ. ವಿವಿಧ
ರಚನೆಗಳಿಗೆ ಈ ಕವಿ ಹಲವು ಛಂದಸ್ಸುಗಳನ್ನು ಬಳಸಿದ್ದಾನೆ.

ಕೆಲವನ್ನು ಗರ್ಭಾ-ಎಂಬ ಜನಪದ ಕುಣಿತಕ್ಕೆ ಬಳಸಬಹುದು. ಅನಂತರ ಕಾಲದ ಭಕ್ತಿಸಾಹಿತ್ಯದ ಮೇಲೆ ಈ ಕವಿ ಬೀರಿದ ಪ್ರಭಾವ ಗಣನೀಯವಾಗಿದೆ.

## ಉತ್ತರ ಭಾರತ

ಉತ್ತರ ಭಾರತದ ಕಾಶ್ಮೀರಿ, ಪಂಜಾಬಿ ಮುಂತಾದ ಭಾಷೆಗಳಲ್ಲಿ ಮತ್ತು ಹಿಂದಿಯಲ್ಲಿ ಹದಿಮೂರು–ಹದಿನಾಲ್ಕನೆಯ ಶತಮಾನಗಳಿಂದ ಈಚೆಗೆ ಸಮೃದ್ಧವಾದ ಭಕ್ತಿಸಾಹಿತ್ಯ ಬೆಳೆದಿದೆ. ಈ ಭಾಷೆಗಳು ದಕ್ಷಿಣ ಭಾರತದ ಭಾಷೆಗಳಷ್ಟು ಪ್ರಾಚೀನವಾದುವಲ್ಲ. ಆದುದರಿಂದ ತೀರ ಪ್ರಾಚೀನ ವಾದ ಭಕ್ತಿಸಾಹಿತ್ಯ ಸಿಕ್ಕುವುದಿಲ್ಲ. ಎರಡನೆಯದಾಗಿ ಮುಸ್ಲಿಮ್ ಧರ್ಮದ ಪ್ರಭಾವ ಈ ಭಾಷೆಗಳ ಭಕ್ತಿಸಾಹಿತ್ಯದ ಮೇಲೆ ತಕ್ಕಮಟ್ಟಿಗೆ ಆಗಿದೆ. ಮುಖ್ಯ ವಾಗಿ ಸೂಫೀ ತತ್ತ್ವ ಅಲ್ಲಿಯ ಭಕ್ತಿಸಾಹಿತ್ಯದ ಮೇಲೆ ಪ್ರಭಾವವನ್ನು ಬೀರಿದೆ.

**ಕಾಶ್ಮೀರಿ :** ಪ್ರಾಚೀನ ಕಾಲದಲ್ಲಿ ಕಾಶ್ಮೀರ ಸಂಸ್ಕೃತಸಾಹಿತ್ಯ ಮತ್ತು ಹಿಂದೂಧರ್ಮಗಳಿಗೆ ಪ್ರಧಾನ ಕೇಂದ್ರವಾಗಿತ್ತು. ಹದಿಮೂರು–ಹದಿನಾಲ್ಕ ನೆಯ ಶತಮಾನಗಳಿಂದ ಮಹಮ್ಮದೀಯರ ಆಳ್ವಿಕೆ ಪ್ರಾರಂಭವಾಗಿ ಸಂಸ್ಕೃತ ಸಾಹಿತ್ಯ ಸಂಪ್ರದಾಯ ಮತ್ತು ಹಿಂದೂ ಸಾಂಸ್ಕೃತಿಕ ಸಂಪ್ರದಾಯ ಅವನತಿ ಪಡೆದುವು. ಪ್ರಾಚೀನಕಾಶ್ಮೀರಸಾಹಿತ್ಯಕ್ಕೆ ಮಾತ್ರವಲ್ಲದೆ ಇಡೀ ಕಾಶ್ಮೀರ ಸಾಹಿತ್ಯಕ್ಕೇ ಅಲಂಕಾರವೆಂದು ಹೇಳಲಾಗಿರುವುದು ಲಾಲ್‌ಡೇಡ್(ಲಲ್ಲೇಶ್ವರಿ) ಕಾವ್ಯಸಮುದಾಯ. ಹದಿನಾಲ್ಕನೆಯ ಶತಮಾನದ ಈ ಕವಯಿತ್ರಿ ಜನ ಸಾಮಾನ್ಯರ ಭಾಷೆಯಲ್ಲಿ ವಿನೂತನ ಕಾವ್ಯಸಂಪ್ರದಾಯಗಳಿಗೆ ಅಂಕುರಾರ್ಪಣ ಮಾಡಿ ಕಾಶ್ಮೀರಶೈವಸಂಪ್ರದಾಯವನ್ನು ಅದರಲ್ಲಿ ಅಡಕಗೊಳಿಸಿದಳು. ಪ್ರಧಾನವಾಗಿ ಧಾರ್ಮಿಕ ಕಾವ್ಯವನ್ನು ಬರೆದ ಲಲ್ಲೇಶ್ವರಿ ಕಾಶ್ಮೀರ ಕಣಿವೆಯ ಹಿಂದೂ ಮತ್ತು ಮುಸ್ಲಿಮ್ ಕವಿಗಳ ಮೇಲೆ ತನ್ನ ಪ್ರಭಾವ ಬೀರಿದ್ದಾಳೆ. ನೂಂಡ್ ಋಷಿ ಲಲ್ಲಾದೇವಿಯನ್ನು ಕುರಿತು ಬರೆಯುತ್ತಾ :

> ಲಲ್ಲಾ ಅಮೃತವನ್ನು ಕುಡಿದು
> ದೇವರ ಮಡಿಲಲ್ಲಿ ಸ್ಥಾನ ಪಡೆದಳು
> ದೇವರೇ ಅಂಥ ಸ್ಥಾನವನ್ನೇ ನನಗೂ ದಯಪಾಲಿಸು

ಎಂದು ಬೇಡಿಕೊಂಡಿದ್ದಾನೆ.

ಪ್ರಾಚೀನ ಹಿಂದೂ ಸಂಪ್ರದಾಯವನ್ನು ಮುಂದುವರಿಸಿರುವುದು, ಹಿಂದೂಗಳಿಗೂ ಮುಸ್ಲಿಮ್‌ಗಳಿಗೂ ಪ್ರೀತಿಪಾತ್ರಳಾಗಿರುವುದು, ಗಹನವಾದ ತತ್ತ್ವವನ್ನು ಸರಳವಾದ ಮಾತುಗಳಲ್ಲಿ, ಸಾಮಾನ್ಯಜನರಿಗೆ ಅರ್ಥವಾಗುವ

ರೀತಿಯಲ್ಲಿ ಹೇಳಿರುವುದು ಲಲ್ಲಾದೇವಿಯ ಜನಪ್ರಿಯತೆಗೆ ಕಾರಣವಾಯಿತು. ಪ್ರಾಚೀನಸಂಪ್ರದಾಯವನ್ನು ಸಮಕಾಲೀನ ಸಮಾಜಕ್ಕೆ ವಿನೂತನ ರೀತಿಯಲ್ಲಿ ನೀಡುವುದು ಆಕೆಯ ಉದ್ದೇಶವಾಗಿತ್ತು. ಒಂದು ಗೀತೆಯಲ್ಲಿ ಈ ಕವಯಿತ್ರಿ ಹೀಗೆನ್ನುತ್ತಾಳೆ :

ಆತ್ಮ ಹೊಚ್ಚ ಹೊಸದು, ಚಂದ್ರ ಯಾವಾಗಲೂ ಹೊಸಬನೇ
ಈ ಲೋಕ ನನ್ನ ಪಾಲಿಗೆ ಯಾವಾಗಲೂ ಹೊಸದೇ
ಲಲ್ಲಾ ಎಂಬ ನಾನು ನನ್ನ ದೇಹವನ್ನೂ ಮನಸ್ಸನ್ನೂ ಬಿಟ್ಟು
(ನಿನ್ನೆ ನಾಳೆಗಳೆಲ್ಲಾ ಅದೃಶ್ಯವಾದುವು)
ಎಂದೆಂದಿಗೂ ಇಂದಾಗಿರುವ ವರ್ತಮಾನದಲ್ಲಿರುವೆ
ಎಂದೆಂದಿಗೂ ಹೊಚ್ಚಹೊಸದಾಗಿ ಇರುವೆ.

**ಪಂಜಾಬಿ :** ಭಾರತೀಯ ಜನಜೀವನದಲ್ಲಿ ಮತ್ತು ಭಕ್ತಿಪಂಥಗಳಲ್ಲಿ ಗುರುನಾನಕ್‌ಗೆ ಪ್ರಮುಖ ಸ್ಥಾನವಿದೆ. ಕ್ರಿ.ಶ. ೧೪೬೯ ರಲ್ಲಿ ಹುಟ್ಟಿದ ನಾನಕನ ಕಾಲಕ್ಕೆ ಭಾರತ ದೇಶದ ಹಲವು ಪ್ರದೇಶಗಳು ಮುಸ್ಲಿಮ್ ಆಡಳಿತದಲ್ಲಿದ್ದುವು. ಹಿಂದೂಧರ್ಮ ಅವನತಿಯನ್ನು ಪಡೆಯುತ್ತಿದ್ದ ಕಾಲದಲ್ಲಿ ಭಾರತ ದೇಶದ ವಿವಿಧ ಪ್ರಾಂತ್ಯಗಳಲ್ಲಿ ಭಕ್ತಕವಿಗಳು ಜನಪ್ರಿಯಸಾಹಿತ್ಯ ಸೃಷ್ಟಿಮಾಡಿ ಹಿಂದೂಧರ್ಮದ ಏಳಿಗೆಗಾಗಿ ಶ್ರಮಿಸಿದರು. ಈ ಭಕ್ತಕವಿಗಳಲ್ಲಿ ಹಲವರು ಪಾರಲೌಕಿಕಜೀವನದ ಕಡೆ ತಮ್ಮ ಮನಸ್ಸನ್ನು ಹರಿಸಿದರೇ ಹೊರತು ಲೌಕಿಕಜೀವನಕ್ಕೆ ಮಹತ್ತ್ವವನ್ನು ನೀಡಿರಲಿಲ್ಲ. ಗುರುನಾನಕ್ ಲೌಕಿಕ ಮತ್ತು ಪಾರಲೌಕಿಕ ಜೀವನಗಳಿಗೆ ಸಮಾನ ಪ್ರಾಧಾನ್ಯ ನೀಡಿದರು. ಜಾತಿಭೇದವನ್ನು ತಿರಸ್ಕರಿಸಿ ಅಸ್ಪೃಶ್ಯರನ್ನೂ ತಮ್ಮ ಒಳಗಕ್ಕೆ ಸೇರಿಸಿಕೊಂಡರು. ಮುಸ್ಲಿಮರು, ಬ್ರಾಹ್ಮಣರು, ವಿವಿಧ ವೃತ್ತಿಗಳಿಗೆ ಸೇರಿದ ಜನರು, ಶ್ರೀಲಂಕ ಮುಂತಾದ ಇತರ ದೇಶಗಳಿಗೆ ಸೇರಿದ ಜನರು ಕೂಡ ಗುರುನಾನಕನ ಶಿಷ್ಯರಾದರು.

ಇತರರನ್ನು ದೂರುವುದೇಕೆ, ಹೇಯ ಕೃತ್ಯಗಳನ್ನು ದೂರು
ನೀನು ಏನನ್ನು ಬಿತ್ತುತ್ತೀಯೋ ಅದಕ್ಕೆ ತಕ್ಕ ಫಲವೇ ಲಭಿಸುವುದು

ಎಂದು ಗುರುನಾನಕ್ ಬೋಧಿಸಿದ್ದಾರೆ. "ಯಾರು ಕೆಟ್ಟವರೆಂದು ಹೇಗೆ ಹೇಳಲಿ, ನಿನ್ನನ್ನು ಬಿಟ್ಟು ಯಾರು ಬೇರೆಯಾಗಿದ್ದಾರೆ" ಎಂದು ಕೇಳುತ್ತಾನೆ ನಾನಕ್. ತಪ್ಪು ಯಾರು ಮಾಡಿದ್ದರೂ ನಾವೆಲ್ಲರೂ ಅದರಲ್ಲಿ ಭಾಗಿಗಳೇ ಎಂಬುದು ಇದರ ಅರ್ಥ. ತಾನೇ ದೇವರ ದೂತನೆಂದು ನಾನಕ್ ಭಾವಿಸಿರಲಿಲ್ಲ:

ದೇವರೇ ಜಗತ್ತು ಕಂಡದ ಮೇಲೆ ನಿಂತಿದೆ

ಅದನ್ನು ಕಾಪಾಡು
ಅವನು ಯಾವ ಬಾಗಿಲಿನಿಂದಾದರೂ ನಿನ್ನ ಕಡೆ ಬರಲಿ
ಅವನನ್ನು ಕಾಪಾಡು

ಎಂದ ಸಮನ್ವಯವಾದಿ ನಾನಕ್.

**ಹಿಂದಿ :** ಸಂಸ್ಕೃತದಲ್ಲಿ ಮಹಾ ಪಂಡಿತನಾಗಿದ್ದು, ಆಡುಮಾತಾದ ಹಿಂದಿಯನ್ನೂ ಅಷ್ಟೇ ಶಕ್ತವಾಗಿ, ವಿಸ್ತೃತವಾಗಿ ಬಳಸಿದ ಮಹಾಕವಿ ವಿದ್ಯಾಪತಿ (೧೪ನೆಯ ಶ.). ಬಿಹಾರದ ಒಂದು ಹಳ್ಳಿಯಲ್ಲಿ ಜನಿಸಿದ ಈ ಕವಿ ಉತ್ತರ ಭಾರತದಲ್ಲಿ ಮಾತ್ರವಲ್ಲದೆ ಪೂರ್ವ ಭಾರತದಲ್ಲೂ ಸಾಕಷ್ಟು ಹೆಸರು ಗಳಿಸಿದ. ಆತನ ಪ್ರಭಾವ ಬಂಗಾಳಿ, ಒಡಿಯಾ, ಅಸ್ಸಾಮಿ ಮತ್ತು ನೇಪಾಳಿ ಸಾಹಿತ್ಯಗಳ ಮೇಲೆ ಆಗಿದ್ದನ್ನು ಇಲ್ಲಿ ನೆನೆಯಬೇಕು. ಶಿವಭಕ್ತನಾದ ವಿದ್ಯಾಪತಿ ರಾಧಾಕೃಷ್ಣಶೃಂಗಾರದ ಮೂಲಕ ಭಕ್ತಿಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾನೆ. ಶಿವಸರ್ವಸ್ವಸಾರ, ಗಂಗಾವಾಕ್ಯಾವಲಿ, ದುರ್ಗಾ ಭಕ್ತಿತರಂಗಿಣಿ ಸಾಮಾನ್ಯಜನರನ್ನೂ ಸ್ತ್ರೀಯರನ್ನೂ ಮನಸ್ಸಿನಲ್ಲಿಟ್ಟುಕೊಂಡು ಬರೆದಂಥವು. ವಿದ್ಯಾಪತಿ ಬರೆದ ಗೀತಸಾಹಿತ್ಯ ತುಂಬ ವೈವಿಧ್ಯದಿಂದ ಕೂಡಿದೆ. ಜನಪದ ಲಯಗಳಿಂದಲೂ ಸ್ಫೂರ್ತಿ ಪಡೆದು ವಿದ್ಯಾಪತಿ ಭಕ್ತಿಗೀತೆಗಳನ್ನು ಬರೆದಿದ್ದಾನೆ.

ಹಿಂದಿ ಸಾಹಿತ್ಯಚರಿತ್ರೆಯಲ್ಲಿ ಕ್ರಿ. ಶ. ೧೩೧೮–೧೬೪೩ರ ಮಧ್ಯಕಾಲವನ್ನು ಭಕ್ತಿಯುಗವೆಂದು ಕರೆಯಲಾಗಿದೆ. ಆಗ ಪರಕೀಯ ಮತದವರ ದಾಳಿಯಿಂದ ಭಕ್ತಿಯ ಪ್ರಚಾರ ಅತ್ಯಾವಶ್ಯಕವಾಯಿತು. ಜನರನ್ನು ಭೋಗ ಲಾಲಸ ಚಿತ್ತದಿಂದ, ಜಾತಿ ವೈಷಮ್ಯಗಳಿಂದ ರಕ್ಷಿಸಲು ಕೂಡ ಭಕ್ತಿಯ ಪ್ರಚಾರ ಅಗತ್ಯವಾಯಿತು. ಧರ್ಮದ ಉಸಿರಾಗಿರಬೇಕಾದ ನೀತಿನಿಯಮಗಳು ನಶಿಸಿ ಆವೇಶ ಹೆಚ್ಚಾದ ಕಾಲವದು. ಗುಪ್ತ ಸಾಮ್ರಾಜ್ಯದ ಪತನದ ಅನಂತರ ಸನಾತನ ಹಿಂದೂಧರ್ಮಕ್ಕೆ ರಾಜಾಶ್ರಯವೂ ಇಲ್ಲದಂತಾಯಿತು. ದಕ್ಷಿಣದಲ್ಲಿ ಮಾತ್ರ ವಿಜಯನಗರ ಸಾಮ್ರಾಜ್ಯ ಭಾರತೀಯ ಸಂಪ್ರದಾಯಗಳ ರಕ್ಷಣೆಗೆ ಕಂಕಣ ಧರಿಸಿತು.

ಹಿಂದಿಯಲ್ಲಿ ಬೆಳೆದು ಬಂದ ಭಕ್ತಿಸಾಹಿತ್ಯದಲ್ಲಿ ಕವಿಗಳನ್ನು ನಿರ್ಗುಣ ಭಕ್ತಿಯ ಕವಿಗಳು ಮತ್ತು ಸಗುಣ ಭಕ್ತಿಯ ಕವಿಗಳು ಎಂದು ಎರಡು ಗುಂಪುಗಳಾಗಿ ವಿಂಗಡಿಸಲಾಗಿದೆ. ಜ್ಞಾನಾಶ್ರಯ ಪ್ರೇಮಾಶ್ರಯ ಶಾಖೆಗಳು ನಿರ್ಗುಣ ಭಕ್ತಿಯಲ್ಲೂ ರಾಮಭಕ್ತಿ ಮತ್ತು ಕೃಷ್ಣಭಕ್ತಿ ಎಂಬ ಶಾಖೆಗಳು ಸಗುಣಭಕ್ತಿಯಲ್ಲೂ ಇವೆ. ಜ್ಞಾನಪ್ರಧಾನವಾದ ನಿರ್ಗುಣಭಕ್ತಿಯನ್ನು ಪ್ರಚಾರಮಾಡಿದವರಲ್ಲಿ ಭಾರತದ ಖ್ಯಾತ ಸಂತಕವಿ ಕಬೀರ್ ಸೇರುತ್ತಾನೆ

(ಕ್ರಿ.ಶ. ೧೩೯೮–೧೫೧೮). ಕಬೀರನ ಜನನ, ಜನ್ಮಸ್ಥಾನ, ತಾಯಿತಂದೆಯರು ಮುಂತಾದವುಗಳ ಬಗೆಗೆ ಹಲವು ಕಥೆಗಳು ಪ್ರಚಾರದಲ್ಲಿವೆ. ಈ ಕವಿಯ ರಚನೆಗಳಲ್ಲಿ ಹಿಂದೂ ವೇದಾಂತ, ಮಹಮ್ಮದೀಯರ ಸೂಫೀತತ್ತ್ವ,ಪ್ರೇಮ, ಸರ್ವಮಾನವ ಸಮಾನತೆ ಮುಂತಾದವುಗಳ ಸಮನ್ವಯ ಕಂಡುಬರುತ್ತದೆ.

"ಭಕ್ತಿ ದ್ರಾವಿಡ ದೇಶದಲ್ಲಿ ಹುಟ್ಟಿತು, ಅದನ್ನು ರಾಮಾನಂದ ಉತ್ತರಕ್ಕೆ ತಂದ. ಆದನ್ನು ಕಬೀರ್ ಸಪ್ತದ್ವೀಪಗಳಲ್ಲಿ ಮತ್ತು ಒಂಬತ್ತು ಖಂಡಗಳಲ್ಲಿ ಹರಡಿದ" ಎಂದು ಹೇಳುವ ದೋಹಾ ಒಂದಿದೆ. ಇದರಿಂದ ರಾಮಾನಂದ ಕಬೀರನ ಗುರುವೆಂದು ಭಾವಿಸಲಾಗಿದೆ.

ಕಬೀರನದು ವಿಶುದ್ಧಪ್ರೇಮ. ಭಗವಂತ ಸರ್ವವ್ಯಾಪಿ ಎಂದು ನಂಬಿದವನು. ಆತ ಎಲ್ಲಾ ಕಡೆ ಇರುತ್ತಾನೆ, ಆದರೆ ಎಲ್ಲಕ್ಕೂ ಅತೀತವಾಗಿ ಇರುತ್ತಾನೆ. "ಸ್ನೇಹಿತನೇ ಹೇಳು. ಹೃದಯದಲ್ಲಿ ಸಖಿ ಇದ್ದಾಳೆಯೋ ಅಥವಾ ಸಖಿಯಲ್ಲಿ ಹೃದಯ ಇದೆಯೋ" ಎಂದು ಕೇಳುತ್ತಾನೆ ಕವಿ. ಸೃಷ್ಟಿಕರ್ತ ವಿಶ್ವದಲ್ಲಿದ್ದಾನೆ; ವಿಶ್ವ ಸೃಷ್ಟಿಕರ್ತನಲ್ಲಿದೆ ಎಂದು ನಂಬಿದವನು ಕಬೀರ್. ಆ ಕಾಲದ ಭಕ್ತಕವಿಗಳು ಉತ್ತಮ ಕೃತ್ಯಗಳನ್ನೂ ಜ್ಞಾನಾರ್ಜನೆಯನ್ನೂ ಮೆಚ್ಚಿದರೂ ಅವೇ ಮೋಕ್ಷ ನೀಡುತ್ತವೆಂದು ಭಾವಿಸಿರಲಿಲ್ಲ. ಭಗವಂತನನ್ನು ಪ್ರೀತಿಸುವ ಭಕ್ತಿಯ ಮಾರ್ಗದಿಂದಲೇ ಅದು ಸಾಧ್ಯ ಎಂದು ಅವರು ನಂಬಿದ್ದರು. ಕಬೀರನ ದರ್ಶನದಲ್ಲಿ ಶಬ್ದಕ್ಕೆ ತುಂಬ ಪ್ರಾಧಾನ್ಯವಿತ್ತು. ಜಗತ್ತು ಓಂಕಾರದಿಂದ ಹುಟ್ಟಿ ವಿಕಾರದಿಂದ ನಾಶವಾಗುತ್ತದೆಂದು ಅವನು ಹೇಳಿದ್ದಾನೆ. ಮಾನವತೆಗೆ ಸಂಬಂಧಿಸಿದ ಶಾಶ್ವತ ಮೌಲ್ಯಗಳನ್ನು ಪ್ರತಿಪಾದಿಸಿ, ಸಮಾನತೆಯ ಅಭಿಪ್ರಾಯಗಳನ್ನು ವಿವರಿಸಿ ಕಬೀರ್ ಅನಂತರಕಾಲದ ಕವಿಗಳಿಗೆ ಸ್ಫೂರ್ತಿಯ ಸೆಲೆಯಾದ.

ಮೀರಾಬಾಯಿ (ಕ್ರಿ.ಶ. ೧೪೯೮) ಅಖಿಲ ಭಾರತೀಯ ಪ್ರಖ್ಯಾತಿಯನ್ನು ಗಳಿಸಿದ ಕವಯಿತ್ರಿ. ಈಕೆ ಹುಟ್ಟಿದ್ದು ರಾಜಸ್ಥಾನದಲ್ಲಿ. ಜೀವನದ ಅರ್ಧಭಾಗವನ್ನು ರಾಜಸ್ಥಾನದಲ್ಲಿ ಕಳೆದು, ಅನಂತರಕಾಲದಲ್ಲಿ ಪೂರ್ವದ ಬೃಂದಾವನದಲ್ಲಿ ಮತ್ತು ಪಶ್ಚಿಮದ ದ್ವಾರಕೆಯಲ್ಲಿ ಇದ್ದುದರಿಂದ ರಾಜಸ್ಥಾನ, ಗುಜರಾತ್ ಮತ್ತು ಉತ್ತರ ಭಾರತದ ಎಲ್ಲ ಪ್ರದೇಶದವರೂ ಮೀರಾಬಾಯಿ ತಮ್ಮವಳೇ ಎಂದು ಭಾವಿಸುತ್ತಾರೆ. ರಾಜಸ್ಥಾನಿ, ಗುಜರಾತಿ ಮತ್ತು ಬ್ರಜ್ ಹಿಂದಿಗಳಲ್ಲಿ ಮೀರಾ ಕೀರ್ತನೆಗಳನ್ನು ಹಾಡಿದಳು.

ಹಾಡಿನಿಂದಲೇ ಭಗವಂತನ ಸಾಯುಜ್ಯವನ್ನು ಪಡೆಯಲು ಬಯಸಿದ ಮಹಾಭಕ್ತೆ ಮೀರಾ. ಭಗವಂತನ ವಿರಹವನ್ನು ಭಾವೋದ್ವೇಗದಿಂದ ಪದಗಳಲ್ಲಿ ಮೀರಾ ವ್ಯಕ್ತಮಾಡಿದ ರೀತಿ ಮನಸೆಳೆಯುವಂಥದು. ಭಾರತೀಯ

ಭಜನೆ ಸಂಪ್ರದಾಯದ ಭಕ್ತಿಸಾಹಿತ್ಯ ಮೀರಾಬಾಯಿಗೆ ಚಿರಋಣಿಯಾಗಿದೆ ಎಂದರೆ ಅತಿಶಯೋಕ್ತಿ ಅಲ್ಲ.

ಪುರಂದರದಾಸರಿಗೆ ಸಮಕಾಲೀನ ಕವಿಗಳಾಗಿದ್ದ ಸೂರದಾಸ ಮತ್ತು ಜಾಯಸಿ ಕವಿಗಳು ಉತ್ತರ ಭಾರತದ ಭಕ್ತಿಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಮರೆಯುವಂತಿಲ್ಲ. ಬಾಹ್ಯನೇತ್ರವಿಲ್ಲದಿದ್ದರೂ ಅಂತರ್ನೇತ್ರದಿಂದ ಜ್ಞಾನಪ್ರಪಂಚವನ್ನು ವೀಕ್ಷಿಸಿ, ಭಕ್ತಿಯ ಅಮೃತವನ್ನು ಜನರಿಗೆ ಹಂಚಿದ ಮಹಾಕವಿ ಸೂರದಾಸ. ಅವನು ನಿರ್ಮಿಸಿದ್ದು ಅನಂತ ರಸಸಾಗರ. ಸೂರದಾಸ ಮುಂತಾದ ಕವಿಗಳು ಎಂಟು ಜನ ಸೇರಿ ಅಷ್ಟಛಾಪ್ ಎಂಬ ಹೆಸರನ್ನು ಪಡೆದರು. ನಂದದಾಸನೂ ಇವರಲ್ಲೇ ಸೇರುತ್ತಾನೆ.

ಉತ್ತರಭಾರತದ ಭಕ್ತಕವಿಗಳು ಸುಮಾರು ಮೂರು ಶತಮಾನಗಳ ಕಾಲ ಭಕ್ತಿಸಾಹಿತ್ಯ ಸೃಷ್ಟಿಯಿಂದ ಕೋಟಿಗಟ್ಟಲೆ ಜನರಿಗೆ ಕಾವ್ಯಾಮೃತವನ್ನು ನೀಡಿದರು. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಇಂಥ ಸಾಹಿತ್ಯ ನಿರ್ಮಾಣ ತಮ್ಮ ಕರ್ತವ್ಯವೆಂದು ಈ ಕವಿಗಳು ಭಾವಿಸಿದ್ದರು.

**ಪೂರ್ವ ಭಾರತ**

ಭಾರತೀಯ ಭಕ್ತಿಸಾಹಿತ್ಯಕ್ಕೆ ಪೂರ್ವಭಾರತ ಮೇರು ಸದೃಶರಾದ ಮಹಾನ್ ವ್ಯಕ್ತಿಗಳನ್ನು ನೀಡಿದೆ. ಮುಖ್ಯವಾಗಿ ಬಂಗಾಲ ಪ್ರದೇಶ ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ನೀಡಿದ ಕೊಡುಗೆ ಅಸಾಧಾರಣವಾದುದು. ಬಂಗಾಲಕ್ಕೆ ಸೇರಿದ ಸುಪ್ರಸಿದ್ಧ ಸಂಸ್ಕೃತ ಕವಿಗಳಲ್ಲಿ ಜಯದೇವ ಪ್ರಮುಖನಾಗಿದ್ದಾನೆ. 'ಗೀತಗೋವಿಂದ' ಭಾರತೀಯ ಸಾಹಿತ್ಯದ ಮೇಲೆ ಬೀರಿದ ಪ್ರಭಾವ ಪ್ರತ್ಯೇಕ ಅಧ್ಯಯನಕ್ಕೆ ಅರ್ಹವಾದುದು. ರಾಧಾಕೃಷ್ಣರ ಪ್ರೇಮವನ್ನು ಆಧ್ಯಾತ್ಮಿಕ ಮಟ್ಟಕ್ಕೆ ಏರಿಸಿ ಅತ್ಯಂತ ಮಧುರವಾಗಿ ಹಾಡಿ ಹೊಗಳಿದ ಕವಿ ಜಯದೇವ. ವೈಷ್ಣವ ಧಾರ್ಮಿಕಸಾಹಿತ್ಯದಲ್ಲಿ ಭಕ್ತಿಸಾರಸ್ವತದಲ್ಲಿ ಗೀತಗೋವಿಂದ ಜಯದೇವನಿಗೆ ಅತ್ಯುನ್ನತ ಸ್ಥಾನವನ್ನು ಗಳಿಸಿಕೊಟ್ಟಿತು. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಜಯದೇವಕವಿ ಬಂಗಾಲಕ್ಕೆ ಸೇರಿದವನಾದರೂ ಅಖಿಲ ಭಾರತ ಮಟ್ಟದಲ್ಲಿ ಕೀರ್ತಿಯನ್ನೂ ಪಡೆದ ; ಸ್ಫೂರ್ತಿಯನ್ನೂ ನೀಡಿದ.

ಗೀತಗೋವಿಂದ ಹನ್ನೆರಡು ಸರ್ಗಗಳ ಕಾವ್ಯ. ಸರ್ಗದಲ್ಲಿರುವ ಶ್ಲೋಕಗಳು ಮತ್ತು ಅಷ್ಟಪದಿಗಳು ಮಧುರಕೋಮಲ ಶೈಲಿಯಲ್ಲಿ ರಚಿತವಾಗಿ ಸರ್ವಜನಾಕರ್ಷಕವಾಗಿವೆ. ಪ್ರತಿ ಪದ ಮತ್ತು ಪದ್ಯ ಕೃಷ್ಣಭಕ್ತಿದ್ಯೋತಕವಾಗಿವೆ. ಶ್ರೀಕೃಷ್ಣನೇ ಪರಮಾತ್ಮ, ರಾಧ ಜೀವಿ, ಸಖಿ ಗುರು, ಬೃಂದಾವನ ಲೀಲಾ ವಿಭೂತಿಯಾಗಿರುವ ಭಕ್ತಿಕಾವ್ಯವಾಗಿ ಗೀತಗೋವಿಂದ ಪ್ರಖ್ಯಾತವಾಗಿದೆ.

ಬಂಗಾಲದ ವೈಷ್ಣವ ಕವಿಗಳಲ್ಲಿ ಚಂಡೀದಾಸನಿಗೆ ಅತ್ಯುನ್ನತ ಸ್ಥಾನ ಕೊಡಲಾಗಿದೆ. ಚೈತನ್ಯ (೧೪೮೬–೧೫೩೩) ವೈಷ್ಣವ ಭಕ್ತಿಪಂಥವನ್ನು ಬೆಳಗಿಸುವ ಮುನ್ನ ಚಂಡೀದಾಸ ಪ್ರಖ್ಯಾತನಾಗಿದ್ದ. ಜಯದೇವ ಮತ್ತು ವಿದ್ಯಾಪತಿಯ ಗೀತೆಗಳೊಂದಿಗೆ ಚಂಡೀದಾಸನ ಗೀತೆಗಳನ್ನೂ ಚೈತನ್ಯ ಓದಿ ಪ್ರಭಾವಿತನಾದನೆಂದು ಹೇಳಲಾಗಿದೆ.

ಚಂಡೀದಾಸನನ್ನು ಕುರಿತಂತೆ ಹಲವು ಐತಿಹ್ಯಗಳಿವೆ. ಆತನ ಗೀತೆಗಳ ಮಾಧುರ್ಯಕ್ಕೆ ಮಾರುಹೋದ ಒಬ್ಬ ನವಾಬನ ಹೆಂಡತಿ ಆತನನ್ನು ಪ್ರೀತಿಸಿದಳಂತೆ. ಇದೇ ಚಂಡೀದಾಸನ ಸಾವಿಗೆ ಕಾರಣವಾಯಿತೆಂದು ಹೇಳುತ್ತಾರೆ. ಚಂಡೀದಾಸ ರಾಧಾಕೃಷ್ಣರ ಪ್ರಣಯಕ್ಕೆ ಸಂಬಂಧಿಸಿದಂತೆ ಹಲವು ಗೀತೆಗಳನ್ನು ಬರೆದಿದ್ದಾನೆ. ಚಂಡೀದಾಸನ ಹೆಸರನ್ನೇ ಅನಂತರದ ಕೆಲವು ಕವಿಗಳೂ ಬಳಸಿಕೊಂಡಿರುವುದರಿಂದ ಮೊದಲನೆಯ ಚಂಡೀದಾಸನ ಕೃತಿಗಳನ್ನು ಬೇರೆ ಮಾಡುವುದು ತುಂಬ ಕಷ್ಟದ ಕೆಲಸವಾಗಿದೆ.

ಅಸ್ಸಾಮ್ ರಾಜ್ಯದ ನೌಗಾಂಗ್ ಜಿಲ್ಲೆಯ, ಬ್ರಹ್ಮಪುತ್ರಾತೀರದ ಒಂದು ಹಳ್ಳಿಯಲ್ಲಿ ಶಂಕರದೇವ ಹುಟ್ಟಿದ. ಅಸ್ಸಾಮ್ ಸಾಹಿತ್ಯದ ಮೂಲಪುರುಷನೆಂದು ಹೆಸರಾದ ಶಂಕರದೇವ ಭಕ್ತಿಸಾಹಿತ್ಯದಲ್ಲೂ ಹೆಸರುವಾಸಿಯಾಗಿದ್ದಾನೆ. ಕ್ರಿ.ಶ. ೧೪೪೯ ರಲ್ಲಿ ಹುಟ್ಟಿದ ಶಂಕರದೇವ ಶಿವನ ವರಪ್ರಸಾದದಿಂದ ಹುಟ್ಟಿದನೆಂದು ಹೇಳಲಾಗಿದೆ. ಶಂಕರದೇವ ಭಾರತದೇಶದ ಹಲವು ಪ್ರಾಂತ್ಯಗಳಲ್ಲಿ ಸಂಚರಿಸಿದ. ಧಾರ್ಮಿಕ ಮುಖಂಡನಾಗಿಯೂ ಸಮಾಜ ಸುಧಾರಕನಾಗಿಯೂ ಶಂಕರದೇವ ಸಾಕಷ್ಟು ಶ್ರಮಿಸಿದನೆಂದು ಹೇಳಲಾಗಿದೆ. ಶಂಕರದೇವ ಪ್ರತಿಪಾದಿಸಿ ಪ್ರಚಾರಮಾಡಿದ ವೈಷ್ಣವಧರ್ಮಕ್ಕೆ 'ಏಕಶರಣ ನಾಮಧರ್ಮ' ಎಂದು ಹೆಸರು. ಅಸ್ಸಾಮಿ ಜನಜೀವನ, ಸಾಹಿತ್ಯ, ಭಕ್ತಿಪಂಥಗಳ ಮೇಲೆ ಈ ಕವಿ ಅಪಾರ ಪ್ರಭಾವ ಬೀರಿದ್ದಾನೆ.

ಭಾರತೀಯ ಭಕ್ತಿಸಾಹಿತ್ಯ ವೇದಗಳಷ್ಟು ಪ್ರಾಚೀನ ಕಾಲದಲ್ಲೇ ಬೇರುಗಳನ್ನು ಕಂಡಿತು. ಪುರಾಣ, ಭಗವದ್ಗೀತೆ ಮುಂತಾದವು ಭಕ್ತಿಸಾಹಿತ್ಯಕ್ಕೆ ಶಾಸ್ತ್ರದ ಚೌಕಟ್ಟನ್ನು ಒದಗಿಸಿಕೊಟ್ಟವು. ಸುಮಾರು ಸಾವಿರ ವರ್ಷಗಳ ಹಿಂದೆ ಶೈವ ಮತ್ತು ವೈಷ್ಣವ ಭಕ್ತಿಸಾಹಿತ್ಯ ದಕ್ಷಿಣ ಭಾರತದಲ್ಲಿ ಪ್ರಾರಂಭವಾಯಿತು. ಕೆಲವು ಶತಮಾನಗಳ ಕಾಲ ಆಸೇತುಹಿಮಾಚಲ ಭಕ್ತಿಸಾಹಿತ್ಯ ಜನಮನಗಳ ಮೇಲೆ ತನ್ನ ಪ್ರಭಾವವನ್ನು ಬೀರಿತು.

# ಪುರಂದರದಾಸರು – ಆಳ್ವಾರರು

–ಕೃಷ್ಣವೇಣಿ

ತಮಿಳುನಾಡಿನ ಶ್ರೀವೈಷ್ಣವ ಭಕ್ತರು ಆಳ್ವಾರರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ. ಭಕ್ತಿಪಂಥಕ್ಕೆ ಸೇರಿದ ಕವಿಗಳು ಇವರು. 'ಆಳವಾರ್' ಎಂದರೆ ಭಗವಂತನ ಅನುಭವಸಾಗರದಲ್ಲಿ ಮುಳುಗುವವರು. ಪರಮಾತ್ಮನ ಅನುಭವ ಭೋಗವನ್ನು ಪಡೆದು ಅದನ್ನು ಇತರರಿಗೆ ವಿನಿಯೋಗಿಸುವ ಕಾರ್ಯದಲ್ಲಿ ತೊಡಗಿದ ಮಹಾವ್ಯಕ್ತಿಗೆ 'ಆಳ್ವಾರ್' ಎಂದು ಹೆಸರು. ಇವರನ್ನು ದಿವ್ಯಸೂರಿಗಳೆಂದೂ ಕರೆಯುವುದುಂಟು. ಇವರು ತಮಗಾದ ಭಗವದನುಭವವನ್ನು ಮಧುರವಾದ ಗೀತೆಗಳಲ್ಲಿ ಹಾಡಿದ್ದಾರೆ. ವಿಶಿಷ್ಟಾದ್ವೈತ ತತ್ವಗಳನ್ನು ಜನಸಾಮಾನ್ಯರಿಗೆ ತಿಳಿಸುವ ಪ್ರಯತ್ನ ಕೈಗೊಂಡಿದ್ದಾರೆ. ತಮ್ಮ ಕೃತಿಗಳಿಂದ ತಮಿಳಿನ ಭಕ್ತಿಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ವಿಷ್ಣುಪಾರಮ್ಯವನ್ನು ಒಪ್ಪಿ ಅದನ್ನು ತಮ್ಮ ಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾರೆ.

ಆಳ್ವಾರರು ಸಾತ್ವತ ಅಥವಾ ಭಾಗವತ ಮತದ ಅನುಯಾಯಿಗಳು. ಇವರ ಮತಕ್ಕೆ ಪಾಂಚರಾತ್ರಮತವೆಂದೂ ಏಕಾಂತಿಕಮತವೆಂದೂ ಹೆಸರುಂಟು. ಇವರು ಬೋಧಿಸಿರುವ ವಿಶಿಷ್ಟಾದ್ವೈತ ಮತದ ಸ್ವರೂಪವನ್ನು ಹೀಗೆ ಸಂಗ್ರಹಿಸಬಹುದೆಂದು ತೋರುತ್ತದೆ : ಭಗವಂತ ಪ್ರೇಮ ಸ್ವರೂಪಿ ; ಜೀವಾತ್ಮ ಪರಮಾತ್ಮರಿಗಿರುವ ನಿಕಟ ಸಂಬಂಧವೇ ಪ್ರೇಮ. ಪ್ರೇಮದಿಂದಲೇ ಪರಮಾತ್ಮನ ಸಾನ್ನಿಧ್ಯ ಪಡೆಯಲು ಸಾಧ್ಯ. ವಿಷಯ ಭೋಗಗಳಲ್ಲಿ ಆಸೆಯನ್ನು ತೊರೆದು, ಚೇತನನು ತನ್ನ ಸಮಸ್ತ ಆಸೆಯನ್ನೂ ಪರಮಾತ್ಮನಲ್ಲಿ ಕೇಂದ್ರೀಕರಿಸಬೇಕು. ದೇಹವೇ ಆತ್ಮ ಎಂಬ ಭ್ರಾಂತಿಯನ್ನು ತೊಲಗಿಸಿ, 'ನಾನು, ನನ್ನದು' ಎಂಬ ಅಹಂಕಾರ ಮಮಕಾರಗಳನ್ನು ತ್ಯಜಿಸಬೇಕು. ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡಬೇಕು. ಶರಣಾಗತಿಯೇ ಮೋಕ್ಷಕ್ಕೆ ಮುಖ್ಯ ಸಾಧನ. ಭಕ್ತಿಗಿಂತ ಪ್ರಪತ್ತಿ ಸುಲಭ. ಪತಿತನಾದರೂ ಪ್ರಪತ್ತಿನಿಷ್ಠನಾದರೆ ಮುಕ್ತಿ ಪಡೆಯಬಹುದು, ಕಾಲ, ದೇಶ, ಅವಸ್ಥಾಭೇದ ಇದಕ್ಕಿಲ್ಲ. ಇದೇ ಆತ್ಮಸಮರ್ಪಣ.

ಈ ಆಳ್ವಾರರ ಕಾಲದ ಬಗೆಗೆ ಒಮ್ಮತವಿಲ್ಲ. ಇವರ ಪಾಶುರಗಳಲ್ಲಿ ಪಲ್ಲವ, ಚೋಳ, ಪಾಂಡ್ಯರ ಪ್ರಸ್ತಾಪ ಕಂಡುಬರುತ್ತದೆ. ಆದರೆ ಎಲ್ಲಿಯೂ ಅರಸರ ಹೆಸರು ಉಕ್ತವಾಗಿಲ್ಲ. ಇವರ ಕಾಲ ಕ್ರಿ.ಶ. ಏಳನೆಯ ಶತಮಾನದಿಂದ ಒಂಬತ್ತನೆಯ ಶತಮಾನದ ಮಧ್ಯಭಾಗದವರೆಗೆ ಎಂಬುದು ವಿದ್ವಾಂಸರ ಅಭಿಪ್ರಾಯ. ಒಟ್ಟಾರೆ ಹನ್ನೆರಡು ಜನ ಆಳ್ವಾರರಿದ್ದು ಇವರಲ್ಲಿ ಎಲ್ಲಾ ಜಾತಿ

ಯುವರೂ ಇದ್ದಾರೆ. ಗಂಡಸರೂ ಇದ್ದಾರೆ ; ಹೆಂಗಸರೂ ಇದ್ದಾರೆ. ಅವರಲ್ಲಿ ಒಬ್ಬರು ಕೇರಳ ದೇಶದ ರಾಜರು. ಇನ್ನೊಬ್ಬಾಕೆ ಹೆಂಗಸು–ಅಂಡಾಳ್ ಅಥವಾ ಗೋದಾದೇವಿ. ತಿರುಪ್ಪಾಣಾಳ್ವಾರರು ಅಂತ್ಯಜರು. ನಮ್ಮಾಳ್ವಾರರು ವೇಳ್ಳಾಳರು. ತಿರುಮಂಗೈ ಕಳ್ಳರಾಗಿದ್ದವರು. ತಿರುಮಳಿಶೈಯುವರ ಜಾತಿಯೇ ತಿಳಿಯದು. ಉಳಿದವರು ಬ್ರಾಹ್ಮಣರು. ಅವರ ಅವತಾರಕ್ರಮ ಗುರು ಪರಂಪರೆಯ ಪ್ರಕಾರ ಹೀಗಿದೆ : ಪೊಯ್‌ಗೈಯಾಳ್ವಾರ್ (ಭೂತಯೋಗಿ), ಪೂತತ್ತಾಳ್ವಾರ್ (ಸರೋಯೋಗಿ,), ಪೇಯಾಳ್ವಾರ್ (ಮಹದಾಹ್ವಯರು), ತಿರುಮಳಿಶೈಯಾಳ್ವಾರ್ (ಭಕ್ತಿಸಾರರು), ನಮ್ಮಾಳ್ವಾರ್ (ಪರಾಂಕುಶರು), ಮಧುರ ಕವಿಯಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್ (ಭಟ್ಟಿನಾಥರು ಅಥವಾ ವಿಷ್ಣುಚಿತ್ತರು), ಗೋದಾದೇವಿ (ಅಂಡಾಳ್), ತೊಂಡಿರಡಿಪ್ಪೊಡಿಯಾಳ್ವಾರ್ (ಭಕ್ತಿಸಾರರು), ತಿರುಪ್ಪಾಣಾಳ್ವಾರ್ (ಯೋಗಿವಾಹನರು), ತಿರುಮಂಗೈಯಾಳ್ವಾರರು (ಪರಕಾಲರು). ಈ ಹನ್ನೆರಡು ಮಂದಿ ಆಳ್ವಾರರು ಉಪದೇಶಿಸಿದ ದಿವ್ಯಸೂಕ್ತಿಗಳು ದಿವ್ಯಪ್ರಬಂಧವೆಂದು ಪ್ರಸಿದ್ಧವಾಗಿದೆ. ಇದು ನಾಲ್ಕು ಸಾವಿರ ಪದ್ಯಗಳನ್ನೊಳಗೊಂಡಿದೆ.

ಆಳ್ವಾರರು ಆಗಿಹೋದ ನಾಲ್ಕಾರು ಶತಮಾನಗಳ ನಂತರ ಬಂದವರು ಹರಿದಾಸರು. ತಮಿಳುನಾಡಿನಲ್ಲಿ ಆಳ್ವಾರರು ಮಾಡಿದ ಕೆಲಸವನ್ನೇ ಕರ್ನಾಟಕದಲ್ಲಿ ಹರಿದಾಸರೂ ಕೈಗೊಂಡಿದ್ದಾರೆ. ಆಳ್ವಾರರ ಹಾಗೂ ದಾಸರ ಉದ್ದೇಶಗಳು ಒಂದೇ ಆಗಿದ್ದುದರಿಂದ ಅವರ ಕೃತಿಗಳಲ್ಲಿ ಒಂದೇ ರೀತಿಯ ಭಾವನೆಗಳು ಒಡಮೂಡಿರುವುದು ಕಂಡುಬರುತ್ತದೆ. ಈ ಹರಿದಾಸರಲ್ಲಿ 'ದಾಸರೆಂದರೆ ಪುರಂದರದಾಸರಯ್ಯ' ಎಂದು ವ್ಯಾಸರಾಯರಿಂದ ಪ್ರಶಂಸೆಗೆ ಪಾತ್ರರಾದ ಪುರಂದರದಾಸರ ಹೆಸರನ್ನು ಕೇಳದವರಿಲ್ಲ. ಆಳ್ವಾರರ ಹಾಗೂ ಹರಿದಾಸರ ಪ್ರತಿನಿಧಿಯಾಗಿ ಪುರಂದರದಾಸರ ಕೃತಿಗಳಲ್ಲಿ ಕಂಡುಬರುವ ಸಾಮ್ಯವನ್ನು ಗುರುತಿಸುವ ಪ್ರಯತ್ನವನ್ನು ಸಂಕ್ಷಿಪ್ತವಾಗಿ ಇಲ್ಲಿ ಮಾಡಲಾಗಿದೆ.

ಪೊಯ್‌ಗೈ, ಪೂತತ್ತಾರ್ ಮತ್ತು ಪೇಯಾಳ್ವಾರರನ್ನು ಮೊದಲಿನ ಮೂವರು ಆಳ್ವಾರರೆಂದು ಗುರುತಿಸಲಾಗುತ್ತದೆ. ಈ ಮೂವರನ್ನೂ ಪುಷ್ಪಸಂಜಾತರೆಂದು ಹೇಳಲಾಗಿದೆ. ಇವರ ಹುಟ್ಟಿನ ಬಗೆಗೆ ಇರುವ ಈ ರೀತಿಯ ಕಲ್ಪನೆಗೆ ಕಾರಣ ತಿಳಿದುಬರುವುದಿಲ್ಲ. ಪೊಯ್‌ಗೈ ಆಳ್ವಾರರು ಕಾಂಚೀಪುರದ ಯಥೋಕ್ತಕಾರಿಸ್ವಾಮಿ ದೇವಾಲಯದ ಕಮಲ ಪುಷ್ಪದಲ್ಲಿ ಉದ್ಭವಿಸಿದರು ಎಂಬ ಮಾತಿದೆ. ಪರಮಾತ್ಮನ ಪಾಂಚಜನ್ಯಾಂಶರಾದ ಇವರನ್ನು ಸಾರಯೋಗಿ ಅಥವಾ ಕಾಸಾರಯೋಗಿ ಎಂದೂ ಕರೆಯುತ್ತಾರೆ. ಇವರು ಸಿದ್ಧಾರ್ಥಿ ಸಂವತ್ಸರದ ತುಲಾಮಾಸದ ಶ್ರವಣ ನಕ್ಷತ್ರದಲ್ಲಿ ಜನಿಸಿದುದಾಗಿ ತಿಳಿದುಬರು

ತ್ತದೆ. ನೂರು ಪಾಶುರಗಳನ್ನೊಳಗೊಂಡ ಇವರ ಕೃತಿ ಮೊದಲ್ ತಿರುವಂದಾದಿ ಎಂದು ಪ್ರಸಿದ್ಧಿ ಪಡೆದಿದೆ.

ಪೂತತ್ತಾಳ್ವಾರರು ಚೆಂಗಲ್ಪಟ್ಟು (ಚೆಂಗಲ್ಪೇಟೆ) ಜಿಲ್ಲೆಗೆ ಸೇರಿದ ತಿರುಕ್ಕಡಲ್ ಮಲ್ಲೈ ಎಂಬ ಕ್ಷೇತ್ರದಲ್ಲಿ ಕೌಮೋದಕೀಗದಾಂಶರಾಗಿ ಮೊದಲಿನ ಆಳ್ವಾರರು ಅವತರಿಸಿದ ಮೂರನೆಯ ದಿನ ಮಾಧವೀ ಪುಷ್ಪದಲ್ಲಿ ಜನ್ಮತಾಳಿದ ರೆಂದು ಹೇಳಲಾಗಿದೆ. ಇವರು ಹುಟ್ಟಿದುದು ಸಿದ್ಧಾರ್ಥಿಸಂವತ್ಸರದ ತುಲಾ ಮಾಸದ ಧನಿಷ್ಠಾನಕ್ಷತ್ರದಂದು. ನೂರು ಪದ್ಯಗಳನ್ನೊಳಗೊಂಡ ಎರಡನೆಯ ತಿರುವಂದಾದಿ ಇವರು ಹಾಡಿರುವ ಪಾಶುರಗಳು.

ಪೇಯಾಳ್ವಾರರು ಮದ್ರಾಸಿನ ಮೈಲಾಪುರದ ಆದಿಕೇಶವಸ್ವಾಮಿ ದೇವಾಲಯದ ಸರಸ್ಸಿನಲ್ಲಿ ತುಲಾಮಾಸದ ಶತಭಿಷನಕ್ಷತ್ರದಂದು ನಂದಕಾಂಶ ರಾಗಿ ಶಿವ್ವಲ್ಲಿ ಪುಷ್ಪದಲ್ಲಿ ಅವತರಿಸಿದರೆಂಬ ಪ್ರತೀತಿ ಇದೆ. ಇವರು ಮೂರನೆಯ ತಿರುವಂದಾದಿ ಎಂಬ ನೂರು ಪಾಶುರಗಳನ್ನು ಹಾಡಿದ್ದಾರೆ,

ಹೀಗೆ ಪುಷ್ಪ ಸಂಜಾತರೆಂದು ಹೇಳಲಾಗುವ ಈ ಮೂವರೂ ಒಟ್ಟಿಗೆ ಒಂದೆಡೆ ಸೇರಿದ ಘಟನೆಯೂ ಕುತೂಹಲಕರವಾಗಿದೆ. ಹುಟ್ಟುತ್ತಲೇ ಜ್ಞಾನ ಭಕ್ತಿ ವೈರಾಗ್ಯಗಳನ್ನು ಪಡೆದಿದ್ದ ಇವರು ಗ್ರಾಮೈಕರಾತ್ರರಾಗಿ ಕಾಲಕಳೆ ಯುತ್ತಿದ್ದರು. ಭಗವಂತನ ಸಂಕಲ್ಪದಿಂದಾಗಿ ಒಂದು ದಿನ ಏಕಕಾಲದಲ್ಲಿ ತಿರು ಕ್ಕೋವಿಲೂರ್ ಎಂಬ ಊರಿಗೆ ಬಂದರು. ಆಗ ಬಿರುಗಾಳಿ ಎದ್ದು ಜೋರಾಗಿ ಮಳೆಸುರಿಯಲು ಆರಂಭವಾಯಿತು. ಆ ಸಮಯದಲ್ಲಿ ಪೊಯ್‌ಗೈ ಆಳ್ವಾರರು ಜಗಲಿಯ ಮೇಲಿನ ಒಬ್ಬರು ಮಲಗುವಷ್ಟು ಸ್ಥಳವಿದ್ದ ಒಂದು ಸಣ್ಣ ಕೊಠಡಿಯಲ್ಲಿ ಮಲಗಿದರು. ಇದಾದ ಸ್ವಲ್ಪ ವೇಳೆಯಲ್ಲಿಯೇ ಪೂತತ್ತರು ನಿಲ್ಲಲು ಸ್ಥಳ ಹುಡುಕುತ್ತಾ ಅಲ್ಲಿಗೇ ಬಂದು ಸ್ಥಳವಿದೆಯೋ ಎಂದು ಕೇಳಿದರು. ಆಗ ಮಲಗಿದ್ದ ಪೊಯ್‌ಗೈ ಎದ್ದು ಕುಳಿತು ಇಬ್ಬರಿಗೂ ಕುಳಿತುಕೊಳ್ಳಲು ಸ್ಥಳವಿದೆ ಬನ್ನಿ ಎಂದು ಕರೆದರು. ಇನ್ನು ಸ್ವಲ್ಪ ಹೊತ್ತಿನ ನಂತರ ಪೇಯಾ ಳ್ವಾರರು ಮಳೆಯಲ್ಲಿ ನೆನೆಯುತ್ತಾ, ನಿಲ್ಲಲು ಸ್ಥಳ ಸಿಕ್ಕೀತೇ ಎಂಬ ಕಾತರ ದಿಂದ ಅಲ್ಲಿಗೇ ಬಂದು ಆಸರೆ ಕೇಳಿದರು. ಒಳಗಿದ್ದವರು ಇಬ್ಬರಿಗೆ ಕೂಡಲು ಸ್ಥಳವಿತ್ತು; ಆದರೆ ಮೂವರು ನಿಲ್ಲಬಹುದು ಬನ್ನಿ ನಿಲ್ಲೋಣ ಎಂದು ಕರೆ ದರು. ಹೀಗೆ ಮೂವರೂ ಇಕ್ಕಟ್ಟಿನಲ್ಲಿಯೇ ನಿಂತರು. ಆ ಸಮಯದಲ್ಲಿ ಒಬ್ಬರ ಮುಖವನ್ನು ಒಬ್ಬರು ಗುರುತಿಸಲಾರದಷ್ಟು ಕತ್ತಲೆ. ಒಬ್ಬರಿಗೊ ಬ್ಬರು ಅಪರಿಚಿತರು. ಪರಿಚಯಾಪೇಕ್ಷೆಯಿಂದ ಒಬ್ಬರಿಗೊಬ್ಬರು ನೀವಾರು? ನೀವಾರು? ಎಂಬ ಪ್ರಶ್ನೆ ಕೇಳಿದರು. ಒಬ್ಬರು 'ನಾನು ಭಗವಚ್ಛೇಷಭೂತನು' ಎಂದರು. ಇನ್ನೊಬ್ಬರು 'ನಾನು ವಾಸುದೇವದಾಸ'ನೆಂದರು. ಮೂರನೆಯ

ವರು ನಾನು 'ಕೋಸಲೇಂದ್ರನ ದಾಸ' ಎಂದುತ್ತರ ಕೊಟ್ಟರು. ಹೀಗೆ ಇವರು ಸಂಭಾಷಿಸುತ್ತಿರುವಾಗ ಯಾರೋ ಇನ್ನೊಬ್ಬರು ಇವರ ನಡುವೆ ಹೊಕ್ಕು ಇವರನ್ನು ಒತ್ತರಿಸುವಂತೆ ಭಾಸವಾಯಿತು. ಮೊದಲಿಗೆ ಆಶ್ಚರ್ಯಕರವಾದರೂ ಯೋಗದೃಷ್ಟಿಯಿಂದ ಆತ ಮತ್ತಾರು ಅಲ್ಲದೆ ಪರಮಾತ್ಮನೇ ಎಂಬುದನ್ನು ಅರಿತರು. ಹೀಗೆ ಆ ಕತ್ತಲಲ್ಲಿಯೇ ಪರಮಾತ್ಮನ ಮಹಿಮೆಯನ್ನು 'ತಿರುವಂದಾದಿ' ಎಂಬ ಮುನ್ನೂರು ಪಾಶುರಗಳಲ್ಲಿ ಹಾಡಿದರು.

ಪೊಯ್‌ಗೈ ಆಳ್ವಾರರು ಮೊದಲನೆಯ ತಿರುವಂದಾದಿಯ ಪ್ರಥಮ ಪಾಶುರದಲ್ಲಿ ಪರಮಾತ್ಮನ ಸೃಷ್ಟಿಯನ್ನು ಕುರಿತು ಹೀಗೆಂದು ಪ್ರಾರ್ಥಿಸಿದ್ದಾರೆ :

ವೈಯಂತ ಕಳಿಯಮಾರ್ ಕಡಲೇನೆಯ್ಯಾಕ
ವೈಯ ಕದಿರೋನ್ ವಿಳಕ್ಕಪ
ಶೆಯ್ಯ 'ಶುಡವಾಳ ಯಾನಡಿಕ್ಕೇ ಶುರಟ್ಟಿನೇರ್ ಶೊನ್ಮಾಲೈ
ಇಡರಾಳ ನೀಂಗು ಹವೇಯೆನ್ರು[1]

ತಿರುಮಳಿಶೈ ಆಳ್ವಾರರು (ಭಕ್ತಿಸಾರರು) ತಿರುಮಳಿಶೈ ಎಂಬ ಗ್ರಾಮದಲ್ಲಿ ಹುಟ್ಟಿದವರು. ಇವರು ಚಕ್ರಾಂಶಸಂಭೂತರೆಂದು ಪ್ರತೀತಿ. ಭೃಗು ಮಹರ್ಷಿ ಇವರ ತಂದೆ. ತಾಯಿ ಓರ್ವ ಅಪ್ಸರ ಸ್ತ್ರೀ. ಭೃಗುಮಹರ್ಷಿಯ ತಪಸ್ಸನ್ನು ಕೆಡಿಸಿ ಪುತ್ರನನ್ನು ಪಡೆದ ಅಪ್ಸರ ಸ್ತ್ರೀ ಆ ಮಗುವನ್ನು ಒಂದು ಲತಾಕುಂಜದಲ್ಲಿ ಬಿಟ್ಟು ದೇವಲೋಕಕ್ಕೆ ತೆರಳಿದಳು. ಆ ವೇಳೆಗೆ ತಿರುವಾಳನೆಂಬ ಬೇಡ ಆ ಮಾರ್ಗದಲ್ಲಿ ಬರುತ್ತಿದ್ದು ಮಗುವಿನ ರೋದನದ ಧ್ವನಿಯನ್ನು ಕೇಳಿ ಅದರ ಬಳಿ ಹೋದನು. ಮಕ್ಕಳಿಲ್ಲದೇ ಇದ್ದ ಆತ ಆ ಮಗುವನ್ನು ಎತ್ತಿಕೊಂಡು ಮನೆಗೆ ಹೋಗಿ ಹೆಂಡತಿಯಾದ ಪಂಗಯಚ್ಚಲ್ವೆಗೆ ಕೊಟ್ಟನು. ಹೀಗೆ ತಿರುಮಳಿಶೈ ಆಳ್ವಾರರು ಬೇಡನ ಮನೆಯಲ್ಲಿ ಬೆಳೆದರು ಎಂಬ ಕಥೆ ಪ್ರಚಲಿತವಾಗಿದೆ. ಈ ಆಳ್ವಾರರು ಮುಂದೆ ವಿದ್ಯಾವ್ಯಾಸಂಗ ಮಾಡಿ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು. ಇವರು "ನಾನ್ಮುಕನ್ ತಿರುವಂದಾದಿ" ಎಂಬ ೯೬ ಪಾಶುರಗಳುಳ್ಳ ಕೃತಿಯನ್ನೂ 'ತಿರುಚ್ಚಂದವಿರುತ್ತಮ್' ಎಂಬ ೧೨೦ ಪಾಶುರಗಳುಳ್ಳ ಕೃತಿಯನ್ನೂ ರಚಿಸಿದ್ದಾರೆ. ಇವರು ಕೆಲವು ಪವಾಡ

1. ಪ್ರಪಂಚವನ್ನು ದೀಪವಾಗಿಯೂ ಸಮುದ್ರವನ್ನು ತುಪ್ಪವಾಗಿಯೂ ಅಧಿಕ ಪ್ರಕಾಶದಿಂದ ಕೂಡಿದ ಸೂರ್ಯನನ್ನು ಬತ್ತಿಯಾಗಿಯೂ ಇಟ್ಟು ಒಂದು ದೀಪ ಹೊತ್ತಿಸಿ, ಸುಂದರವಾದ ಚಕ್ರಾಯುಧವನ್ನು ಧರಿಸುವ ಶ್ರೀಮನ್ನಾರಾಯಣನ ಪಾದಪದ್ಮಗಳಲ್ಲಿ ಈ ಪದ್ಯಮಾಲೆಯನ್ನು ದುಃಖಸಮುದ್ರವು ತೊಲಗಲಿ ಎಂಬುದಕ್ಕಾಗಿ ಅರ್ಪಿಸುವೆನು.

ಗಳನ್ನು ಮಾಡಿದುದಾಗಿ ತಿಳಿದುಬರುತ್ತದೆ. ಪರಶಿವನನ್ನು ವಾದದಲ್ಲಿ ಸೋಲಿಸಿ ವಿಷ್ಣುಪಾರಮ್ಯವನ್ನು ಎತ್ತಿ ಹಿಡಿದ ಪ್ರಸಂಗದ ವರ್ಣನೆ ಆಕರ್ಷಕವಾಗಿ ಮೂಡಿಬಂದಿದೆ. ತಿರುಚ್ಚಂದವಿರುತ್ತದ ಒಂದು ಪದ್ಯದಲ್ಲಿ "ನಾನು ದ್ವಿಜರಲ್ಲಿ ಹುಟ್ಟಲಿಲ್ಲ ; ನನಗೆ ಚತುರ್ವೇದಗಳ ಅರಿವಿಲ್ಲ ; ಇಂದ್ರಿಯ ನಿಗ್ರಹವೆಂಬುದೇನೋ ನಾನರಿಯೆ ; ನನಗೆ ತಿಳಿದಿರುವುದೊಂದೇ ಶ್ರೀಹರಿಯ ಪಾದಪದ್ಮಗಳು. ದೇವ ; ನಿನ್ನ ಪೊನ್ನಡಿಗಳಲ್ಲದೆ ನನಗಿನ್ನೇನು ದಿಕ್ಕು" ಎಂದು ಭಗವಂತನಲ್ಲಿ ಶರಣಾಗತಿಯನ್ನು ಬಯಸಿದ್ದಾರೆ.

ನಮ್ಮಾಳ್ವಾರರು ತಾಮ್ರಪರ್ಣೀ ನದೀತೀರದ ಕುರುಕಾಪುರಿ ಅಥವಾ ಆಳ್ವಾರ್ ತಿರುನಗರಿ ಎಂಬ ಊರಿನಲ್ಲಿ ಪ್ರಮಾಥಿಸಂವತ್ಸರದ ವೃಷಭಮಾಸ, ಶುಕ್ರವಾರದಂದು ವಿಶಾಖನಕ್ಷತ್ರದಲ್ಲಿ ಜನಿಸಿದರು. ಉಡೈನಂಗೈಯಾರ್ ಇವರ ತಾಯಿ. ತಂದೆ ವೆಳ್ಳಾಳರ ಕಾರಿಯಾರ್. ಇವರು ಸೇನಾನಾಥಾಂಶ ಸಂಭೂತರೆಂಬ ಪ್ರತೀತಿ ಇದೆ. ಇವರಿಗೆ ಶಠಕೋಪ, ಮಾರನ್ ಮತ್ತು ವಕುಳಾಭರಣರೆಂಬ ಪರ್ಯಾಯ ನಾಮಗಳಿವೆ. ಹನ್ನೆರಡು ಜನ ಆಳ್ವಾರರ ಪೈಕಿ ನಮ್ಮಾಳ್ವಾರರಿಗೆ ಪ್ರಮುಖ ಸ್ಥಾನವಿದೆ. ನಮ್ಮಾಳ್ವಾರರು ಹುಟ್ಟಿದಾರಭ್ಯ ಹದಿನಾರು ವರ್ಷಗಳವರೆಗೆ ಹುಣಸೆಮರದ ಪೊಟರೆಯಲ್ಲಿ ಕಣ್ಣು, ಬಾಯಿ ತೆರೆಯದೆ ಯೋಗನಿದ್ರೆಯಲ್ಲಿದ್ದರೆಂಬ ಐತಿಹ್ಯವಿದೆ. ಬದರಿಕಾಶ್ರಮದಿಂದ ಅಯೋಧ್ಯೆಗೆ ಹಿಂತಿರುಗುತ್ತಿದ್ದ ಮಧುರಕವಿ ಆಳ್ವಾರರಿಂದ ನಿದ್ರೆ ತಿಳಿದೆದ್ದರೆಂದು ಹೇಳಲಾಗುತ್ತದೆ. ನಮ್ಮಾಳ್ವಾರರು ತಮ್ಮ ಅನುಭವವನ್ನು ತಿರುವಿರುತ್ತಂ (೧೦೦ ಪಾಶುರ), ತಿರುವಾಶಿರಿಯಂ (೭ ಪಾಶುರ), ಪೆರಿಯ ತಿರುವಂದಾದಿ (೮೭ ಪಾಶುರ), ತಿರುವಾಯ್‌ಮೊಳಿ (೧೧೦೨ ಪಾಶುರ) ಎಂಬ ನಾಲ್ಕು ಕೃತಿಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಈ ನಾಲ್ಕು ಕೃತಿಗಳೂ ನಾಲ್ಕು ವೇದಗಳಿಗೆ ಸಮಾನವೆಂದು ಮಾನ್ಯವಾಗಿವೆ. ಇವುಗಳಲ್ಲಿ ತಿರುವಾಯ್‌ಮೊಳಿಗೆ ತಮಿಳು ಸಾಹಿತ್ಯದಲ್ಲಿ ವಿಶೇಷವಾದ ಸ್ಥಾನವಿದೆ. ಶೃಂಗಾರ ಹಾಗೂ ಮಧುರಭಾವದ ಪಾಶುರಗಳನ್ನು ಇವರ ಕೃತಿಗಳಲ್ಲಿ ಕಾಣಬಹುದು.

ಮಧುರಕವಿ ಆಳ್ವಾರರು ನಮ್ಮಾಳ್ವಾರರ ಪ್ರಧಾನ ಶಿಷ್ಯರು. ಇವರು ಆಳ್ವಾರ್ ತಿರುನಗರಿಯ ಹತ್ತಿರವಿರುವ ತಿರುಕ್ಕೋಳೂರು ಎಂಬ ಊರಿನಲ್ಲಿ ಈಶ್ವರಸಂವತ್ಸರ, ಮೇಷಮಾಸ, ಶುಕ್ಲಪಕ್ಷದ ಚಿತ್ತಾನಕ್ಷತ್ರ ಶುಕ್ರವಾರದಂದು ಪರಮಾತ್ಮನ ಗಣಾಂಶರಾಗಿ ಜನ್ಮತಾಳಿದರು. ಕ್ಷೇತ್ರ ಪರ್ಯಟನೆಗೆ ಹೊರಟ ಇವರು ಅಯೋಧ್ಯಾ, ಮಧುರಾ, ಕಾಶಿ, ಕಂಚಿ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಸ್ವದೇಶಕ್ಕೆ ಹಿಂತಿರುಗುತ್ತಿದ್ದಾಗ ಕಾಶಿಯಲ್ಲಿ ಒಂದು ದಿವ್ಯ ತೇಜಸ್ಸನ್ನು ಕಂಡರಂತೆ. ಆ ದಿವ್ಯ ತೇಜಸ್ಸು ಅವರನ್ನು ಆಳ್ವಾರ್‌ತಿರು

ನಗರಿಯವರೆಗೆ ಕರೆತಂದಿತು. ಅಲ್ಲಿ ಹುಣಸೇಮರದ ಪೊಟರೆಯಲ್ಲಿ ತಪಸ್ಸು ಮಾಡುತ್ತಿದ್ದ ಯೋಗಿಯನ್ನು (ನಮ್ಮಾಳ್ವಾರರನ್ನು) ಕಂಡು ತಮ್ಮ ವಿನಯ ಹಾಗೂ ಭಕ್ತಿಯಿಂದ ಅವರನ್ನು ಒಲಿಸಿಕೊಂಡು ಅವರ ಶಿಷ್ಯರಾದರೆಂಬ ಪ್ರತೀತಿ ಇದೆ. ಹನ್ನೊಂದು ಪಾಶುರಗಳನ್ನೊಳಗೊಂಡ 'ಕಣ್ಣಿನುಣ್ ಶಿರ ತ್ತಾಂಬು' ಎಂಬ ಇವರ ಕೃತಿ ಭಕ್ತಿಗೀತವೆಂದು ಪ್ರಸಿದ್ಧವಾಗಿದೆ.

ತಿರುವಾಂಕೂರಿನ ರಾಜರಾಗಿದ್ದ ಕುಲಶೇಖರರು ಕುಂಭಮಾಸ,ಪುನರ್ವಸು ನಕ್ಷತ್ರದಲ್ಲಿ ಕೌಸ್ತುಭಾಂಶರಾಗಿ ಕೊಲ್ಲಿನಗರದಲ್ಲಿ ಜನಿಸಿದರು. ಆಸ್ಥಾನದಲ್ಲಿದ್ದ ಅಧಿಕಾರಿಗಳ ವರ್ತನೆಯಿಂದ ಬೇಸರಗೊಂಡ ಇವರು ಅರಸೊತ್ತಿಗೆಯನ್ನು ತ್ಯಜಿಸಿ ವಿರಾಗಿಗಳಾದರು. ಇವರು ರಚಿಸಿರುವ 'ಪೆರುಮಾಳ್ ತಿರುವೊಳಿ' ಯಲ್ಲಿ ೧೧೦ ಪಾಶುರಗಳಿವೆ. ಇವರ 'ಮುಕುಂದ ಮಾಲಾ' ಸ್ತೋತ್ರವು ಸಂಸ್ಕೃತದಲ್ಲಿದ್ದು ಇದರಲ್ಲಿ ಶ್ರೀಕೃಷ್ಣನ ಬಾಲಲೀಲೆಗಳನ್ನು ಚಿತ್ರಿಸಲಾಗಿದೆ. ಇದು ಜಯದೇವ ಕವಿಯ 'ಗೀತಗೋವಿಂದ'ದಂತೆಯೇ ಜನರ ಮನಸ್ಸನ್ನು ಸೂರೆಗೊಂಡಿದೆ. ತಿರುಪತಿಯ ಶ್ರೀನಿವಾಸನಲ್ಲಿ ಇವರಿಗೆ ಅಪಾರವಾದ ಭಕ್ತಿ.. ಶ್ರೀನಿವಾಸನ ದರ್ಶನವನ್ನು ಸದಾಕಾಲವೂ ಮಾಡಬೇಕೆಂಬ ಅಪೇಕ್ಷೆ ಉಳ್ಳವರು. ಆದ್ದರಿಂದ ಗರ್ಭಗುಡಿಯ ಹೊಸ್ತಿಲಾಗಿರುವ ಬಯಕೆಯನ್ನು 'ಪಡಿಯಾಯ್ ಕಿಡನ್ದು ಉನ್ ಪವಳವಾಯ್ ಕಾಣ್ಬೇನೇ' ಎಂಬ ಮಾತು ಗಳಲ್ಲಿ ವ್ಯಕ್ತಪಡಿಸಿದ್ದಾರೆ.

ವಿಷ್ಣುಚಿತ್ತರು ಪೆರಿಯಾಳ್ವಾರ್ ಎಂಬ ಹೆಸರಿನಿಂದ ಪ್ರಸಿದ್ಧರಾಗಿ ದ್ದಾರೆ. ವೇದಶಾಸ್ತ್ರ ಪಂಡಿತರಾದ ಮುಕುಂದಾಚಾರ್ಯ ಹಾಗೂ ಪದ್ಮ ದಂಪತಿಗಳ ಪುತ್ರರಾದ ಇವರು ಮಿಥುನಮಾಸದ ಶುಕ್ಲ ಏಕಾದಶಿ ದಿನದಂದು ಶ್ರೀ ವಿಲ್ಲಿಪುತ್ತೂರಿನಲ್ಲಿ ಗರುಡಾಂಶರಾಗಿ ಜನ್ಮ ತಾಳಿದರು. ಬ್ರಹ್ಮಚಾರಿ ಯಾಗಿದ್ದುಕೊಂಡು ವಿಷ್ಣುವಿನ ಕೈಂಕರ್ಯದಲ್ಲಿಯೇ ಜೀವನವನ್ನು ವಿನಿ ಯೋಗಿಸಿದವರು. ಪಾಂಡ್ಯರಾಜನಿಂದ ಇವರಿಗೆ 'ಪಟ್ಟರ್‌ಪಿರಾನ್' ಎಂಬ ಗೌರವಸೂಚಕ ಬಿರುದು ದೊರಿತಿದ್ದುದಾಗಿ ತಿಳಿದುಬರುತ್ತದೆ. ೧೨ ಪಾಶುರ ಗಳುಳ್ಳ 'ತಿರುಪ್ಪಲ್ಲಾಂಡು' ಹಾಗೂ ೪೭೩ ಪಾಶುರಗಳುಳ್ಳ 'ಪೆರಿಯಾಳ್ವಾರ್ ತಿರುಮೊಳಿ' ಇವರ ಕೃತಿಗಳು. ಶ್ರೀ ಕೃಷ್ಣನ ಬಗೆಗೆ ಇವರಿಗಿದ್ದುದು ವಾತ್ಸಲ್ಯ ಭಕ್ತಿ. 'ಪೆರಿಯಾಳ್ವಾರ್ ತಿರುಮೊಳಿ'ಯಲ್ಲಿ ಕೃಷ್ಣನ ಲೀಲೆಗಳನ್ನು ವರ್ಣಿಸಿ ದ್ದಾರೆ. ಈ ಕೃತಿಯ ಕೆಲವು ಭಾಗ ಭಾಗವತ ದಶಮಸ್ಕಂಧದ ಸಂಗ್ರಹರೂಪ ವೆನ್ನಬಹುದಾಗಿದೆ.

ವಿಷ್ಣುಚಿತ್ತರು ತಮ್ಮ ಸಾಕುಮಗಳಾದ ಆಂಡಾಳನ್ನು ವಿಷ್ಣುವಿನೊಂ ದಿಗೆ ವಿವಾಹ ಮಾಡಿದವರು, ಹಾಗಾಗಿ ವಿಷ್ಣುವಿಗೆ ಮಾವನೆನಿಸಿದರು,

ವಿಷ್ಣುವಿಗೆ 'ಮಂಗಳಾಶಾಸನ'ವನ್ನು ಹಾಡಿದ್ದಾರೆ.*

ಪೆರಿಯಾಳ್ವಾರರಿಗೆ ತೋಟದಲ್ಲಿ ದೊರೆತ ಹೆಣ್ಣು ಮಗುವೇ ಆಂಡಾಳ್ ಅಥವಾ ಗೋದಾದೇವಿ. ಈಕೆ ಪ್ರತಿದಿನ ತನ್ನ ತಂದೆಯ ಆರಾಧ್ಯದೈವ ಶ್ರೀಕೃಷ್ಣನಿಗೆ ವಿವಿಧ ಪುಷ್ಪಗಳಿಂದ ಕಟ್ಟಿದ ಹೂವಿನ ಮಾಲೆಯನ್ನು ಸಿದ್ಧಪಡಿಸಿಡುತ್ತಿದ್ದಳು. ಹಾಗೆ ಕಟ್ಟಿದ ಹಾರವನ್ನು ಮೊದಲು ತಾನು ಧರಿಸಿ ಅದರ ಸೌಂದರ್ಯವನ್ನು ನೋಡಿ ಅನಂತರ ದೇವರಿಗೆ ಅರ್ಪಿಸಲು ಇಡುತ್ತಿದ್ದಳು. ಒಮ್ಮೆ ಇವಳ ಈ ಕೃತ್ಯವನ್ನು ಕಂಡ ಪೆರಿಯಾಳ್ವಾರರು ಕೋಪಗೊಂಡು ಮಗಳನ್ನು ಆಕ್ಷೇಪಿಸಿದುದಲ್ಲದೆ ಆ ಹಾರವನ್ನು ಭಗವಂತನಿಗೆ ಅರ್ಪಿಸಲಿಲ್ಲ. ಆದರೆ ಅದೇ ದಿನ ರಾತ್ರಿ ಪೆರಿಯಾಳ್ವಾರರ ಕನಸಿನಲ್ಲಿ ಕೃಷ್ಣನು ಕಾಣಿಸಿಕೊಂಡು ಗೋದೆಯು ಮುಡಿದ ಹಾರವೇ ನನಗೆ ಪ್ರಿಯವೆಂದು ಹೇಳಿ ಅವರ ಮನೋವ್ಯಥೆಯನ್ನು ನಿವಾರಿಸಿದನೆಂಬ ಹೇಳಿಕೆಯಿದೆ. ಈ ಘಟನೆಯ ಹಿನ್ನೆಲೆಯಿಂದಲೇ ಗೋದಾದೇವಿಗೆ ''ಶೂಡಿ ಕುಡುತ್ತ ನಾಚ್ಚಿಯಾರ್'' ಎಂಬ ಹೆಸರೂ ರೂಢಿಗೆ ಬಂದಿತು. ಈಕೆಯನ್ನು ಭಕ್ತೆಯರಾದ ಮೀರ ಹಾಗೂ ಅಕ್ಕಮಹಾದೇವಿಯರೊಂದಿಗೆ ಹೋಲಿಸಬಹುದು. ಗೋದಾದೇವಿಯನ್ನು ಭೂದೇವಿಯ ಅಂಶವೆಂದು ಹೇಳಲಾಗುತ್ತದೆ. ೧೪೩ ಪಾಶುರಗಳುಳ್ಳ 'ನಾಚ್ಚಿಯಾರ್ ತಿರುಮೊಳಿ' ಹಾಗೂ ೩೦ ಪಾಶುರಗಳುಳ್ಳ 'ತಿರುಪ್ಪಾವೈ' ಈಕೆ ರಚಿಸಿದ ಕೃತಿಗಳು. 'ತಿರುಪ್ಪಾವೈ'ಗೆ ತಮಿಳು ಸಾಹಿತ್ಯದಲ್ಲಿ ವಿಶೇಷವಾದ ಸ್ಥಾನವಿದೆ. ಧನುರ್ಮಾಸದಲ್ಲಿ ಇದನ್ನು ಹಾಡುವ ಪದ್ಧತಿ ಇದೆ. ಆಂಡಾಳ್ ಪರಮಾತ್ಮನನ್ನೇ ಪತಿ ಎಂದು ನಂಬಿ, ಕೊನೆಗೆ ಶ್ರೀರಂಗದ ರಂಗನಾಥನಲ್ಲಿ ಐಕ್ಯಳಾದಳೆಂಬ ಮಾತಿದೆ. ಈಕೆಯ ಕೆಲವು ಪಾಶುರಗಳ ಭಾವ ಅಕ್ಕಮಹಾದೇವಿಯ ವಚನಗಳಲ್ಲೂ ಕಂಡುಬರುತ್ತದೆ. ತಿರುಪ್ಪಾವೈ ಉಪನಿಷತ್ತಿನ ಸಾರವಾಗಿದ್ದು ಮೋಕ್ಷಪ್ರಾಪ್ತಿಗಾಗಿ ಮಾಡುವ ವ್ರತವನ್ನು ಇದರಲ್ಲಿ ವಿವರಿಸಲಾಗಿದೆ. 'ನಾಚ್ಚಿಯಾರ್ ತಿರುಮೊಳಿ'ಯ ಆರನೆಯ ದಶಕದಲ್ಲಿ ಆಂಡಾಳ್ ತಾನು ಶ್ರೀಕೃಷ್ಣನನ್ನು ವಿವಾಹವಾದಂತೆ ಕಂಡ ಕನಸಿನ ವೈಭವವನ್ನು ನಿರೂಪಿಸಿರುವ ರೀತಿ ಅತ್ಯಂತ ಸೊಗಸಾಗಿ ಮೂಡಿಬಂದಿದೆ.

ತೊಂಡಿರಡಿಪ್ಪೊಡಿಯಾಳ್ವಾರರು ಮಂಡಂಗುಡಿ ಎಂಬ ಊರಿನಲ್ಲಿ ಪ್ರಭವಸಂವತ್ಸರದ ಮಾರ್ಗಶಿರ ಮಾಸದ ಕೃಷ್ಣಚತುರ್ದಶಿ ಮಂಗಳವಾರ ಜ್ಯೇಷ್ಠಾನಕ್ಷತ್ರದಲ್ಲಿ ಪರಮಾತ್ಮನ ವೈಜಯಂತೀಮಾಲಾಂಶರಾಗಿ ಜನಿಸಿದರು. ಇವರಿಗೆ ವಿಪ್ರನಾರಾಯಣ ಹಾಗೂ ಭಕ್ತಾಂಘ್ರಿರೇಣು ಎಂಬ ಪರ್ಯಾಯ

* ಕಿರಿಯರು ಹಿರಿಯರಿಗೆ ಮಾಡುವ ಹಾರೈಕೆಗೆ ಮಂಗಳಾಶಾಸನವೆನ್ನುವರು.

ನಾಮಗಳೂ ಇವೆ. ಇವರು ಶ್ರೀರಂಗದ ಸಮೀಪದಲ್ಲಿದ್ದ ತಿರುಕ್ಕರಂಬನೂರಿನಲ್ಲಿ ವಾಸಿಸುತ್ತಿದ್ದು ರಂಗನಾಥನ ಭಕ್ತರಾಗಿದ್ದರು. ಒಮ್ಮೆ ದೇವದೇವಿ ಎಂಬ ವಾರಾಂಗನೆ ಚೋಳ ಅರಸನಿಂದ ಸನ್ಮಾನಿತಳಾಗಿ ಹಿಂತಿರುಗುವಾಗ ತೊಂಡಿರಡಿಪ್ಪೊಡಿಯರನ್ನು ಕಂಡಳು.ಅವರ ರೂಪಕ್ಕೆ ಮರುಳಾದ ಆಕೆ ಅವರನ್ನು ಲೌಕಿಕ ಬಂಧನದಲ್ಲಿ ಸಿಲುಕಿಸಬೇಕೆಂದು ನಿರ್ಧರಿಸಿ, ಅದಕ್ಕೆ ತಕ್ಕಂತೆ ಮೋಸದ ಜಾಲವನ್ನು ರಚಿಸಿದಳು. ಇದನ್ನರಿಯದ ಆಳ್ವಾರರು ತಮಗೆ ಅರಿವಿಲ್ಲದಂತೆಯೇ ವ್ಯಾಮೋಹಕ್ಕೆ ಒಳಗಾಗಿ ತಮ್ಮ ಸರ್ವಸ್ವವನ್ನೂ ಕಳೆದುಕೊಂಡರು. ಕೊನೆಗೆ ಅರಮನೆಯ ಚಿನ್ನದ ಬಟ್ಟಲನ್ನು ಕದ್ದ ಅಪವಾದಕ್ಕೂ ಒಳಗಾದರು. ಈ ಘಟನೆ ಆಳ್ವಾರರ ಜೀವನದ ದಿಕ್ಕನ್ನು ಬದಲಿಸಿತು. ಪಶ್ಚಾತ್ತಾಪಕ್ಕೀಡಾದ ಆಳ್ವಾರರು ಮತ್ತೆ ವೈರಾಗ್ಯಜೀವನವನ್ನು ಆಶ್ರಯಿಸಿದರು. ದೇವದೇವಿಯ ಬಗೆಗಿದ್ದ ಪ್ರೇಮ ರಂಗನಾಥನ ಕಡೆ ತಿರುಗಿತು. ದೇವದೇವಿಯು ದಾಸರಾಗಿದ್ದ ಇವರು ಭಕ್ತರ, ಭಾಗವತರ ದಾಸರಾದರು. ಅವರ ದುರ್ದೆಸೆಗೆ ಕಾರಣಳಾದ ದೇವದೇವಿಯೂ ವ್ಯಥಿತಳಾಗಿ ತನ್ನ ಸರ್ವಸ್ವವನ್ನೂ ರಂಗನಾಥನಿಗೆ ಅರ್ಪಿಸಿ ಸನ್ಯಾಸಿನಿಯಾದಳೆಂದು ಹೇಳಲಾಗಿದೆ. ತೊಂಡಿರಡಿಪ್ಪೊಡಿಆಳ್ವಾರರು ೪೫ ಪಾಶುರಗಳುಳ್ಳ 'ತಿರುಮಾಲೈ' ಹಾಗೂ ೧೦ ಪಾಶುರಗಳುಳ್ಳ 'ತಿರುಪ್ಪಳ್ಳಿ ಎಳುಚ್ಚಿ' ಎಂಬ ಎರಡು ಪ್ರಬಂಧಗಳನ್ನು ರಚಿಸಿದ್ದಾರೆ.

'ತಿರುಮಾಲೈ'ನಲ್ಲಿ ಉಪನಿಷತ್ತು, ವಿಷ್ಣುಧರ್ಮೋತ್ತರಪುರಾಣ ಹಾಗೂ ಭಾಗವತದ ಕೆಲವು ವಿಷಯಗಳನ್ನು ಕುರಿತಂತೆ ಪಾಶುರಗಳನ್ನು ರಚಿಸಿದ್ದಾರೆ. ಈ ಪ್ರಬಂಧವನ್ನು ಕುರಿತು ''ಕೇವಲ ಸಾಹಿತ್ಯವೆಂದೇ ಬಗೆದರೂ ಈ ಕೃತಿ ಅತ್ಯುತ್ತಮವಾದ ಕವಿತೆ ಎಂದು ಒಪ್ಪಬೇಕು. ಇದರ ನೋಟ ಕವಿಯದು, ಇದರ ಮಾತು ಕವಿಯದು. ಇದರ ಕಲೆ ಸಂಪೂರ್ಣವಾಗಿ ಕಾವ್ಯದ್ದು'' ಎಂದು 'ಶ್ರೀನಿವಾಸ'ರು ತಮ್ಮ 'ವಿಮರ್ಶೆ' ಕೃತಿಯಲ್ಲಿ ಹೇಳಿದ್ದಾರೆ. 'ತಿರುಪ್ಪಳ್ಳಿಎಳುಚ್ಚಿ' ರಂಗನಾಥನ ಸುಪ್ರಭಾತಸ್ತೋತ್ರವನ್ನೊಳಗೊಂಡಿದೆ.

ಅಂತ್ಯಜರಾದ ತಿರುಪ್ಪಾಣಾಳ್ವಾರರ ಜನ್ಮಸ್ಥಳ ಉರೈಯೂರ್. ಇವರು ಪರಮಾತ್ಮನ ಶ್ರೀವತ್ಸಾಂಶರೆಂದು ಪ್ರತೀತಿ. ದುರ್ಮತಿಸಂವತ್ಸರ, ವೃಶ್ಚಿಕಮಾಸ ಕೃಷ್ಣಪಕ್ಷ ದ್ವಿತೀಯ ರೋಹಿಣೀ ನಕ್ಷತ್ರ ಬುಧವಾರದಂದು ಇವರು ಜನಿಸಿದರು. ಭಗವಂತನಿಗೆ ನಿರ್ಮಲವಾದ ಭಕ್ತಿ ಮುಖ್ಯವೇ ಹೊರತು ಜಾತಿಯಲ್ಲವೆಂಬುದು ಇವರ ಚರಿತ್ರೆಯಿಂದ ತಿಳಿದುಬರುತ್ತದೆ. ಭಗವದ್ಭಕ್ತರೆನಿಸಿದ ಇವರ ಜೀವನದ ಘಟನೆಗಳನ್ನು ಅವಲೋಕಿಸಿದಾಗ ಓದುಗನಿಗೆ ಕನಕದಾಸರ ನೆನಪು ಸುಳಿಯದಿರದು.

ತಿರುಪ್ಪಾಣರು ಅಂತ್ಯಜರಾದುದರಿಂದ ದೇವಸ್ಥಾನ ಪ್ರವೇಶಿಸಲು ಅನುಮತಿ ಇರಲಿಲ್ಲ. ಹಾಗಾಗಿ ದಿನವೂ ದೇವಾಲಯಕ್ಕೆ ಎದುರಾಗಿ ಭಕ್ತಿಯಿಂದ ರಂಗನಾಥನನ್ನು ಸ್ತುತಿಸುತ್ತ ಕುಳಿತಿರುತ್ತಿದ್ದರು. ಲೋಕಸಾರಂಗರೆಂಬ ವಿಪ್ರರು ಪ್ರತಿದಿನ ಆ ರಂಗನಾಥನ ಮಜ್ಜನಕ್ಕಾಗಿ ನೀರನ್ನು ತರುತ್ತಿದ್ದರು. ಒಂದು ದಿನ ನೀರನ್ನು ತರುತ್ತಿದ್ದಾಗ ಎದುರಿನಲ್ಲಿ ಭಗವಂತನನ್ನು ಸ್ತುತಿಸುತ್ತಾ ಕುಳಿತ್ತಿದ್ದ ತಿರುಪ್ಪಾಣರನ್ನು ಕಂಡು ದಾರಿ ಬಿಡಲು ಹೇಳಲಾಯಿತು. ಆದರೆ ಭಗವಂತನ ಧ್ಯಾನದಲ್ಲಿ ಮುಳುಗಿದ್ದ ತಿರುಪ್ಪಾಣರಿಗೆ ಕೇಳಿಸಲಿಲ್ಲವಾಗಿ ಅವರು ಅಲ್ಲಿಂದ ಕದಲಲಿಲ್ಲ. ಆಗ ಲೋಕಸಾರಂಗರು ಅಲ್ಲಿಯೇ ಬಿದ್ದಿದ್ದ ಕಲ್ಲಿನಿಂದ ಆಳ್ವಾರರ ಹಣೆಗೆ ಹೊಡೆಯಲು ರಕ್ತ ಸುರಿಯಲಾರಂಭಿಸಿತು. ಆಳ್ವಾರರು ತಮ್ಮ ಕೃತ್ಯಕ್ಕೆ ಕ್ಷಮೆ ಬೇಡಿ ಅಲ್ಲಿಂದ ತೆರಳಿದರು. ಆದರೆ ಲೋಕಸಾರಂಗರು ತಮ್ಮ ಕೃತ್ಯದ ಪ್ರಾಯಶ್ಚಿತ್ತಾರ್ಥವಾಗಿ ಭಗವಂತನ ಅಪ್ಪಣೆ ಮೇರೆಗೆ ಆಳ್ವಾರರನ್ನು ತಮ್ಮ ಹೆಗಲ ಮೇಲೆ ಕೂಡಿಸಿಕೊಂಡು ದೇವಾಲಯಕ್ಕೆ ಕರೆದುಕೊಂಡು ಬರುವ ಪ್ರಸಂಗ ಒದಗಿತು. ಇದರಿಂದ ತಿರುಪ್ಪಾಣಾಳ್ವಾರರಿಗೆ 'ಮುನಿವಾಹನ' ಎಂಬ ಬಿರುದು ಪ್ರಾಪ್ತವಾಯಿತು. ಭಗವಂತನ ದರ್ಶನದಿಂದ ತಮಗಾದ ಆನಂದಾನುಭವವನ್ನು 'ಅಮಲನಾದಿ ಪಿರಾನ್' ಎಂಬ ಪ್ರಬಂಧದಲ್ಲಿ ೧೦ ಪಾಶುರಗಳಲ್ಲಿ ಹಾಡಿದ್ದಾರೆ. ದಿವ್ಯಸುಂದರ ಮೂರ್ತಿಯನ್ನು ಕಂಡ ಕಣ್ಣುಗಳು ಬೇರೇನನ್ನೂ ಕಾಣವು ಎಂಬ ಅಭಿಪ್ರಾಯ "ಎನ್ನ ಮುದನೈಕ್ಕಂಡ ಕಣ್‌ಗಳ್ ಮತ್ತೊನ್ರಿನೈಕ್ಕಾಣಾವೇ" ಎಂಬ ಮಾತುಗಳಲ್ಲಿ ವ್ಯಕ್ತವಾಗಿದೆ.

ಬೇಡರ ಗುಂಪಿಗೆ ಸೇರಿದ ತಿರುಮಂಗೈಆಳ್ವಾರರು ನಳಸಂವತ್ಸರ ವೃಶ್ಚಿಕಮಾಸದ ಕೃತ್ತಿಕಾ ನಕ್ಷತ್ರದಲ್ಲಿ ತಿರುವಾಲಿ ತಿರುನಗರಿಯಲ್ಲಿ ಜನಿಸಿದರು. ಚತುರ್ಥವರ್ಣದಲ್ಲಿ ಜನಿಸಿದ ಇವರು ಪರಮಾತ್ಮನ ಶಾರ್ಙ್ಗಧನುಸ್ಸಿನ ಅಂಶವೆಂದು ಭಾವಿಸಲಾಗಿದೆ. ಚೋಳ ಅರಸನ ಸೈನ್ಯಾಧಿಪತಿಯಾಗಿದ್ದ ತಿರುಮಂಗೈ ಸ್ವಸಾಮರ್ಥ್ಯದಿಂದ ಅರಸನನ್ನು ಮೆಚ್ಚಿಸಿ ಸಣ್ಣ ಪ್ರದೇಶದ ಅಧಿಪತಿಯಾದರು. ಅಧಿಕಾರಿಯಾಗಿದ್ದು ಆಳ್ವಾರರಾಗಿ ಪರಿವರ್ತನೆ ಹೊಂದಿದುದು ಕೂಡ ವಿಚಿತ್ರವಾದ ಸನ್ನಿವೇಶದಲ್ಲಿ.

ವೈಶ್ಯ ಪಂಡಿತನೊಬ್ಬನ ಸಾಕುಮಗಳಾದ ಕುಮುದವಲ್ಲಿ ಕಪಿಲಮಹರ್ಷಿಗಳ ಶಾಪದಿಂದ ಮನುಷ್ಯ ರೂಪವನ್ನು ಪಡೆದಿದ್ದ ಅಪ್ಸರ ಸ್ತ್ರೀ. ಈಕೆಯ ರೂಪಸೌಂದರ್ಯದ ವಿಷಯ ಕರ್ಣಾಕರ್ಣಿಕೆಯಾಗಿ ತಿರುಮಂಗೈಗೂ ತಲುಪಿತು. ಆಕೆಯನ್ನು ವಿವಾಹವಾಗಬೇಕೆಂಬ ಇಚ್ಛೆಯಿಂದ ಪಂಡಿತನ ಮನೆಗೆ ಬಂದು ಅಲ್ಲಿ ಕುಮುದವಲ್ಲಿಯನ್ನು ಮದುವೆಯಾಗುವ ತನ್ನ ಅಭಿಲಾಷೆಯನ್ನು

ಆತನಿಗೆ ತಿಳಿಸಿದನು. ತಿರುಮಂಗೈಯು ಅಪೇಕ್ಷೆಯನ್ನು ಕುಮುದವಲ್ಲಿಗೆ ತಿಳಿಸಲಾಗಿ ಆಕೆ ತನ್ನ ಎರಡು ನಿಯಮಗಳಿಗೆ ಒಪ್ಪುವುದಾದಲ್ಲಿ ಮಾತ್ರ ವಿವಾಹಕ್ಕೆ ಅನುಮತಿಸುವುದಾಗಿ ಹೇಳಿದಳು. ಅದೇನೆಂದರೆ ತನ್ನನ್ನು ಮದುವೆಯಾಗುವವನು ವೈಷ್ಣವ ದೀಕ್ಷೆಯನ್ನು ಸ್ವೀಕರಿಸಿದವನಾಗಿರಬೇಕು ; ಎರಡನೆಯದಾಗಿ ಪ್ರತಿದಿನವೂ ಸಾವಿರದ ಎಂಟುಮಂದಿ ವಿಷ್ಣುಭಕ್ತರಿಗೆ ಸಂತರ್ಪಣೆ ಮಾಡಿದ ನಂತರವೇ ಭೋಜನ ಮಾಡಬೇಕು. ಕುಮುದವಲ್ಲಿಯ ಎರಡೂ ನಿಯಮಗಳನ್ನು ಒಪ್ಪಿದ ತಿರುಮಂಗೈ ಆಕೆಯನ್ನು ವಿವಾಹವಾದನು. ಆಕೆ ಹೇಳಿದ ನಿಯಮವನ್ನು ಪಾಲಿಸಲು ಬೊಕ್ಕಸದ ಹಣವನ್ನೆಲ್ಲಾ ವಿನಿಯೋಗಿಸಿ ಅರಸನ ಅವಕೃಪೆಗೆ ಒಳಗಾದನು. ಅಲ್ಲದೆ ಶಿಕ್ಷೆಗೂ ಗುರಿಯಾಗಬೇಕಾಯಿತು. ದೈವ ಸಹಾಯದಿಂದ ಬೊಕ್ಕಸದ ಹಣವನ್ನೇನೋ ಹಿಂತಿರುಗಿಸಿದ. ಆದರೆ ಇದ್ದ ಉದ್ಯೋಗವನ್ನು ಕಳೆದುಕೊಳ್ಳಬೇಕಾಯಿತು. ಇಷ್ಟಾದರೂ ಪತ್ನಿಗೆ ಕೊಟ್ಟ ಮಾತಿಗೆ ತಪ್ಪಲು ಇಷ್ಟಪಡಲಿಲ್ಲ. ಭಾಗವತರ ಸಂತರ್ಪಣೆಯ ವ್ರತವನ್ನು ಪಾಲಿಸಲು ದರೋಡೆಯ ಮಾರ್ಗವನ್ನು ಅನುಸರಿಸಿದನು. ಕೊನೆಗೊಮ್ಮೆ ಮಾರುವೇಷದಲ್ಲಿದ್ದ ಲಕ್ಷ್ಮೀನಾರಾಯಣನನ್ನೇ ದರೋಡೆ ಮಾಡಲು ಪ್ರಯತ್ನಿಸಿ ವಿಫಲನಾಗಿ ಅವರಿಂದ ಅಷ್ಟಾಕ್ಷರೀ ಮಂತ್ರೋಪದೇಶವನ್ನು ಪಡೆದು ಪರಮಾತ್ಮನ ಪರಮಭಕ್ತನಾಗಿ ಪರಿವರ್ತಿತನಾದನು.

ಆಳ್ವಾರರುಗಳಲ್ಲಿ ಕಡೆಯ ಆಳ್ವಾರರಾದ ತಿರುಮಂಗೈ ಆರು ಪ್ರಬಂಧಗಳನ್ನು ರಚಿಸಿದ್ದಾರೆ. ಪೆರಿಯ ತಿರುವಾಯ್‌ಮೊಳಿ (೧೦೮೪ ಪಾಶುರ), ತಿರುಕ್ಕುರುನ್ದಾಂಡಕಂ (೨೦ ಪಾಶುರ), ತಿರುನೆಡುನ್ದಾಂಡಕಂ (೩೦ ಪಾಶುರ), ತಿರುವೆಳುಕ್ಕೂರ್‌ತಿರುಕ್ಕೈ (೫೦ ಪಂಕ್ತಿಯ ಒಂದೇ ಪಾಶುರ), ಪೆರಿಯ ತಿರುಮಡಲ್ (೧೭೪ ಪಾಶುರ), ಶಿರಿಯ ತಿರುಮಡಲ್ (೪೦ ಪಾಶುರ).

ನಮ್ಮಾಳ್ವಾರರು ರಚಿಸಿರುವ ನಾಲ್ಕು ವೇದರೂಪದ ಪ್ರಬಂಧಕ್ಕೆ ಇವು ಆರು ವೇದಾಂಗಗಳೆನಿಸಿವೆ. ತಿರುಮಂಗೈ ಅವರ ಜೀವನ ಹಲವು ಮುಖಗಳಿಂದ ಕೂಡಿದ್ದರಿಂದ ಇವರ ಕೃತಿಗಳಲ್ಲೂ ಅವು ಪ್ರತಿಬಿಂಬಿತವಾಗಿವೆ. ಉಳಿದ ಯಾವ ಆಳ್ವಾರರುಗಳಲ್ಲೂ ಕಂಡುಬಾರದ ಸಾಮಾಜಿಕ ಜೀವನದ ರೀತಿ–ನೀತಿಗಳ ಚಿತ್ರಣ ಇವರ ಕೃತಿಗಳಲ್ಲಿ ಕಂಡುಬರುತ್ತದೆ. ಸಮಾಜ ಸುಧಾರಣೆಯ ಕೆಲವು ವಿಚಾರಗಳೂ ಇವರ ಪಾಶುರಗಳಲ್ಲಿ ಇಣುಕಿವೆ. ಇವರು ಸುಮಾರು ೮೬ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿರುವರಲ್ಲದೆ ಅವುಗಳ ವರ್ಣನೆಯನ್ನೂ ಮಾಡಿದ್ದಾರೆ. ಆಶು, ವಿಸ್ತಾರ, ಮಧುರ ಮತ್ತು ಚಿತ್ರ ಎಂಬ ನಾಲ್ಕು ಬಗೆಯ ಪದ್ಯಗಳನ್ನು ರಚಿಸಿ 'ನಾಲ್ ಕವಿ ಪೆರುಮಾಳ್' ಎಂದು ಪ್ರಸಿದ್ಧರಾಗಿದ್ದಾರೆ. ಇವರ ಆರು ಪ್ರಬಂಧಗಳನ್ನು ಉತ್ತಮ ಸಾಹಿತ್ಯಕೃತಿಗಳೆಂದು

ಗುರುತಿಸಲಾಗಿದೆ. ಈ ಪ್ರಬಂಧಗಳಲ್ಲಿ ಕಾವ್ಯದ ಸೊಗಡಿದೆ. ಇದು ಆಳ್ವಾರರುಗಳ ಸಂಕ್ಷಿಪ್ತ ಪರಿಚಯ. ಇನ್ನು ಇವರುಗಳ ಹಾಗೂ ಪುರಂದರದಾಸರ ಕೃತಿಗಳಲ್ಲಿ ಕಂಡುಬರುವ ಕೆಲವು ಸಾಮ್ಯಗಳನ್ನು ನೋಡೋಣ :

ಭಗವಂತನ ನಾಮಸ್ಮರಣೆ ಹಾಗೂ ಆತನ ಸರ್ವವ್ಯಾಪಕತ್ವದಲ್ಲಿ ಆಳ್ವಾರರಿಗೆ ಅಚಲವಾದ ನಂಬಿಕೆ ಹಾಗೂ ವಿಶ್ವಾಸ. ಹಾಗಾಗಿ ಅವರು ತಮ್ಮ ಪಾಶುರಗಳಲ್ಲಿ ನಾಮಸ್ಮರಣೆಯ ಮಹಿಮೆಯನ್ನು ಕುರಿತು ಹಾಡಿದ್ದಾರೆ.

ಪೊಯ್‌ಗೈ ಆಳ್ವಾರರು ಪರಮಾತ್ಮನ ನಾಮಸ್ಮರಣೆಯನ್ನು ಬಿಟ್ಟು ಬೇರೇನನ್ನೂ ಕೇಳಲು ಇಚ್ಛಿಸುವುದಿಲ್ಲವೆಂಬುದನ್ನು ಹೀಗೆ ವ್ಯಕ್ತಪಡಿಸಿದ್ದಾರೆ :

ವಾಯುವನ್ನೈಯಲ್ಲಿದುವಾಳಾದು ಕೈಯುಲಕು
ತಾಯುವನ್ನೈಯಲ್ಲುದು ತಾನ್ ತೊಳಾ
ಪೇಯುಮುಲೈ ನಂಜೂಣಾಕವುಡಾನುರುವೋಡು ಪೇರಲ್ಲಾರ್
ಕಾಣಾಕಣ್ ಕೇಳಾಶೆವಿ [1]

ಪೂತ್ತತ್ತಾಳ್ವಾರರು ನಾರಾಯಣನ ನಾಮಸ್ಮರಣೆಗಿಂತ ಮಿಗಿಲಾದುದು ಯಾವುದೂ ಇಲ್ಲ ; ಅವನ ನಾಮಸಂಕೀರ್ತನೆ ನಾಲಗೆಯ ಮೇಲೆ ನಲಿಯಬೇಕು ಎಂಬ ಭಾವವನ್ನು 'ಮಾಧವನೇ ಎನ್ರುಂ ಮನಂ ಪಡೈತ್ತು ಮತ್ತಿವನ್‌ಪೇರ್ ಓದುವುದೇ ನಾವಿನಾಲೋತ್ತು' ಎಂಬ ಮಾತಿನಲ್ಲಿ ವ್ಯಕ್ತಪಡಿಸಿದ್ದಾರೆ. ಅಲ್ಲದೆ ನಾರಾಯಣನ ನಾಮಸ್ಮರಣೆ ಸಂಸಾರವೆಂಬ ನರಕದಿಂದ ಪಾರುಮಾಡುವುದೆಂಬುದನ್ನು 'ನಾರಾಯಣನ್ ಪೇರೋದಿ ನರಕತ್ತರುಕಣ್ಣೈಯಾ, ಕಾರಣಮುಂವಲ್ಲೈಯೇಲ್ ಕಾಣ್' ಎಂಬಲ್ಲಿ ಸೂಚಿಸಿದ್ದಾರೆ. ಅದನ್ನೇ ಪೇಯಾಳ್ವಾರರೂ 'ನರಕಂತಿರ್ಕುಂ ಮರುನ್ದು' ಎಂಬ ಮಾತುಗಳಲ್ಲಿ ಹೇಳಿದ್ದಾರೆ.

ತಿರುಮಂಗೈ ಆಳ್ವಾರರು ನಾಮಸ್ಮರಣೆಯ ಮಹಿಮೆಯನ್ನು ಕುರಿತು ಹೀಗೆ ಹಾಡಿದ್ದಾರೆ :

---

1. ಪಂಚೇಂದ್ರಿಯಗಳೆಲ್ಲಾ ಪರಮಾತ್ಮನಿಗೆ ಸೇರಿದ್ದು. ಆದ್ದರಿಂದ ನನ್ನ ಬಾಯಿ ಪರಮಾತ್ಮನ ಮಹಿಮೆಯನ್ನು ಬಿಟ್ಟು ಮತ್ತಾವುದನ್ನೂ ಹೇಳದು. ನನ್ನ ಕೈ ಪ್ರಪಂಚಕ್ಕೆ ತಾಯಿಯಂತಿರುವ ಶ್ರೀಮನ್ನಾರಾಯಣನಿಗೆ ವಿನಹ ಬೇರೊಬ್ಬನಿಗೆ ನಮಸ್ಕರಿಸುವುದಿಲ್ಲ. ಪೂತನಿಯ ಸ್ತನದಲ್ಲಿದ್ದ ವಿಷವನ್ನು ಹೀರಿದ ಶ್ರೀಕೃಷ್ಣನ ಸುಂದರವಾದ ರೂಪವನ್ನು ಬಿಟ್ಟು ನನ್ನ ಕಣ್ಣು ಇನ್ನಾವುದನ್ನೂ ನೋಡುವುದಿಲ್ಲ. ಅವನ ನಾಮಸ್ಮರಣೆಯನ್ನಲ್ಲದೆ ಮತ್ತಾವುದನ್ನೂ ನಾನು ಕೇಳುವುದಿಲ್ಲ.

ಕುಲಂತರುಂ ಶೆಲ್ವಂ ತನ್ದಿಡುಂ ಅಡಿಯಾರ್ ಪಡುತುಯರಾಯಿನವೆಲ್ಲಾಂ
ನಿಲಂತರುಂ ಶೆಯ್ಯುಂ ನೀಳ್ವಿಶುಮ್ಬರುಳು ಅರುಳೊಡು ಪೆರುನಿಲಮಳಿಕ್ಕುಂ
ವಲಂತರುಂ ಮತ್ತುಂ ತನ್ದಿಡುಂ ಪೆತ್ತತಾಯಿನು ಮಾಯಿನ ಶೈಯುಂ
ನಲಂತರುಂ ಶೊಲ್ಲೈನಾನ್‌ಕಂಡುಕೊಂಡೇನ್ ನಾರಾಯಣ ಎನ್ನುಂ ನಾಮಂ[1]

ಇದೇ ಭಾವ ಪುರಂದರದಾಸರ "ನಿನ್ನನ್ನೆ ಪಾಡುವೆ, ನಿನ್ನನ್ನೆ ಪೊಗಳುವೆ, ನಿನ್ನನ್ನೆ ಬೇಡಿ ಬೇಸರಿಸುವೆ, ನಿನ್ನ ಕಾಲನು ಪಿಡಿವೆ ನಿನ್ನ ಹಾರೈಸುವೆ ......" ಎಂಬ ಕೀರ್ತನೆಯಲ್ಲಿಯೂ "ಹರಿ ನಿನ್ನ ಸ್ಮರಣೆಯು ಸ್ಮರಿಸಲು ದುರಿತ ಪೀಡಿಪುದುಂಟೆ ಅರಿತು ಭಜಿಪರಿಗೆಲ್ಲ ಕೈವಲ್ಯ ಜೋಕೆ" ಎಂಬ ಮಾತುಗಳಲ್ಲಿಯೂ "ದುರಿತವೆತ್ತಣದೊ ದುರ್ಗತಿಯೆಲ್ಲಿಹುದೋ ಹರಿಹರಿ ಹರಿಯೆಂದು ಸ್ಮರಿಸುವ ಜನರಿಗೆ" ಎಂಬ ಪದದಲ್ಲಿಯೂ ವ್ಯಕ್ತವಾಗಿರುವುದನ್ನು ಕಾಣಬಹುದು. "ಕೃಷ್ಣನ ನಾಮವೆ ಗತಿ ಕೃಷ್ಣನ ಪಾದವೆ ಗತಿ ಕಷ್ಟವೆಲ್ಲ ನೀಗಲು ಶ್ರೀಕೃಷ್ಣನನ್ನು ನೆನೆಯಿರೊ ಭುಕ್ತಿ ಕೊಡುವ ಮುಕ್ತಿಕೊಡುವ ಮತ್ತೆ ಸಾಯುಜ್ಯ ಕೊಡುವ ಶಕ್ತ ನಮ್ಮ ಪುರಂದರ ವಿಠಲನ್ನ ನೆನೆಯಿರೊ" ಎಂದಿರುವರು.

ಪಂಚೇಂದ್ರಿಯಗಳು ಪರಮಾತ್ಮನಿಗೆ ಸೇರಿದ್ದು ಎಂಬುದನ್ನು ಪುರಂದರ ದಾಸರು ಹೀಗೆ ಹಾಡಿದ್ದಾರೆ :

ಎಲೆ ಮನವೆ ಹರಿಧ್ಯಾನ ಮಾಡು
ಎಲೆ ಜಿಹ್ವೆಕೇಳು ಕೇಶವನ ಗುಣಗಳ ನುತಿಸು
ಎಲೆ ಮನವೆ ಮುರವೈರಿಯಂಘ್ರಿಗಳ ಭಜಿಸು
ಎಲೆಲೆ ಕರಗಳಿರ ಶ್ರೀಧರನ ಸೇವೆಯ ಮಾಡಿ
ಎಲೆ ಕರ್ಣಗಳಿರ ಅಚ್ಯುತನ ಕಥೆ ಕೇಳಿ......

ಹರಿಚರಣಗಳನ್ನು ನಂಬಿದವರಿಗೆ ಭಯವಿಲ್ಲವೆಂಬುದನ್ನು ಪೊಯ್‌ಗೈ ಆಳ್ವಾರರು ಈ ಕೆಳಗಿನ ಪಾಶುರದಲ್ಲಿ ಹಾಡಿದ್ದಾರೆ :

ನಾಡಿಲುಂ ನಿನ್ನಡಿಯೇ ನಾಡುವನ್ ನಾಡೋರುಂ
ಪಾಡಿಲುಂ ನಿನ್ ಪುಕಳೆ ಪಾಡುವನ್

---

1, ನಾರಾಯಣ ನಾಮಸ್ಮರಣೆಯು ಕುಲವನ್ನೂ, ಅಖಂಡ ಐಶ್ವರ್ಯವನ್ನೂ ಕೊಡುವುದು, ಭಕ್ತರ ದುಃಖವನ್ನು ದೂರ ಮಾಡುವುದು. ವೈಕುಂಠವನ್ನು ಕೊಡುವುದು. ಕೃಪೆಯಿಂದ ಕೈಂಕರ್ಯ ಸಾಮ್ರಾಜ್ಯವನ್ನು ಅನುಗ್ರಹಿಸುವುದು, ಕ್ಷೇಮವನ್ನುಂಟುಮಾಡುವುದು. ಹೆತ್ತತಾಯಿಯಂತೆ ಸಂರಕ್ಷಿಸುವುದು. ಇಂತಹ ಪವಿತ್ರವಾದ ನಾರಾಯಣ ಎಂಬ ನಾಮಧೇಯವನ್ನು ಕಂಡುಕೊಂಡೆನು.

ಕೊಡಿಲುಂ ಪೊನ್ನಾಳಿಯೋಂದಿ ನಾನ್ ಪೊನ್ನಡಿಯೇ ಕೊಡಿಪೇರ್ಕ್ಕ
ಎನ್ನಾಕಿಲೆನ್ನೇಯೆನಕ್ಕು[1] —ಇದೇ ಭಾವ ಪುರಂದರದಾಸರ

ನೋಡಿದರೆನ್ನೊಡೆಯನ ನೋಡುವೆ
ಪಾಡಿದರೆನ್ನೊಡೆಯನ ಪಾಡುವೆ
ಬೇಡಿದರೆನ್ನೊಡೆಯನ ಬೇಡುವೆ
........................
ಒಡೆಯ ಶ್ರೀ ಪುರಂದರವಿಠಲನ ಅಡಿಗಳ
ಸಾರಿಬದುಕುವೆ ಸೇರಿಬದುಕುವೆ — ಎಂಬ ಕೀರ್ತನೆಯಲ್ಲಿ ಹೊರ

ಹೊಮ್ಮಿದೆ.

ಪೊಯಿಗೈ ಆಳ್ವಾರರು ಹರಿಯ ಸರ್ವವ್ಯಾಪಕತ್ವವನ್ನು ಸಾರುತ್ತ ಆತ ಎಲ್ಲರ ಹೃದಯದಲ್ಲೂ ಇದ್ದಾನೆಂಬುದನ್ನು ಸ್ಪಷ್ಟಪಡಿಸುತ್ತಾರೆ :

ಉಳನ್ ಕಂಡಾಯ್ ನನ್ನೆಂಜೇ ಉತ್ತಮನೆನ್ನುಂ
ಉಳನ್ ಕಂಡಾಯ್ ಉಳ್ಳುವಾರುಳ್ಳತ್ತುಳನ್ ಕಂಡಾಯ್
ವೆಳ್ಳತ್ತಿನುಳ್ಳಾನಂ ವೇಂಗಡತ್ತು ಮೇಯಾನುಂ
ಉಳ್ಳತ್ತಿನುಳ್ಳಾನೇನ್ರೋರ್[2]

ಇದೇ ಭಾವ ಪುರಂದರರ "ಹರಿಯೇ ಸರ್ವೋತ್ತಮ ಹರಿಯೇ ಪರ ದೇವತೆ ಹರಿ ಸರ್ವ ವಿಶ್ವಮಯಂ ಜಗತು...ನಾಗಶಯನ ಭೋಗಿಭೂಷಣ ವಂದಿತ ಭಾಗವತಪ್ರಿಯ ಶ್ರೀಪುರಂದರವಿಠಲ" ಎಂಬ ಪದದಲ್ಲಿ ವ್ಯಕ್ತವಾಗಿದೆ.

ಪೇಯಾಳ್ವಾರರು ಮೂರನೆಯ ತಿರುವಂದಾದಿಯಲ್ಲಿ ನಾರಾಯಣನ ದರ್ಶನ ಮಾಡಿದುದನ್ನು ವಿವರಿಸುತ್ತ ಸುದರ್ಶನ ಚಕ್ರ ಹಾಗೂ ಬಲಮುರಿ ಶಂಖಧಾರಿಯಾದ ಶ್ರೀಹರಿಯನ್ನು ಕಂಡು ಧನ್ಯರಾದುದಾಗಿ ಹೇಳಿದ್ದಾರೆ,

---

[1] ಅಪೇಕ್ಷಿಸಿದರೆ ನಿನ್ನ ಪಾದವನ್ನೇ ಅಪೇಕ್ಷಿಸುವೆನು. ಯಾವಾಗಲೂ ಹಾಡುವುದು ನಿನ್ನ ಅನಂತ ಗುಣಗಳನ್ನೇ. ಶಿರಸ್ಸಿನಲ್ಲಿ ಧರಿಸುವುದು ದಿವ್ಯ ಚಕ್ರಧಾರಿಯಾದ ನಿನ್ನ ಚರಣಾರವಿಂದವನ್ನೇ. ಹೀಗಿರುವಾಗ ನನಗೆ ಪ್ರಪಂಚದಲ್ಲಿ ಏನಾದರೇನು ?

[2] ಹೇ ಒಳ್ಳೆಯ ಮನಸ್ಸೇ! ಪರಮಾತ್ಮನು ಇಲ್ಲಿಯೇ ಇದ್ದಾನೆ. ಅವನು ಸರ್ವೋತ್ತಮನಾಗಿದ್ದಾನೆ. ಅವನನ್ನು ಧ್ಯಾನಮಾಡುವ ಎಲ್ಲ ಭಕ್ತರ ಮನಸ್ಸಿನಲ್ಲೂ ಅವನು ಸ್ಥಿರವಾಗಿರುವವನು. ಕ್ಷೀರ ಸಮುದ್ರದಲ್ಲಿರುವವನೂ, ತಿರುವೇಂಗಡದಲ್ಲಿ ನಿಂತಿರುವವನೂ ಆದ ಪ್ರಭು ನಿನ್ನೊಳಗೂ ಇದ್ದಾನೆಂದು ತಿಳಿದುಕೋ.

ಎರಡನೆಯ ತಿರುವಂದಾದಿಯಲ್ಲಿ ಪೂತತ್ತಾಳ್ವಾರರು "ಶ್ರೀ ಕೃಷ್ಣನ ದಿವ್ಯಸುಂದರ ರೂಪವನ್ನು ನಾನು ಸ್ವಪ್ನದಲ್ಲಿ ಕಂಡೆ. ಅವನ ಕೈಯಲ್ಲಿ ಪ್ರಕಾಶಮಾನವಾದ ದಿವ್ಯ ಚಕ್ರಾಯುಧವನ್ನು ಆಮೇಲೆ ನೋಡಿದೆ. ಇಂತಹ ಅದ್ಭುತ ಚಕ್ರವು ಪಾಪಗಳನ್ನು ನಾಶಮಾಡುತ್ತದೆ. ದುಃಖ ಸಂಕಟಗಳನ್ನುಂಟು ಮಾಡುವ ಸಂಸಾರಚಕ್ರದಿಂದ ತಪ್ಪಿಸುವ ಸ್ವಾಮಿಯ ಶಕ್ತಿಯನ್ನು ನಾನು ಕಂಡು ಸಂತೋಷಪಟ್ಟೆ" ಎಂದಿದ್ದಾರೆ. ಅದನ್ನೇ ಪುರಂದರದಾಸರು "ಕಂಡೆ ನಾ ಕನಸಿನಲಿ ಗೋವಿಂದನ ಕಂಡೆ ನಾ ಕನಸಿನಲಿ ಕನಕರತ್ನದ ಖಣಿಯ ನಂದನ ಕಂದ ಮುಕುಂದನ ಚರಣವ" ಎಂದು ತಾವು ಕನಸಿನಲ್ಲಿ ಕಂಡ ಕೃಷ್ಣನ ಮೂರ್ತಿಯನ್ನು ನಖಶಿಖಾಂತವಾಗಿ ವರ್ಣಿಸಿ ಕೊನೆಗೆ "ಕಂಗಳಿಂದಲಿ ಕಂಡೆ ಹಿಂಗಿತು ಭವಭಯ" ಎಂದಿದ್ದಾರೆ.

ಏಕದೇವೋಪಾಸನೆಗೆ ಒತ್ತುಕೊಟ್ಟಿರುವ ಆಳ್ವಾರರುಗಳು ಗ್ರಾಮ್ಯ ದೇವತೆಗಳ ಪೂಜೆಯನ್ನು ಖಂಡಿಸಿದ್ದಾರೆ. ಅದಕ್ಕೆ ಸಂಬಂಧಿಸಿದ ಇಬ್ಬರು ಆಳ್ವಾರರ ಎರಡು ಪಾಶುರಗಳು ಇಂತಿವೆ :

ಓತ್ತಿನ್ಪೊರುಳ್ಮುಡಿವುಮಿತ್ತನೈಯೇ ಉತ್ತುಮನ್ಮೇರ್
ಏತ್ತುಂ ತಿರಮರಿಮಿನೇಳೈಕಾಳ್ ಓತ್ತದನೈ
ವಲ್ಲಶೀಲ್ ನನ್ರದನೈಮಟ್ಟಿರೇಲ್ ಮಾಧವನ್ ಪೇರ್
ಶೊಲ್ಲುವದೇ ಓತ್ತಿನ್ ಶುರುಕ್ಕು[1]. ಇದಕ್ಕೆ ಸಂವಾದಿಯಾಗಿ ಪುರಂದರರ

ಬಿನುಗುದೈವಂಗಳ ಕಾಲಲಿ ಒದ್ದು ಮಧ್ವ
ಮುನಿಮತದಲ್ಲಿ ಬದ್ಧದೀಕ್ಷಿತನಾಗು ಕು
ಜನರ ನೆರಹಿಕೊಂಡು ಕುಚೇಷ್ಟೆ ಕಥೆಪೇಳಿ
ಘನ ಅಂಧಂತಮಸಿನೊಳು ಬೀಳದಿರು

* * *

ಭ್ರಾಮಕನಾಗಿ ನೀ ಕೆಡಬೇಡವೊ
ಕಾಮಜನಕ ನಮ್ಮ ಪುರಂದರ ವಿಠಲನ

---

[1] ಕಂಡಕಂಡ ದೇವತೆಗಳ ಕಾಲಿಗೆ ಬಿದ್ದು ತೊಳಲುತ್ತಿರುವ ಮೂಢರೇ ನಿಮಗೆ ವೇದವನ್ನು ಅಧ್ಯಯನ ಮಾಡುವ ಸಾಮರ್ಥ್ಯವಿದ್ದರೆ ವೇದವನ್ನು ವ್ಯಾಸಂಗ ಮಾಡುವುದು ಒಳ್ಳೆಯದು. ಹಾಗೆ ಮಾಡುವುದಕ್ಕೆ ಶಕ್ತಿಯಿಲ್ಲದಿದ್ದರೆ ವೇದಗಳ ಸಾರವಾದ ಪರಮಾತ್ಮನ ನಾಮಸ್ಮರಣೆಯನ್ನಾದರೂ ಮಾಡಿ. ಪುರುಷೋತ್ತಮನನ್ನು ಸ್ತುತಿಸುವ ಅಭ್ಯಾಸ ಮಾಡಿ.

ಈ ಮನವೆಂಬ ಧಾಮದೊಳಗೆ ನಿಲಿಸಿ
ಪೂಜೆಮಾಡುವುದು ಸುಖ ಕಾಣೋ— ಎಂಬ ಕೀರ್ತನೆಯನ್ನು ನೋಡಬಹುದು.

ಇನ್ನೊಂದು ಪಾಶುರದ ಕನ್ನಡಾನುವಾದ ಇಂತಿದೆ :

ನೋಟಕ್ಕೆ ಸೊಗಸದ ಕ್ಷುದ್ರದೇವತೆಗಳನ್ನು ಪೂಜಿಸುವಿರೇಕೆ
ಕಿವಿಗೆ ಕೇಳಲು ಸಹಿಸಲಾಗದ ಕಟ್ಟುಕತೆಗಳನ್ನು ಕೇಳುವುದೇಕೆ
ಬೇಡಿದರೂ ವರವೀಯಲಾರದ ದೇವರುಗಳಿವು. ವರಗಳಿತ್ತರೂ
ನಿಮ್ಮನ್ನು ಬದುಕಿಸಲಾರದ ವರಗಳನೀಯುವಂಥವು. ಇವುಗಳನ್ನು
ತೊರೆದು ಜಗದೇಕನಾಥನ ನನ್ನ ಸ್ವಾಮಿಯನ್ನು ಶರಣು ಹೊಂದಿ
ಸಂಸಾರಬಂಧನದಿಂದ ಪಾರಾಗಿರಿ.

ಇದೇ ಭಾವವನ್ನು ಪುರಂದರದಾಸರು

ಹರಿಸಿರಿಚರಣವಿರಲು ಮಿಕ್ಕ
ಭೂರಿ ದೈವಗಳೇಕೆ ಭಜಿಸುವೆ ಮರುಳೆ
ನೀರಡಿಸಿ ಜಾಹ್ನವಿಯ ತೀರದಲ್ಲಿರೆ
ಕೆರೆಯ ನೀರ ಕುಡಿವ ಮಾನವರುಂಟೆ
ಕಾರುಣ್ಯವಿರಲು ವೈಕುಂಠವಿಠಲರೇಯನ
ತಿರುವೇಂಗಳಪ್ಪ ಸಿರಿಪುರಂದರವಿಠಲನ

ಎಂಬ ಪದದಲ್ಲಿ ಹೇಳಿ ಏಕದೇವೋಪಾಸನೆಯನ್ನು ಎತ್ತಿಹಿಡಿದ್ದಾರೆ.

'ನಾನ್ಮುಕನ್ ತಿರುವಂದಾದಿ'ಯಲ್ಲಿ ತಿರುಮಳಿಶೈ ಆಳ್ವಾರರು ಪರಮತವನ್ನು ಖಂಡಿಸಿ ಸ್ವಮತವನ್ನು ಎತ್ತಿ ಹಿಡಿದಿರುವ ಪಾಶುರ ಇಂತಿದೆ :

ಅರಿಯಾರ್ ಶಮಣರ್ ಅಯರ್ತ್ತಾರ್ ಬವುದ್ಧರ್
ಶಿರಿಯಾರ್ ಶಿಪಟ್ಟಾರ್ ಶೆಪ್ಪಿಲ್ ವೆರಿಯಾಯ
ಮಾಯವನ್ನೈ ಮಾಲವನ್ನೈಮಾದವನ್ನೈಯೇತ್ತಾದಾರ್
ಈನವರೇ ಯಾದಲಾಲನ್ರು[1]

---

[1] ಜೈನರು ನಿಜವಾದ ತತ್ತ್ವ ತಿಳಿಯಲಿಲ್ಲ. ಬೌದ್ಧರು ಶೂನ್ಯವಾದಿಗಳಾದರು. ಶೈವರು ಉದಾಸೀನರಾದರು. ನಿಜವಾಗಿ ಹೇಳುವುದಾದರೆ ಸುವಾಸನೆಯಿಂದ ಕೂಡಿದ ತುಲಸೀಮಾಲೆಯನ್ನು ಧರಿಸಿ ಪರಮಾಶ್ಚರ್ಯಭೂತನಾಗಿಯೂ ಭಕ್ತವತ್ಸಲನಾಗಿಯೂ ಲಕ್ಷ್ಮೀವಲ್ಲಭನಾಗಿಯೂ ಇರುವ ಪರಮಾತ್ಮನನ್ನು ಸ್ತೋತ್ರ ಮಾಡದೇ ಇರುವವರು ಅದೃಷ್ಟಹೀನರೇ ಸರಿ.

ಇದೇ ಭಾವ ಪುರಂದರರ :

ಒಬ್ಬ ಆಚಾರಿಯನು ದೈವವೇ ಇಲ್ಲವೆಂದ
ಒಬ್ಬ ಆಚಾರಿಯನು ದೈವಕೆಂಟೇ ಗುಣವೆಂದ
ಒಬ್ಬ ಆಚಾರಿಯನು ನಿರ್ಗುಣನಿರಾಕಾರ
ನಿರವಯುವನೆಂದ ಕಡೆಯಲಿ ತಾನೆ ದೈವವೆಂದ
ಒಬ್ಬರು ವೇದಾರ್ಥವರಿತು ಅರಿಯರು— ಎಂಬ ಮಾತುಗಳಲ್ಲಿ ಕಂಡು ಬರುತ್ತದೆ.

ಇದೇ ಆಳ್ವಾರರ 'ತಿರುಚ್ಚಂದವಿರುತ್ತ'ದಲ್ಲಿ ವೇದಾಂತತತ್ವವನ್ನು ಸಂಖ್ಯಾವಿವರಣ ರೂಪವಾಗಿ ವಿವರಿಸಲಾಗಿದೆ. ಈ ರೀತಿಯ ವಿವರಣೆಯೇ ಈ ಕೃತಿಯ ವೈಶಿಷ್ಟ್ಯ. ಈ ರೀತಿಯ ವಿವರಣೆ ಈ ಮೊದಲು ತಮಿಳು ಸಾಹಿತ್ಯದಲ್ಲಿರಲಿಲ್ಲವೆಂದು ಹೇಳಲಾಗುತ್ತದೆ. ನಿದರ್ಶನಕ್ಕೆ ಒಂದು ವೃತ್ತವನ್ನು ನೋಡಬಹುದು :

ಐನ್ದುಮೈನ್ದುಮೈನ್ದುಮಾಗಿಯಲ್ಲವತ್ತುಳಾಯುಮಾಯ್
ಐನ್ದು ಮೂನ್ರುಮೊನ್ರುಮಾಗಿ ನಿನ್ರವಾದಿ ದೇವನೇ
ಐನ್ದುಮೈನ್ದುಮೈನ್ದುಮಾಗಿ ಯನ್ದರತ್ತಣೈನ್ದು ನಿನ್ನು
ಐನ್ದುಮೈನ್ದುಮಾಯ ನಿನ್ನೈಯಾವರ್ ಕಾಣವಲ್ಲರೇ[1]

ಇದೇ ರೀತಿ ಸಂಖ್ಯಾವಿವರಣೆಯನ್ನು ಪುರಂದರರ ಕೀರ್ತನೆಗಳಲ್ಲೂ ಕಾಣಬಹುದು :

ಆರು ಮಂದಿ ಗಂಡರಾಳುವರು ಎನ್ನ
ಆರು ಮಂದಿಗೆ ಮೂರು ಸುತರೆನಗೆ
ಆರು ಮೂರೇಳ್ವರು ಭಾವಮೈದುನರೆಲ್ಲ
ಆರೇನೆಂದರೆ ಬಿಡರು ಆರಿಗುಸುರಲಮ್ಮ

---

[1] ಪಂಚಭೂತಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರೆಗಳು, ಪ್ರಕೃತಿ, ಮಹತ್, ಅಹಂಕಾರ, ಮನಸ್ಸು — ಇವೆಲ್ಲವೂ ನೀನೇ ಆಗಿ ಅಚೇತನಗಳಿಗಷ್ಟೇ ಅಲ್ಲದೆ ಚೇತನರಿಗೂ ಅಂತರ್ಯಾಮಿಯಾಗಿರುವ ಎಲ್ಲಕ್ಕೂ ಮೊದಲಾಗಿರುವ ಸ್ವಾಮಿಯೇ ಪರಮಪದದಲ್ಲಿ ನೆಲಸಿರುವ ಪರಮಾತ್ಮನೇ ! ಅವ್ಯಾಕೃತ ಪಂಚಶಕ್ತಿಗಳು, ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಇತ್ಯಾದಿ ಎಲ್ಲಕ್ಕೂ ನಿರ್ವಾಹಕನಾದ ಶಬ್ದಾದಿ ಭೋಗಗಳೈದು — ಭೋಗ್ಯಸ್ಥಾನ, ಭೋಗೋಪಕರಣ, ಅಮರರು, ನಿತ್ಯಸೂರಿಗಳು,

ಮಧುರ ಕವಿ ಆಳ್ವಾರರು ನೇರವಾಗಿ ನಮ್ಮಾಳ್ವಾರರ ಶಿಷ್ಯರಾಗಿದ್ದುದರಿಂದ ಗುರುವಿಗೆ ಹಿರಿದಾದ ಸ್ಥಾನ ಕೊಟ್ಟಿದ್ದಾರೆ. ಗುರುಕೃಪೆ ನನ್ನನ್ನು ಉದ್ಧಾರಮಾಡಿತು ಎಂದು ಹೇಳಿಕೊಂಡಿರುವ ಪಾಶುರ ಇಂತಿದೆ :

ನಂಬಿನೇನ್ ಪಿರರ್‌ನನ್‌ಪೊರುಳ್ ತನ್ನೈಯುಂ
ನಂಬಿನೇನ್ ಮಡವಾರ್ಯೈಯುಂ ಮುನ್ನೆಲಾಂ
ಶೆಂಬನ್ಮಾಡತ್ತಿರುಕೂರ್ ನಂಬಿಕ್ಕು
ಅನ್ಬನಾಯಡಿಯೇನ್ ಶದಿರ್‌ತ್ತೇನಿನ್ರೇ[1]

ಪುರಂದರರ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಹಾಗೂ 'ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು' ಎಂಬ ಪದಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ತಿರುಮಂಗೈ ಆಳ್ವಾರರ ಕೆಲವು ಪಾಶುರಗಳು ಅವರ ಆತ್ಮಶೋಧನೆಗೆ ಸಂಬಂಧಿಸಿದುವುಗಳಾಗಿವೆ. ಕ್ಷಣಿಕಸುಖಕ್ಕೆ ಮರುಳಾಗಿ ಭವಬಂಧನದಲ್ಲಿ ಸಿಲುಕಿ ಪಶ್ಚಾತ್ತಾಪದಿಂದ ಬೆಂದು ನೊಂದಿದ್ದಾರೆ, ತಮ್ಮ ಆ ವ್ಯಥೆಯನ್ನು ಶ್ರೀಹರಿಯ ಮುಂದೆ ತೋಡಿಕೊಂಡಿದ್ದಾರೆ :

ವಾಡಿನೇನ್ ವಾಡಿವರುನ್ದಿನೇನ್ ಮನತ್ತಾಲ್ ಪೆರುಂ ತುಯರಿಡುಮ್ಬೈಯಿಲ್ ಪಿರಂದು
ಕೂಡಿನೇನ್ ಕೂಡಿ ಯಿಳೈಯವರ್ ತಮ್ಮೊಡು ಅವರ್ ತರುಕಲವಿಯೇ ಕರುದಿ
ಓಡಿನೇನ್ ಓಡಿ ಉಯ್ವದೋರ್ ಪುರುಳಾಲ್ ಉಣರ್ವೆನುಂ ಪೆರುಂ ಪದಂತೆರಿನ್ದು
ನಾಡಿನೇನ್ ನಾಡಿ ನಾನ್ಕಂಡುಕೊಂಡೇನ್ ನಾರಾಯಣಾ ಎನ್ನುಂ ನಾಮಂ[2]

---

ಮುಕ್ತರು ಇವರೆಲ್ಲರಿಗೂ ನಿರ್ವಾಹಕನಾದ ನಿನ್ನನ್ನು ಯಾರು ತಾನೇ ತಿಳಿಯ ಬಲ್ಲರು.

[1] ಪೂರ್ವದಲ್ಲಿ ಪರದಾರ, ಪರದ್ರವ್ಯಾಭಿಲಾಷೆಯುಳ್ಳವನಾಗಿ ದುರ್ಮಾರ್ಗಪ್ರವೃತ್ತನಾಗಿದ್ದೆನು. ಕುರುಕಾಪುಸ್ವಾಮಿಗಳಾದ ಕಲ್ಯಾಣಗುಣಪೂರ್ಣರಾದ ನಮ್ಮಾಳ್ವಾರರಿಗೆ ಭಕ್ತನಾಗಿ ಭಾಗ್ಯವಂತನೆನಿಸಿದ್ದೇನೆ. ಗುರುಕೃಪೆಯಿಂದ ನನ್ನ ಪಾಪಗಳೆಲ್ಲ ನಾಶವಾದವು.

[2] ಬಹುದುಃಖಕೊಡತಕ್ಕ ಸಂಸಾರದಲ್ಲಿ ಹುಟ್ಟಿ ಶರೀರದಿಂದ ಬಾಡಿಹೋಗಿ ಮನಸ್ಸಿನಿಂದ ಬಹು ದುಃಖವನ್ನು ಅನುಭವಿಸಿದೆನು. ಸುಖದ ಆಸೆಯಿಂದ ಸ್ತ್ರೀಯರ ಜೊತೆಯಲ್ಲಿ ಕೂಡಿ ಅವರು ಕೊಡುವ ಭೋಗವೇ ದೊಡ್ಡದೆಂದು ತಿಳಿದು ತಿರುಗಾಡಿದೆನು. ಕೊನೆಗೆ ನಿಜವಾದ ಸುಖಕ್ಕಾಗಿ ಅಲೆದಾಡಿ ಜ್ಞಾನವನ್ನು ಪಡೆದು ನಾರಾಯಣ ಎಂಬ ನಾಮದ ಮಹಿಮೆಯನ್ನು ತಿಳಿದೆನು.

ಎಂದು ಹೇಳಿರುವುದಲ್ಲದೆ ತಮ್ಮ ತಪ್ಪುಗಳನ್ನೆಲ್ಲ ಒಪ್ಪಿಕೊಂಡು ನೀನೆ ನನ್ನ ತಂದೆ, ತಾಯಿ, ಬಂಧು, ಉಸಿರು, ಅಣ್ಣ ಇತ್ಯಾದಿಯಾಗಿ ಶ್ರೀಹರಿಯಲ್ಲಿ ಮೊರೆಯಿಟ್ಟಿದ್ದಾರೆ.

ಪುರಂದರದಾಸರೂ ''ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು ಪುಣ್ಯ ಪಾಪವನು ನಾ ತಿಳಿಯದೆ ಇದ್ದು ಅನ್ಯಾಯವಾಯಿತು ಇದಕೇನು ಮದ್ದು'' ಎಂದು ಕಳವಳಿಸಿ, ''ಮಂದಮತಿಯೊಳಗಾನು ಬಲು ದಂದುಗದಲ್ಲಿ ಸಿಲುಕಿ ನೊಂದೆನೊ ನಾನು ತಂದೆ ತಾಯಿಯೆಲ್ಲವು ನೀನು'' ಎಂದಿರುವುದಲ್ಲದೆ ''ಮರೆ ತೆನೋ ನಿನ್ನ ನಾಮವನು ಜಿಹ್ವೆಗೆ ಬರೆದು ಬೋಧಿಸೋ ನಿನ್ನ ದಿವ್ಯನಾಮ ವನು'' ಎಂದೂ ಶ್ರೀಹರಿಯಲ್ಲಿ ಪ್ರಾರ್ಥಿಸಿದ್ದಾರೆ. ಆಳ್ವಾರರು ದಾಸನ ದಾಸ ರಾಗಿರಲು ಬಯಸುವಂತೆ ಪುರಂದರರೂ ಶ್ರೀಹರಿಯ ದಾಸರಾಗಲು ಬಯಸು ತ್ತಾರೆ.

ಈ ಆಳ್ವಾರರ ಪಾಶುರಗಳಲ್ಲಿ ಪೂತನೀಸಂಹಾರ, ಗಜೇಂದ್ರಮೋಕ್ಷ, ಹಿರಣ್ಯಕಶಿಪು ಸಂಹಾರ, ಶಕಟಾಸುರವಧೆಯ ಚಿತ್ರಗಳನ್ನು ಕಾಣಬಹುದು. ವಾಮನ ಹಾಗೂ ನರಸಿಂಹಾವತಾರದ ವರ್ಣನೆ ಹೆಚ್ಚಿನ ಆಳ್ವಾರರುಗಳನ್ನು ಆಕರ್ಷಿಸಿದೆ. ಪೊಯ್‌ಗೈ ಆಳ್ವಾರರು ವಾಮನಾವತಾರವನ್ನು ಹೀಗೆ ಚಿತ್ರಿಸಿ ದ್ದಾರೆ :

ನಿನ್ರುನಿಲಮಂಗ್ಗೈ ನೀರೇತ್ತು ಮೂವಡಿಯಾಲ್
ಶೆನ್ರುದಿಶ್ಶೈಯುಳನ್ದ ಶೆಂಗಳಶ್ಶಾರ್ಕ್ಕು
ಎನ್ರುಂಪಡೈಯಾಳಿ ಪೊಳ್ಳುತ್ತಿರ್ಪಾಂಬಣೈಯಶಾನ್ಪಾದಂ
ಅಡೈಯಶಾಳಿವೆಂಜೇಯರಿ[1]

ನರಸಿಂಹಾವತಾರದ ವರ್ಣನೆ ಪೇಯಳ್ವಾರರ ಪಾಶುರದಲ್ಲಿ ಹೀಗೆ ಮೂಡಿದೆ :

ಪುಕುನ್ದಿಲಙ್ಗುಮನ್ದಿಪ್ಪೋಳ್‌ದತ್ತು ಅರಿಯಶಾ
ಯಿಕಳ್‌ನ್ದ ವಿರಣಿಯನದಾಕ್ಕುಂ ಶುಕಿರ್‌ನ್ದೆಙ್ಗುಂ

[1] ಬಲಿಚಕ್ರವರ್ತಿಯು ಯಜ್ಞಭೂಮಿಗೆ ಬಂದು ಸುಂದರವಾದ ವಾಮನಮೂರ್ತಿ ರೂಪದಲ್ಲಿ ನಿಂದು, ತನ್ನ ಅಂಗೈಯಲ್ಲಿ ದಾನ ತೀರ್ಥವನ್ನು ತೆಗೆದುಕೊಂಡು ಮೂರು ಹೆಜ್ಜೆಗಳಿಂದ ಅಳತೆಮಾಡಿದ ಪುಂಡರೀಕಾಕ್ಷನಿಗೆ ಎಲ್ಲ ಕಾಲದಲ್ಲಿಯೂ ಆಯುಧವಾಗಿ ಚಕ್ರವೂ, ವಾಹನವಾಗಿ ಗರುಡನೂ, ಹಾಸಿಗೆಯಶಾಗಿ ಆದಿಶೇಷನೂ ಇದ್ದಾರೆಂದು ತಿಳಿದು ಹೇ ಮನಸ್ಸೇ ! ಅವನನ್ನು ಚೆನ್ನಾಗಿ ಅರಿತು ಅವನ ಪಾದವನ್ನು ಹೊಂದು.

ಶಿನ್ದಪ್ಪಿಳನ್ದ ತಿರುಮಾಲ್ ತಿರುವಡಿಯೇ
ವನ್ದಿತ್ತೆನ್ನೆಂಜಮೇವಾಳ್‌ತ್ತು[1]

ಪುರಂದರರ ಪದ್ಯವೊಂದರಲ್ಲಿ ನರಸಿಂಹಾವತಾರದ ಚಿತ್ರ ಹೀಗೆ ಒಡಮೂಡಿದೆ :

ಬಾಲನ ಮೊರೆಯನು ಕೇಳಿ ಕೃಪೆಯಿಂದ
ಪಾಲಿಸಿದೆಯೊ ನರಸಿಂಹರೂಪದಿಂದ

ಹಿರಣ್ಯಕಶಿಪುವನು ಸೀಳಿದೆ ಅವನ
ಕರುಳನು ಕೊರಳೊಳು ಹಾಕಿದೆ
ದುರುಳ ಬುದ್ಧಿಯ ತಳೆದ ದೈತ್ಯಾಧಮನ ಕೊಂದು
ಕರುಣದಿಂದಲಿ ಕಂದಗೊಲಿದೆ ಗೋವಿಂದ

ದಶಾವತಾರ ವರ್ಣನೆಯಲ್ಲಿ ದಾಸರಲ್ಲಿ ಕಂಡುಬರುವಷ್ಟು ವೈವಿಧ್ಯ ಆಳ್ವಾರರುಗಳ ಕೃತಿಗಳಲ್ಲಿ ಕಂಡುಬರುವುದಿಲ್ಲ. ಶ್ರೀನಿವಾಸನ ವರ್ಣನೆಯನ್ನು ಎಲ್ಲ ಆಳ್ವಾರರೂ ಮಾಡಿದ್ದಾರೆ. ಶ್ರೀಕೃಷ್ಣನನ್ನು ನಿಂದೆಯ ಮೂಲಕ ಸಂತ್ರಿಸಿರುವುದುಂಟು.

ಆಂಡಾಳ್ ಶ್ರೀಹರಿಯ ದಶಾವತಾರವನ್ನು ಕೊಂಡಾಡುವ ನೆಪದಿಂದ ಅವನಿಗೆ ಮಂಗಳವನ್ನು ಹಾಡಿರುವ ಪಾಶುರ ಇಂತಿದೆ :

ಅನ್ರಿವ್ವುಲಕಮಳನ್ದಾಯಡಿ ಪೋತ್ತಿ
ಶೆನ್ರಂಗುತ್ತೆನ್ನಿಲಂಗೈ ಶೆಟ್ರಾಯ್‌ತಿರಲ್‌ಪೋತ್ತಿ
ಪೊನ್ರಚ್ಚಕಡಮುದೈತ್ತಾಯ್‌ಪುಕಳ್ ಪೋತ್ತಿ
ಕನ್ರುಕುಣಿಕಾವೆರಿನ್ದಾಯ್ ಕಳಲ್ ಪೋತ್ತಿ
ಕುನ್ರುಕುಡೈಯಾವೆಡುತ್ತಾಯ್ ಕುಣಮ್ ಪೋತ್ತಿ
ವೆನ್ರುಪಕೈಕೆಡುಕ್ಕುಂ ನಿನ್ ಕೈಯಿಲ್ ವೇಲ್‌ಪೋತ್ತಿ
ಎನ್ರೆನ್ರುಂ ಶೇವಕಮೇ ಯೇತ್ತಿಪ್ಪರೈಕೊಳ್ವಾನ್
ಇನ್ರುಯಾಂವನ್ದೋ ಮಿರಂಗೇಲೋರೆಮ್ ಪಾವಾಯ್[2]

---

[1] ಪ್ರದೋಷ ಸಮಯ:ದಲ್ಲಿ ಕಂಬದಲ್ಲಿ ಪ್ರವೇಶಿಸಿ ಶತ್ರುವಾದ ಹಿರಣ್ಯಕಶಿಪುವಿನ ವಿಶಾಲವಾದ ವಕ್ಷಸ್ಥಲವನ್ನು ಸೀಳಿದ ನರಸಿಂಹರೂಪೀ ನಾರಾಯಣನಿಗೆ ನಮಸ್ಕರಿಸು. ಅವನಿಗೆ ಯಾವಾಗಲೂ ಮಂಗಳಾಶಾಸನ ಮಾಡು.

[2] ವಾಮನನು ತ್ರಿವಿಕ್ರಮನಾಗಿ ಲೋಕಗಳನ್ನೆಲ್ಲಾ ಅಳೆದ ನಿನ್ನ ಪಾದಗಳಿಗೆ ಮಂಗಳವಾಗಲಿ. ಲಂಕಾನಗರಿಗೆ ದಂಡಯಾತ್ರೆ ಹೋಗಿ ಅದನ್ನು ಧ್ವಂಸಮಾಡಿದ

ಈ ದಶಾವತಾರದ ಹಿನ್ನೆಲೆಯಲ್ಲಿಯೇ ಪುರಂದರದಾಸರು ಶ್ರೀಹರಿಗೆ ಹಾಡಿರುವ ಮಂಗಳ ಪದ್ಯ ಇಂತಿದೆ :

ಮಂಗಳ ಮಾರಮಣಗೆ ಮಂಗಳ ಜಯ
ಮಂಗಳ ಭೂರಮಣಗೆ ಮಂಗಳ
ಮಕುಟಕೆ ಮಂಗಳ ಮತ್ಸ್ಯಾವತಾರಗೆ
ಮುಖಕೆ ಮಂಗಳ ಮುದ್ದು ಕೂರ್ಮನಿಗೆ
ಸುಕಂಠಕೆ ಮಂಗಳ ಸೂಕರ ರೂಪಗೆ
ನಖಿಕೆ ಮಂಗಳ ಮುದ್ದು ನರಸಿಂಹಗೆ
ವಕ್ಷಕೆ ಮಂಗಳ ವಟುವಾಮನನಿಗೆ
ಪಕ್ಷಕೆ ಮಂಗಳ ಭಾರ್ಗವಗೆ
ಕಕ್ಷಕೆ ಮಂಗಳ ಕಾಕುತ್ಸ್ಥ ರಾಮನಿಗೆ
ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ...

ಈ ಹನ್ನೆರಡು ಜನ ಆಳ್ವಾರರು ಯೋಗಿಗಳೆಂದೂ ಭಕ್ತರೆಂದೂ ಪ್ರಸಿದ್ಧರಾಗಿದ್ದಾರೆ. ಇವರ ಕೃತಿಗಳನ್ನು ದಿವ್ಯಪ್ರಬಂಧಗಳೆಂದು ಗುರುತಿಸ ಲಾಗುತ್ತದೆ. ಇವುಗಳನ್ನು ತಮಿಳುವೇದಗಳೆಂದು ಭಾವಿಸಲಾಗಿದೆ. ಈ ಎಲ್ಲ ಆಳ್ವಾರರ ಧ್ಯೇಯ ಈಶ್ವರ ಸಾಕ್ಷಾತ್ಕಾರ. ಅದಕ್ಕಾಗಿ ಅವರು ಅನು ಸರಿಸಿರುವ, ಬೋಧಿಸಿರುವ ಮಾರ್ಗ ಭಕ್ತಿ, ಪ್ರಪತ್ತಿ ಹಾಗೂ ಕೈಂಕರ್ಯ. ಈ ಮೂರು ಮಾರ್ಗಗಳೇ ವಿಶಿಷ್ಟಾದ್ವೈತ ಸಿದ್ಧಾಂತದ ತಳಹದಿ. ಈ ಮೂರು ಮಾರ್ಗಗಳ ವಿವರಣೆಯನ್ನೇ ತಮ್ಮ ಕೃತಿಗಳಲ್ಲಿ ಮಾಡಿದ್ದಾರೆ. ಈ ಹನ್ನೆರಡು ಜನ ಆಳ್ವಾರರ ಹಾಗೂ ಪುರಂದರದಾಸರ ಕೃತಿಗಳನ್ನು ಅವಲೋ ಕಿಸಿದಾಗ ಪ್ರಮುಖವಾಗಿ ಕಂಡು ಬರುವ ಸಾಮ್ಯ-ವ್ಯತ್ಯಾಸಗಳನ್ನು ಹೀಗೆ ಗುರುತಿಸಬಹುದೆಂದು ತೋರುತ್ತದೆ. ಆಳ್ವಾರರು ಭಕ್ತಿ ಹಾಗೂ ಪ್ರಪತ್ತಿಗೆ ಒತ್ತು ಕೊಟ್ಟಿದ್ದಾರೆ, ಆದರೆ ದಾಸರದು ಕೇವಲ ಭಕ್ತಿ ಪಂಥ. ಪರಮಾತ್ಮನ ನಾಮಸ್ಮರಣೆ ಹಾಗೂ ಸರ್ವೋತ್ತಮತೆಯ ಬಗೆಗಿನ ಧೋರಣೆಗಳು ಇಬ್ಬರಲ್ಲೂ

---

ನಿನ್ನ ಭುಜಕ್ಕೆ ಮಂಗಳವಾಗಲಿ. ಶಕಟಾಸುರನನ್ನು ಕಾಲಿನಿಂದ ಒದ್ದು ಸಂಹರಿಸಿದ ನಿನ್ನ ಸಾಮರ್ಥ್ಯಕ್ಕೆ ಮಂಗಳವಾಗಲಿ. ಗೋವರ್ಧನ ಪರ್ವತವನ್ನು ಛತ್ರಿಯಾಗಿ ಹಿಡಿದು ಎತ್ತಿದ ನಿನ್ನ ಆಶ್ರಿತವಾತ್ಸಲ್ಯಕ್ಕೆ ಮಂಗಳವಾಗಲಿ. ಶತ್ರು ಗಳನ್ನು ಸಂಹರಿಸುವುದಕ್ಕೆ ನಿನ್ನ ಕೈಯಲ್ಲಿರುವ ವೇಲಾಯುಧಕ್ಕೆ ಮಂಗಳವಾಗಲಿ. ಎಂದೆಂದಿಗೂ ನಿನ್ನ ಪರಾಕ್ರಮಗಳನ್ನು ಸ್ತೋತ್ರಮಾಡಿ ಇಷ್ಟಾರ್ಥ ಪಡೆಯಲು ನಾವು ಬಂದಿರುವೆವು ಕೃಪೆಮಾಡು.

ಒಂದೇ ಆಗಿವೆ.'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ'ಎಂಬ ಭಾವ ಕಂಡುಬರುತ್ತದೆ. ಆಳ್ವಾರರುಗಳಲ್ಲಿ ಮಧುರಕವಿ ಆಳ್ವಾರರನ್ನು ಹೊರತು ಪಡಿಸಿದರೆ ಉಳಿದ ಆಳ್ವಾರರುಗಳಲ್ಲಿ ಗುರು–ಶಿಷ್ಯಪರಂಪರೆ ಕಂಡುಬರುವುದಿಲ್ಲ. ಇವರಲ್ಲಿ ಗಣಪತಿಗೆ ಬದಲಾಗಿ ವಿಷ್ವಕ್ಸೇನನ ಪೂಜೆಯಿದೆ. ಮಧ್ವಮತದಲ್ಲಿ ವಾಯುದೇವರಿಗೆ ಪ್ರಮುಖ ಸ್ಥಾನ ಇದೆ. ಹನುಮ–ಭೀಮ–ಮಧ್ವರನ್ನು ಅವತಾರತ್ರಯರೆಂದು ಗುರುತಿಸಲಾಗುತ್ತದೆ. ಆದ್ದರಿಂದ ಹನುಮನ ಸ್ತುತಿ ದಾಸರ ಕೀರ್ತನೆಗಳಲ್ಲಿ ಧಾರಾಳವಾಗಿ ಬಂದಿದೆ. ಆದರೆ ಆಳ್ವಾರರುಗಳ ಕೃತಿಗಳಲ್ಲಿ ಹನುಮನನ್ನು ಕುರಿತಂತೆ ಪ್ರಸ್ತಾಪ ಕಂಡುಬರುವುದಿಲ್ಲ. ಅವರ ದಶಾವತಾರದ ವರ್ಣನೆಗಳಲ್ಲೂ ವಾಮನ, ನರಸಿಂಹ, ಕೃಷ್ಣ, ರಾಮ ಅವತಾರಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಸಂದಿದೆ. ಕೃಷ್ಣನ ವಿವಿಧ ಲೀಲೆಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿರುವುದು ಕಂಡುಬರುತ್ತದೆ. ಸಮಾಜದ ಅಂಕುಡೊಂಕುಗಳನ್ನು ಗಮನಿಸಿ ಅವುಗಳನ್ನು ವಿಡಂಬಿಸಿರುವುದೂ ಬಹಳ ಅಪರೂಪವೇ. ಒಂದಿಬ್ಬರು ಆಳ್ವಾರರನ್ನು ಬಿಟ್ಟರೆ ಉಳಿದಂತೆ ಯಾರೂ ಸಾಮಾಜಿಕ ಚಿತ್ರಗಳನ್ನು ಚಿತ್ರಿಸಿಲ್ಲ. ಏಕದೇವೋಪಾಸನೆಯನ್ನು ಎತ್ತಿಹಿಡಿಯಲು ಪರಮತ ಹಾಗೂ ಪರದೈವಗಳ ನಿಂದನೆಯನ್ನು ಆಳ್ವಾರರ ಹಾಗೂ ದಾಸರ ಕೃತಿಗಳಲ್ಲಿ ಕಾಣಬಹುದು. ಭಕ್ತಿಭಾವ ಹಾಗೂ ಪರಮಾತ್ಮನ ಲೀಲೆಗಳನ್ನು ಚಿತ್ರಿಸುವಲ್ಲಿ ಆಳ್ವಾರರ ಹಾಗೂ ದಾಸರ ಭಕ್ತಹೃದಯ ಏಕಪ್ರಕಾರವಾಗಿ ಮಿಡಿದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಆಳ್ವಾರರದು ವಿಶಿಷ್ಟಾದ್ವೈತತತ್ವ ಪ್ರತಿಪಾದನೆಯಾದರೆ ದಾಸರದು ದ್ವೈತತತ್ವ ಪ್ರತಿಪಾದನೆ. ಆದ್ದರಿಂದ ತತ್ತ್ವಪ್ರತಿಪಾದನೆಯಲ್ಲಿ ವಿಭಿನ್ನತೆ ಕಂಡುಬರುವುದು ಸಹಜವೇ ಆಗಿದೆ.

# ಪುರಂದರದಾಸರು–ಬಸವಣ್ಣನವರು

ಟಿ. ಕೆ. ಇಂದುಬಾಯಿ

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವಗಳಿಂದ ಗಮನಾರ್ಹರಾದವರು ಬಸವಣ್ಣ ಮತ್ತು ಪುರಂದರದಾಸರು. ಇಬ್ಬರೂ ಎರಡು ವಿಭಿನ್ನ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಪರಂಪರೆಗಳ ಅತ್ಯುನ್ನತ ಪ್ರತಿನಿಧಿಗಳಾಗಿ ಹೆಸರಾದವರು. ಭಕ್ತಿಭಂಡಾರಿ ಎಂದು ಪ್ರಸಿದ್ಧರಾದ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ನಡೆದ ವೀರಶೈವ ಕ್ರಾಂತಿಯ ಮುಂಚೂಣಿಯಲ್ಲಿದ್ದು ನವಸಮಾಜದ ನಿರ್ಮಾಣಕ್ಕಾಗಿ ಶ್ರಮಿಸಿದ್ದಲ್ಲದೆ ಕ್ರಾಂತಿಯ ಫಲವಾಗಿ ಮೂಡಿಬಂದ ವಚನ ಸಾಹಿತ್ಯದ ಶ್ರೇಷ್ಠ ಪ್ರತಿನಿಧಿಯೂ ಆಗಿದ್ದಾರೆ. ಹಾಗೆಯೇ ಹದಿನಾರನೆಯ ಶತಮಾನದ ಪುರಂದರದಾಸರು ವ್ಯಾಸರಾಯರಿಂದ ದೀಕ್ಷೆಗೊಂಡು ಹರಿದಾಸರಾಗಿ, ಭಕ್ತರಾಗಿ, ದಾಸ ಸಾಹಿತ್ಯ ಪರಂಪರೆಯ ಅತ್ಯಂತ ಶ್ರೇಷ್ಠ ಕೀರ್ತನಕಾರರಾಗಿದ್ದಾರೆ.

ಬಸವಣ್ಣನವರ ಸಾಧನೆ ಬಹುಮುಖವಾದದ್ದು. ರಾಜಕೀಯಲ್ಲಿದ್ದೂ ಹೊಸ ಸೈದ್ಧಾಂತಿಕ ತಿಳಿವಿನ ಹಿನ್ನೆಲೆಯಲ್ಲಿ ಹೊಸ ಧಾರ್ಮಿಕ ಪಂಥದ ಸ್ಥಾಪಕರಾಗಿ, ಸಮಾಜ ಸುಧಾರಕರಾಗಿ, ಅನುಭಾವಿಯಾಗಿ, ಜೊತೆಗೆ ಕವಿಯಾಗಿ ಅವರು ಮಾಡಿದ ಸಾಧನೆ–ಸಿದ್ಧಿ ಯಾರನ್ನೂ ಬೆರಗುಗೊಳಿಸುವಂಥದು. ಅವರು ಬದುಕಿದ್ದ ಕಾಲ; ಆ ಕಾಲದ ಧಾರ್ಮಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳು; ಆ ಪರಿಸರದಲ್ಲಿ ಅವರು ತೋರಿದ ದೂರದರ್ಶಿತ್ವ, ಧಾರ್ಮಿಕ ನಿಷ್ಠೆ; ವೀರಶೈವಧರ್ಮದ ಅಡಿಗಲ್ಲಿನ ಮೇಲೆ ಅವರ ನವಸಮಾಜನಿರ್ಮಾಣದ ಸಾಹಸ ಒಂದೊಂದನ್ನೂ ನೆನೆದಷ್ಟೂ ಆ ಮಹಾವ್ಯಕ್ತಿತ್ವಕ್ಕೆ ತಲೆಬಾಗುವಂತಾಗುತ್ತದೆ. ಜಾತೀಯತೆಯ ಉಸಿರು ಕಟ್ಟುವ ವಾತಾವರಣದಲ್ಲಿ ಬದುಕುತ್ತ, ಜಾತ್ಯತೀತ ಸಮಾಜದ ಕನಸು ಕಾಣುವ ಆದರ್ಶಪ್ರಿಯ ಕಣ್ಣುಗಳಿಗೆ ಬಸವಣ್ಣನವರು ೧೨ನೆಯ ಶತಮಾನದಲ್ಲೇ ಸಾಧಿಸಿದ್ದು ಇಂದಿಗೂ ಕಷ್ಟಸಾಧ್ಯ ಎಂದೇ ಎನ್ನಿಸುತ್ತದೆ. ಅಂದಿನ ಅವರ ಬದುಕು–ಸಾಧನೆ ಇಂದಿಗೂ ದಾರಿದೀಪವಾಗುವಂಥದು.

ಬಸವಣ್ಣನವರ ಜೀವನವನ್ನು ಕುರಿತ ಅನೇಕ ಭಿನ್ನಾಭಿಪ್ರಾಯಗಳ ನಡುವೆ ಬಹುಮಟ್ಟಿಗೆ ಸರ್ವಸಮ್ಮತವಾದ ಕೆಲವು ವಿಚಾರಗಳನ್ನು ಇಲ್ಲಿ ಗಮನಿಸಬಹುದು. ಅವರ ಜನ್ಮಸ್ಥಳ ಬಿಜಾಪುರಜಿಲ್ಲೆಯ ಬಾಗೇವಾಡಿ.

ಇದು ಬಹುಶಃ ಇಂಗಳೇಶ್ವರ ಮಹಾಪುರದ ಒಂದು ಭಾಗವಾದ ಅಗ್ರಹಾರ ವಿರಬೇಕು ಎಂದು ವಿದ್ವಾಂಸರ ಅಭಿಪ್ರಾಯವಿದೆ. ಆ ಅಗ್ರಹಾರದ ಮುಖಂಡ ಮಾದರಸ. ಆತನ ಪತ್ನಿ ಮಾದಲಾಂಬೆ. ಇವರಿಗೆ ಮಗನಾಗಿ ಬಸವಣ್ಣ ಸುಮಾರು ೧೧೩೧ ರಲ್ಲಿ ಜನಿಸಿದರು. ಅವರಿಗೆ ದೇವರಾಜನೆಂಬ ಅಣ್ಣ ಮತ್ತು ನಾಗಮ್ಮ ಎಂಬ ಅಕ್ಕ ಇದ್ದರು. ಎಂಟು ವರ್ಷಕ್ಕೆ ಉಪನಯನ ವಾಗುತ್ತದಾದರೂ ಹದಿನಾರನೆಯ ವಯಸ್ಸಿನಲ್ಲಿ ಬಸವಣ್ಣ "ಕರ್ಮಲತೆ ಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು" ಸಂಗಮಕ್ಕೆ ಹೋದರೆಂದು ಹರಿಹರಕವಿ ಹೇಳುತ್ತಾನೆ. ಕೃಷ್ಣ–ಮಲಪ್ರಭಾ ನದಿಗಳ ಸಂಗಮಸ್ಥಳವಾದ ಆ ಕ್ಷೇತ್ರ ಕಪ್ಪಡಿಸಂಗಮವೆಂದು ಪ್ರಸಿದ್ಧವಾಗಿದ್ದು ಪ್ರಾಚೀನ ಕರ್ನಾಟಕದ ಪ್ರಮುಖ ವಿದ್ಯಾಕೇಂದ್ರಗಳಲ್ಲಿ ಒಂದಾಗಿತ್ತು. ಅಲ್ಲಿಯ ಸ್ಥಾನಪತಿಗಳಾದ ಈಶಾನ್ಯಗುರುಗಳ ಮಾರ್ಗದರ್ಶನದಲ್ಲಿ ಬಸವಣ್ಣನವರ ವಿದ್ಯಾಭ್ಯಾಸ ಸಾಗುತ್ತದೆ. ಅಲ್ಲಿದ್ದ ಸುಮಾರು ೧೦–೧೨ ವರ್ಷಗಳಲ್ಲಿ ಅವರ ಮುಂದಿನ ಬದುಕಿಗೆ ಅಗತ್ಯವಾದ ನೆಲಗಟ್ಟು ದೊರಕಿರಬೇಕು. ಸಮಾಜದಲ್ಲಿ ಕವಿದಿದ್ದ ಅಜ್ಞಾನ, ಶೋಷಣೆ, ಮೇಲು–ಕೀಳು, ಬಡವ–ಬಲ್ಲಿದ ಇತ್ಯಾದಿ ಅಂತರಗಳು, ಇವಕ್ಕೆ ಪೋಷಕವಾಗಿ ಧರ್ಮದ ದುರುಪಯೋಗ–ಇವೆಲ್ಲವನ್ನು ಕಂಡು ತಪ್ತವಾದ ಮನಸ್ಸು ಸಮಾಜ ಸುಧಾರಣೆಯತ್ತ ತುಡಿಯುತ್ತಿದ್ದ ಸಂದರ್ಭದಲ್ಲೆ ಅವರು ಮಂಗಳವಾಡಕ್ಕೆ ಹೋಗುವ ಸಂದರ್ಭ ಒದಗುತ್ತದೆ.

ಮಂಗಳವಾಡದ ಅರಸ ಬಿಜ್ಜಳನ ಭಂಡಾರಿಯಾಗಿದ್ದ ಬಲದೇವ, ಬಸವಣ್ಣನವರ ಸೋದರಮಾವ. ಆತ ತನ್ನ ಏಕೈಕ ಪುತ್ರಿ ಗಂಗಾಂಬಿಕೆಯನ್ನು ಬಸವಣ್ಣನವರಿಗೆ ಮದುವೆ ಮಾಡಿಕೊಡಲಿಚ್ಛಿಸಿ ಗುರುಗಳ ಸಹಾಯದಿಂದ ಅವರನ್ನು ಮಂಗಳವಾಡಕ್ಕೆ ಬರಮಾಡಿಕೊಳ್ಳುತ್ತಾನೆ. ಮಂಗಳವಾಡಕ್ಕೆ ಬಂದ ಬಳಿಕ ಬಸವಣ್ಣ ಬಲದೇವನ ಮಗಳು ಗಂಗಾಂಬಿಕೆಯ ಜೊತೆಗೆ ಬಿಜ್ಜಳನ ಸಾಕುತಂಗಿ ನೀಲಾಂಬಿಕೆಯನ್ನೂ ಮದುವೆಯಾಗುತ್ತಾರೆ. ಒಂದೆರಡು ವರ್ಷ ಕಳೆಯುವಷ್ಟರಲ್ಲಿ ಬಲದೇವ ಮರಣಹೊಂದಿದಮೇಲೆ ಆತನ ಉತ್ತರಾಧಿಕಾರಿಯಾಗಿ ಬಿಜ್ಜಳ ಬಸವಣ್ಣನವರನ್ನೆ ನೇಮಿಸುತ್ತಾನೆ. ರಾಜ್ಯದ ಭಂಡಾರಿಯಾದ ಬಸವಣ್ಣ ಭಕ್ತಿಭಂಡಾರಿಯಾಗಿ ರೂಪುಗೊಳ್ಳುತ್ತಿರುವ ಸಂದರ್ಭದಲ್ಲೇ, ಕಲ್ಯಾಣದ ಚಾಲುಕ್ಯರಿಗೆ ಸಾಮಂತನಾಗಿದ್ದ ಬಿಜ್ಜಳ ಚಕ್ರವರ್ತಿಯಾಗಿದ್ದ ತೈಲಪನನ್ನು ಕೊಂದು ತಾನೇ ಚಕ್ರವರ್ತಿಯಾಗುತ್ತಾನೆ. ಆಗ ಬಿಜ್ಜಳನ ಜೊತೆಯಲ್ಲಿ ಬಸವಣ್ಣನವರೂ ಮಂಗಳವಾಡವನ್ನು ಬಿಟ್ಟು ಕಲ್ಯಾಣಕ್ಕೆ ಬರುತ್ತಾರೆ (ಕ್ರಿ.ಶ. ಸು. ೧೧೫೫–೫೬)

ಕಲ್ಯಾಣದಲ್ಲಿ ಅವರ ಕಾರ್ಯಕ್ಷೇತ್ರ ವಿಸ್ತರಿಸಿದ್ದರ ಫಲವಾಗಿ ಬಸವಣ್ಣ

ರಾಜ್ಯದ ಭಂಡಾರಿಯಾಗಷ್ಟೇ ಉಳಿಯದೆ ಸಾಮಾಜಿಕ, ಧಾರ್ಮಿಕ ಸುಧಾರಣೆಯನ್ನು ಕೈಗೆತ್ತಿಕೊಳ್ಳುತ್ತಾರೆ. ಶಕ್ತಿವಿಶಿಷ್ಟಾದ್ವೈತದ ನೆಲಗಟ್ಟಿನ ಮೇಲೆ ಹೊಸಸಮಾಜದ ನಿರ್ಮಾಣದಲ್ಲಿ ತೊಡಗಿ ಯುಗಪ್ರವರ್ತಕಶಕ್ತಿಯಾಗಿ ನಿಲ್ಲುತ್ತಾರೆ. ಇದರಿಂದ ಕಲ್ಯಾಣ ರಾಜಕೀಯ ರಾಜಧಾನಿಯಾಗಷ್ಟೇ ಉಳಿಯದೆ ಬಸವಣ್ಣನವರ ಸತ್ಯಾನ್ವೇಷಣೆಯ ಪ್ರಯೋಗದ ಕೇಂದ್ರವಾಗಿ ನಾಡಿನ ನಾನಾ ಭಾಗಗಳಿಂದ ಆಸಕ್ತ ಸಾಧಕರನ್ನು ಸೆಳೆಯುತ್ತದೆ. ಇಂಥ ನೂರಾರು ಶರಣರು ಕಲ್ಯಾಣದಲ್ಲಿ ಸೇರಿ 'ಅನುಭವ ಮಂಟಪ'ದಲ್ಲಿ ಮಥನಗೊಂಡ ವಿಚಾರಗಳನ್ನು ತಮ್ಮ ಬದುಕಿನಲ್ಲಿ ಅನುಷ್ಠಾನಕ್ಕೆ ತರುವ ಮೂಲಕ ಜಡಗೊಂಡಿದ್ದ ಸಮಾಜದಲ್ಲಿ ಹೊಸ ಅರಿವನ್ನು ಬಿತ್ತಿದರು.

ಅಂದಿನ ಸಾಮಾಜಿಕ ರಾಜಕೀಯ ಸ್ಥಿತಿ ಕೂಡ ಬಸವಣ್ಣನವರ ಈ ಸಾಧನೆಗೆ ಪೂರಕವಾಗಿಯೇ ಇದ್ದಿತು. ವೈಷ್ಣವಧರ್ಮ ಕರ್ಮಕ್ಕೆ ಪ್ರಾಧಾನ್ಯವನ್ನಿತ್ತು ಅಂಧಶ್ರದ್ಧೆ, ಜಾತೀಯತೆ, ಮಡಿವಂತಿಕೆಗಳಲ್ಲಿ ಮುಳುಗಿದ್ದರೆ, ಜೈನಧರ್ಮ ಇಹದ ಬಗ್ಗೆ ತೀವ್ರವೈರಾಗ್ಯವನ್ನು ಬೋಧಿಸುತ್ತ ತನ್ನ ಜೀವನ ವಿರೋಧಿ ತತ್ವಗಳಿಂದ ಅವನತಿಯತ್ತ ಸಾಗಿತ್ತು. ಪ್ರಾಚೀನವಾದ ಶೈವ ಧರ್ಮವೂ ಕಾಳಾಮುಖ, ಲಕುಲೀಶ, ಪಾಶುಪತ ಇತ್ಯಾದಿ ಅನೇಕ ಕವಲುಗಳಾಗಿ ಒಡೆದು, ತಾಂತ್ರಿಕ ಆಚರಣೆಗೂ ಕೆಲವು ಗುಂಪುಗಳಲ್ಲಿ ಅವಕಾಶವಿತ್ತು. ಇಂಥ ಸಂದರ್ಭದಲ್ಲಿ ಬಸವಣ್ಣನವರು ಆಗ ರೂಢಿಯಲ್ಲಿದ್ದ ಶೈವಕ್ಕೆ ಖಚಿತ ರೂಪುರೇಷೆಗಳನ್ನಿತ್ತು ರೂಢಿಗತ ಕಂದಾಚಾರಗಳನ್ನು ಕಿತ್ತೊಗೆದು, ಭಕ್ತಿಗೆ ಪ್ರಾಧಾನ್ಯಕೊಟ್ಟು, ಶಕ್ತಿವಿಶಿಷ್ಟಾದ್ವೈತದ ನೆಲಗಟ್ಟಿನ ಮೇಲೆ ವೀರಶೈವ ಧರ್ಮವನ್ನು ಪ್ರಚುರಗೊಳಿಸಿದರು. ಪಂಚಾಚಾರ, ಅಷ್ಟಾವರಣ, ಷಟ್ಸ್ಥಲ ಸಿದ್ಧಾಂತಗಳ ಭದ್ರ ಚೌಕಟ್ಟಿನಲ್ಲಿ ವೀರಶೈವಧರ್ಮ ಸಮಾಜದ ಎಲ್ಲ ವರ್ಗ, ಜಾತಿಗಳನ್ನು ಒಂದುಗೂಡಿಸಿ ಸಮಾನತೆಯನ್ನು ಸ್ಥಾಪಿಸುವ ಪ್ರಯತ್ನ ಮಾಡಿತು.

ಉಳಿದ ಶೈವಧರ್ಮಗಳಂತೆ ವೀರಶೈವಧರ್ಮವೂ ಶಿವಾಗಮಗಳ ತಳಹದಿಯ ಮೇಲೆಯೇ ರೂಪುಗೊಂಡದ್ದು. 'ಅಂಗ' 'ಲಿಂಗ'ದಲ್ಲಿ 'ಸಾಮರಸ್ಯ'ವನ್ನು ಪಡೆಯಲು ಅಗತ್ಯವಾದ ಸಾಧನಾಮಾರ್ಗ ಈ ಧರ್ಮದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಇದು ಪಂಚಾಚಾರ ಹಾಗೂ ಅಷ್ಟಾವರಣಗಳಿಂದ ಪೋಷಿತವಾದ ಷಟ್ಸ್ಥಲಸಿದ್ಧಾಂತವನ್ನು ಒಳಗೊಂಡಿದೆ. ಇಲ್ಲಿ ಭಕ್ತಿ, ಜ್ಞಾನ ಕರ್ಮಗಳ ಆಚರಣೆಗೆ ಸಮಾನಾವಕಾಶವಿದೆ. ವ್ಯಕ್ತಿಯ ಅಂತರಂಗ ಹಾಗೂ ಬಹಿರಂಗ ಜೀವನದ ಪರಿಶುದ್ಧತೆ ಸತ್ಯದ ಸಾಕ್ಷಾತ್ಕಾರಕ್ಕೆ ಅತ್ಯಾವಶ್ಯಕ ಎನ್ನುವುದು ಈ ಧರ್ಮದ ನಿಲುವು.

ಲಿಂಗಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ, ಗಣಾಚಾರ–ಇವೇ ಪಂಚಾಚಾರಗಳು. ಇವುಗಳಲ್ಲಿ ಸಾಧಕನ ಧಾರ್ಮಿಕ, ಸಾಮಾಜಿಕ, ಹಾಗೂ ನೈತಿಕ ಹೊಣೆಗಾರಿಕೆಗಳು ಸೇರಿಕೊಂಡಿವೆ. ಇವುಗಳ ಜೊತೆಗೆ ಭಕ್ತನೊಬ್ಬನ ಸಾಧನಾಮಾರ್ಗದಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರ–ಇವುಗಳ ಅಷ್ಟಾವರಣ ಮುಖ್ಯವಾದದ್ದು. ಈ ಪಂಚಾಚಾರ ಹಾಗೂ ಅಷ್ಟಾವರಣಗಳ ಸಹಯೋಗದಲ್ಲಿ ನಡೆಯುವ ಸಾಧಕ ಷಟ್ಸ್ಥಲಗಳೆಂಬ ಆರುಹಂತಗಳಲ್ಲಿ ಸಾಗಿ ಶೂನ್ಯದ ಪರಮಪದವಿಗೇರುತ್ತಾನೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ–ಇವೇ ಆ ಷಟ್ಸ್ಥಲಗಳು.

ಸಾಮಾಜಿಕವಾಗಿ ಒಬ್ಬ ವ್ಯಕ್ತಿ ಯಾವುದೇ ಕಾಯಕ ಮಾಡಲಿ ಯಾವುದೇ ಜಾತಿ, ವರ್ಗ, ಲಿಂಗಕ್ಕೆ ಸೇರಿರಲಿ ಗುರುವಿನಿಂದ ದೀಕ್ಷೆಪಡೆದ ಕೂಡಲೆ ಉಳಿದೆಲ್ಲ ಶಿವಭಕ್ತರೊಡನೆ ಸಮಾನನಾಗುತ್ತಿದ್ದ. ಹೀಗೆ ಜಾತಿ ಮತ್ತು ಕಸುಬುಗಳ, ಗಂಡು ಹೆಣ್ಣು, ಬಡವ ಬಲ್ಲಿದ ಎಂಬ ಕಾರಣಗಳಿಂದಾಗಿ ದೂರ ನಿಂತವರು, ಶೋಷಣೆಗೊಳಗಾದವರು ಎಲ್ಲರೂ ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ವೀರಶೈವದಲ್ಲಿ ಸಮಾನತೆಯನ್ನು ಪಡೆದರು. ಫಲವಾಗಿ ಅಂದಿನ ಧಾರ್ಮಿಕ ರಂಗದಲ್ಲಿ ಒಂದು ದೊಡ್ಡ ಕ್ರಾಂತಿಯೇ ಸಂಭವಿಸಿತು. ಅಲ್ಲಮ, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ಅನುಭಾವಿಗಳೆಲ್ಲ ಒಂದೆಡೆ ಸೇರಿ ಈ ನವಸಮಾಜ ನಿರ್ಮಾಣದಲ್ಲಿ ಕಾರ್ಯಪ್ರವೃತ್ತರಾದರು. ಇದರಿಂದ ಅಂದಿನ ಸಮಾಜದಲ್ಲಿ ನೆಲೆಗೊಂಡಿದ್ದ ತಾರತಮ್ಯಗಳೆಲ್ಲ ಪೂರ್ಣವಾಗಿ ವರ್ಣವರ್ಗರಹಿತ, ಧರ್ಮಾಸಕ್ತಿಯುಳ್ಳ ಸಮಾಜವೊಂದು ವೀರಶೈವ ಧರ್ಮದ ಛತ್ರಿಯಡಿಯಲ್ಲಿ ರೂಪುತಳೆಯಿತು. ಕಲ್ಯಾಣದಲ್ಲಿ ಸೇರಿದ ಈ ಶರಣರು ಕಟ್ಟಿದ ಅನುಭವ ಮಂಟಪದ ವಿಚಾರಗೋಷ್ಠಿಗಳು ವೀರಶೈವಧರ್ಮ ನೆಲೆಯೂರಲು ಸಹಾಯಕವಾದಂತೆಯೇ ಕನ್ನಡಸಾಹಿತ್ಯದಲ್ಲಿ ಹೊಸ ಅಧ್ಯಾಯವೊಂದನ್ನು ತೆರೆದವು. ಕನ್ನಡಕ್ಕೆ ಅನನ್ಯವಾದ ವಚನಸಾಹಿತ್ಯದ ಸೃಷ್ಟಿಗೆ ಪ್ರೇರಕವೂ ಪೋಷಕವೂ ಆದವು.

ವಚನಗಳು ಶಿವಶರಣರ ಅನುಭವದ ಸಹಜ ಅಭಿವ್ಯಕ್ತಿಯಾದಂತೆಯೇ ಅವರ ಧರ್ಮಪ್ರಚಾರದ ಸಾಧನವಾಗಿಯೂ ಬಳಕೆಯಾದವು. ಅವರ ಉದ್ದೇಶ ಸಾಹಿತ್ಯಸೃಷ್ಟಿಯಾಗಿರದೆ ಧರ್ಮಪ್ರಚಾರವಾಗಿದ್ದುದರಿಂದ ಸಾಮಾನ್ಯ ಜನತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ತಮಗಿಂತ ಹಿಂದೆ ಇದ್ದ ಜೇಡರ ದಾಸಿಮಯ್ಯ, ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ ಶಿವಶರಣರಿಂದ ರಚಿತವಾಗಿದ್ದ ಸರಳವಾದ ನಡುಗನ್ನಡ ವಚನಗಳ ರೀತಿ

ಯನ್ನೇ ಅವರು ಅನುಸರಿಸಿದರು. ವಚನಸೃಷ್ಟಿಗೆ ಸಂಗೀತ, ಸಾಹಿತ್ಯ ಯಾವುದರ ಪಾಂಡಿತ್ಯವೂ ಬೇಕಾಗಿರಲಿಲ್ಲ. ಹೀಗಾಗಿ ಬಸವಣ್ಣ ಅಲ್ಲಮ ಚೆನ್ನಬಸವಣ್ಣ ಮೊದಲಾದ ವಿದ್ವಾಂಸರಷ್ಟೇ ಅಲ್ಲದೆ ಅಂಥ ವಿದ್ಯಾವಂತರಲ್ಲದ ಸಾಮಾನ್ಯರು, ಸ್ತ್ರೀಯರು ಎಲ್ಲರೂ ತಮ್ಮ ಭಾವ ಅನುಭವಗಳನ್ನು ವಚನಗಳಲ್ಲಿ ಅಭಿವ್ಯಕ್ತಿಸುವುದು ಸಾಧ್ಯವಾಯಿತು. ಇದರಿಂದಾಗಿ ಮೂಲತಃ ಧಾರ್ಮಿಕ–ಸಾಮಾಜಿಕವಾಗಿದ್ದ ಒಂದು ಚಳುವಳಿ ಸಾಹಿತ್ಯದಲ್ಲೂ ಪ್ರತಿಬಿಂಬಿಸಿತು. ಹನ್ನೆರಡನೆಯ ಶತಮಾನದ ಐತಿಹಾಸಿಕ ಅನಿವಾರ್ಯತೆಯಲ್ಲಿ ಸೃಷ್ಟಿಗೊಂಡ ವಚನ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ನಿಂತಿದ್ದಲ್ಲದೆ ಕನ್ನಡ ಸಾಹಿತ್ಯಕ್ಕೆ ಹೊಸ ಅನುಭವವನ್ನೂ, ಭಾಷೆಗೆ ಒಂದು ಹೊಸ ಹದವನ್ನೂ ತಂದುಕೊಟ್ಟಿತು. ಜೊತೆಗೆ ಮುಂದಿನ ಕನ್ನಡ ಕಾವ್ಯದ ದಿಕ್ಕನ್ನೂ ಬದಲಿಸಿತು ಎನ್ನುವುದು ಎಲ್ಲರೂ ಬಲ್ಲ ಸಂಗತಿ.

ಆ ಕಾಲದಲ್ಲಿ ವಚನರಚನೆ ಮಾಡಿದ ಶಿವಶರಣರ ಸಂಖ್ಯೆ ಅಪರಿಮಿತವೇ ಇರಬೇಕು. ಆದರೆ ಸಿಕ್ಕಿದ ಆಧಾರಗಳ ಮೇಲೆ ಕೆಲವರು ಅವರ ಸಂಖ್ಯೆ ೨೦೦ ಎಂದರೆ, ಇನ್ನು ಕೆಲವರು ೩೫೦ ಎನ್ನುತ್ತಾರೆ. ಕೆಲವರ ವಚನಗಳು ಸಿಕ್ಕುತ್ತವೆ, ಹೆಸರು ತಿಳಿಯುವುದಿಲ್ಲ. ಇನ್ನು ಕೆಲವರ ಹೆಸರು ಸಿಕ್ಕುತ್ತವೆ ; ವಚನಗಳು ಸಿಕ್ಕಿಲ್ಲ. ಈ ಬಗ್ಗೆ ಸಂಶೋಧನೆ ಇನ್ನೂ ನಡೆಯುತ್ತಲೇ ಇದೆ. ಇವರಲ್ಲಿ ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಮುಕ್ತಾಯಕ್ಕ ಮೊದಲಾದ ಸು. ೨೫ ವಚನಕಾರ್ತಿಯರ ವಚನಗಳು ಸಿಕ್ಕಿರುವುದು ಒಂದು ವಿಶೇಷ ಸಂಗತಿಯೇ ಆಗಿದೆ. ವಚನಕಾರರಲ್ಲಿ ಕಲೆಗಾರಿಕೆಯ ದೃಷ್ಟಿಯಿಂದ ಜೇಡರ ದಾಸಿಮಯ್ಯ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮೊದಲಾದ ಕೆಲವರನ್ನು ಶ್ರೇಷ್ಠ ವಚನಕಾರರೆಂದು ಹೇಳಿದರೂ, ಬಸವಣ್ಣನವರನ್ನು ವಚನ ಸಾಹಿತ್ಯದ ಅತ್ಯುತ್ತಮ ಪ್ರತಿನಿಧಿ ಎಂದು ಪರಿಗಣಿಸಲಾಗಿದೆ.

ಹೀಗೆ ೧೨ನೆಯ ಶತಮಾನದಲ್ಲಿ ನಡೆದ ಸಾಮಾಜಿಕ ಧಾರ್ಮಿಕ ಕ್ರಾಂತಿಯ ನೇತಾರರಾಗಿ ನಿಂತ ಬಸವಣ್ಣನವರದು ಹಲವು ಮುಖಗಳುಳ್ಳ ಅಪೂರ್ವ ವ್ಯಕ್ತಿತ್ವ. ಭಕ್ತ, ಮಾನವತಾವಾದಿ, ಸಮಾಜ ಸುಧಾರಕ, ಕವಿ– ಈ ಎಲ್ಲ ಮುಖಗಳ ಚಿತ್ರಣ ಅವರ, ಅವರ ಸಮಕಾಲೀನರ ವಚನಗಳಲ್ಲಿ, ಉತ್ತರ ಕಾಲೀನರ ಕಾವ್ಯಗಳಲ್ಲಿ ವರ್ಣಮಯವಾಗಿ ಬಂದಿದೆ. ಅವರ ಬದುಕಿನ ಅಂತ್ಯದ ಚಿತ್ರಮಾತ್ರ ಎಲ್ಲಿಯೂ ಸ್ಪಷ್ಟವಾಗಿ ದೊರೆಯುವುದಿಲ್ಲ. ಅವರೂ ಸೇರಿದಂತೆ ಶಿವಶರಣರೆಲ್ಲ ತಾವು ವೈಚಾರಿಕವಾಗಿ ಒಪ್ಪಿಕೊಂಡ ಸಾಮಾಜಿಕ ಹಾಗೂ ಧಾರ್ಮಿಕ ಸಮಾನತೆಯನ್ನು ತಮ್ಮ ಬದುಕಿನ ಎಲ್ಲ ಹಂತಗಳಲ್ಲೂ ದಿಟ್ಟವಾಗಿ ಕಾರ್ಯಗತಗೊಳಿಸಿದಾಗ ಸಮಾಜದ ಇತರ ಸಂಪ್ರದಾಯವಾದಿ

ಗಳಿಗೆ ಅದು ನುಂಗಲಾರದ ತುತ್ತಾಗಿ ಪರಿಣಮಿಸಿ, ಅಂಥವರಿಂದ ಶಿವಶರಣರು ಪ್ರತಿಭಟನೆಯನ್ನು ಎದುರಿಸಬೇಕಾಯಿತು.ಅವರ ಸುಧಾರಣಾನೀತಿ ಬ್ರಾಹ್ಮಣನಾಗಿದ್ದ ಮಧುವರಸನ ಮಗಳಿಗೂ, ಅಸ್ಪೃಶ್ಯ ಹರಳಯ್ಯನ ಮಗನಿಗೂ ಮದುವೆ ಮಾಡಿಸುವ ಮಟ್ಟಕ್ಕೆ ಹೋದಾಗ ಬ್ರಾಹ್ಮಣರು ವರ್ಣಸಂಕರವಾಯಿತೆಂದು,ಧರ್ಮದ್ರೋಹಿಗಳಿಗೆ ಶಿಕ್ಷೆ ವಿಧಿಸಬೇಕೆಂದು ಚಕ್ರವರ್ತಿ ಬಿಜ್ಜಳನಲ್ಲಿ ದೂರಿತ್ತರು. ಹರಳಯ್ಯ ಮಧುವರಸರಿಗೆ ಬಿಜ್ಜಳ ಶಿಕ್ಷಿಸಿದಾಗ ಇಡೀ ಕಲ್ಯಾಣವೇ ಪ್ರಕ್ಷುಬ್ಧಗೊಳ್ಳುತ್ತದೆ. ಅದೇ ಸಂದರ್ಭದಲ್ಲಿ ಬಿಜ್ಜಳನ ಕೊಲೆಯೂ ನಿಗೂಢವಾಗಿ ನಡೆಯುತ್ತದೆ. ಕೊಲೆಯ ಅಪವಾದ ಶರಣರ ಮೇಲೆ ತಿರುಗುತ್ತದೆ. ಬೇಸರಗೊಂಡ ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ಹೋಗಿ ಕೆಲವೇ ದಿನಗಳಲ್ಲಿ ಅಲ್ಲಿಯೇ ಐಕ್ಯರಾಗುತ್ತಾರೆ.ಶರಣರೆಲ್ಲ ದಿಕ್ಕಾಪಾಲಾಗಿ ಚದುರಿಹೋಗುತ್ತಾರೆ. ಹೀಗೆ ಬಸವಣ್ಣನವರು ಪ್ರಾರಂಭಿಸಿದ ಧಾರ್ಮಿಕ, ಸಾಮಾಜಿಕ ಸುಧಾರಣೆಯ ಕಾರ್ಯ ತತ್ಕಾಲಕ್ಕೆ ಸ್ಥಗಿತಗೊಳ್ಳುತ್ತದೆ. ಈ ಘಟನೆ ಕ್ರಿ.ಶ. ಸು. ೧೧೬೭–೬೮ರಲ್ಲಿ ನಡೆಯಿತೆಂದು ವಿದ್ವಾಂಸರ ಅಭಿಪ್ರಾಯವಿದೆ.

ಕೂಡಲಸಂಗಮದೇವ ಎಂಬ ಅಂಕಿತದಲ್ಲಿ ಇದುವರೆಗೆ ಸಾವಿರಕ್ಕೂ ಮಿಕ್ಕು ಬಸವಣ್ಣನವರ ವಚನಗಳು ಸಿಕ್ಕಿವೆ. ಈ ವಚನಗಳು ಅವರ ಬದುಕಿನ ವಿಭಿನ್ನ ಅನುಭವಗಳ ಮೇಲೆ ಬೆಳಕು ಬೀರುವುವಲ್ಲದೆ ಅವರ ಜೀವನ ದೃಷ್ಟಿಗೂ ಕನ್ನಡಿ ಹಿಡಿಯುತ್ತವೆ. ಅವರ ವಚನರಚನೆಯಲ್ಲಿ ಸಾಹಿತ್ಯಿಕ ಉದ್ದೇಶ ಇಲ್ಲದಿದ್ದರೂ ಅವು ಉತ್ತಮ ಕಾವ್ಯದ ಎಲ್ಲ ಅಂಶಗಳನ್ನು ಒಳಗೊಂಡಿವೆ. ಅವರ ವಚನಗಳು "ಮನುಷ್ಯನ ಚಿತ್ತಸ್ಥಿತಿಯ ವಿವಿಧ ಮುಖಗಳ ಪ್ರದರ್ಶನ ಶಾಲೆ".

ಬಸವಣ್ಣನವರ ವಚನಗಳನ್ನು ಅಂತರಂಗದ ಭಕ್ತಿಸಾಧನೆಗೆ ಸಂಬಂಧಿಸಿದವು ಹಾಗೂ ಸಮಾಜವಿಮರ್ಶೆ–ಬೋಧನೆಗೆ ಸಂಬಂಧಿಸಿದವು ಎಂದು ಸ್ಥೂಲವಾಗಿ ವಿಭಾಗಿಸಬಹುದು. ಅಂತರಂಗಕ್ಕೆ ಸಂಬಂಧಿಸಿದ ವಚನಗಳಲ್ಲಿ ಅವರ ಆತ್ಮವಿಮರ್ಶೆ ಹಾಗೂ ಭಕ್ತಿಸಾಧನೆಯ ವಿವಿಧ ಮುಖಗಳ ಚಿತ್ರಣವಿದೆ. ತಾವು ಹೇಳುವ ವಿಚಾರಗಳನ್ನು ಸರಳವಾದ ಭಾಷೆಯಲ್ಲಿ ನೇರವಾಗಿ ಸಮಯೋಚಿತ ಉಪಮೆ ದೃಷ್ಟಾಂತಗಳೊಂದಿಗೆ ಹೇಳುವುದು ಅವರ ವೈಶಿಷ್ಟ್ಯ. "ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು" ಎಂಬ ಅವರ ಮಾತುಗಳೇ ಅವರ ವಚನಗಳ ವ್ಯಾಖ್ಯಾನದಂತಿವೆ.

ಸಾಧಕನ ಮನಸ್ಸಿನ ಪ್ರಾರಂಭದ ಒಳತೋಟಿಯ ಚಿತ್ರವನ್ನು ಪರಿಪರಿಯಾಗಿ, ಪರಿಣಾಮಕಾರಿಯಾಗಿ ಇವರ ಅನೇಕ ವಚನಗಳು ಕೊಡುತ್ತವೆ.

ದಿನನಿತ್ಯ ನಾವು ಕಾಣುವ ಸಾಮಾನ್ಯಾತಿ ಸಾಮಾನ್ಯ ಸಂಗತಿಗಳು ಇಲ್ಲಿ ಉಪಮೆಗಳಾಗಿ, ರೂಪಕಗಳಾಗಿ, ಪ್ರತಿಮೆಗಳಾಗಿ ಸಮರ್ಥವಾಗಿ ಬಳಕೆಯಾಗಿರುವ ಪರಿ ಅಚ್ಚರಿ ತರುವಂತಿದೆ. ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ; ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ ; ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ ; ಓತಿ ಬೇಲಿ ಏರಿದಂತೆ ಎನ್ನ ಮನವಯ್ಯ ; ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸದಿರಯ್ಯ–ಈ ಮೊದಲಾದ ವಚನಗಳನ್ನು ಈ ದೃಷ್ಟಿಯಿಂದ ಗಮನಿಸಬಹುದು.

ಬಸವಣ್ಣನವರು 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನು ಒಂದೇ ಎಂದು' ನಂಬಿದವರು. 'ಎನ್ನವರೊಲಿದು ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ' ಎಂದು ನೊಂದು ; 'ಅಯ್ಯೋ ನೊಂದೆನು ಸೈರಿಸಲಾರೆನು ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ ಎನ್ನ ಹೊಗಳ ತೆಗಡ್ಡ ಬಾರಾ ಧರ್ಮಿ' ಎಂದು ಪ್ರಾರ್ಥಿಸಿದವರು. ಇನ್ನೊಂದು ವಚನದಲ್ಲಿ–

ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು
ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯ ಕೂಡಲಸಂಗಮ ದೇವಾ
ಹಾಲಲದ್ದು ನೀರಲ್ಲದ್ದು

ಎಂದು ತಾವು ನಂಬಿದ ದೈವದಲ್ಲಿ ಅನನ್ಯ ಶರಣಾಗತಿಯನ್ನು ತೋರಿದವರು. ಅದೇ ದಾರಿಯಲ್ಲಿ ನಡೆದು ಶಿವೈಕ್ಯರಾದವರು.

ಇವರ ವಚನಸೃಷ್ಟಿಗೆ ಆಂತರಂಗಿಕ ಒತ್ತಡ ಕಾರಣವಾಗಿರುವಂತೆಯೇ ಸಾಮಾಜಿಕ ಉದ್ದೇಶಗಳೂ ಇದ್ದವು. ಹೀಗಾಗಿ ಈ ವಚನಗಳಲ್ಲಿ ಭಕ್ತಿ ಸಾಧನೆಯ ವಿವಿಧ ಮಜಲುಗಳು ಅಭಿವ್ಯಕ್ತಗೊಂಡಿರುವಂತೆಯೇ ಅವರ ಸಾಮಾಜಿಕ ಸಾಧನೆಯ ವಿವಿಧ ಮುಖಗಳೂ ಸಂಘರ್ಷಗಳೂ ಪರಿಣಾಮಕಾರಿಯಾಗಿ ಮೂಡಿಬಂದಿವೆ. ತಮ್ಮಕಾಲದ ಸಮಾಜದ ಅನೇಕ ದೋಷ ದೌಷ್ಕೃತ್ಯಗಳನ್ನು ತಮ್ಮ ಎಷ್ಟೋ ವಚನಗಳಲ್ಲಿ ಟೀಕಿಸಿದ್ದಾರೆ, ವಿಡಂಬಿಸಿದ್ದಾರೆ. ಒಂದು ವಚನದಲ್ಲಿ–

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ

ಎಂದು ವಿಡಂಬಿಸಿದರೆ, ಇನ್ನೊಂದು ವಚನದಲ್ಲಿ ಬೇರೆಯವರಿಂದ ಪೂಜೆ ಮಾಡಿಸುವವರನ್ನು–

ತನ್ನಾಶ್ರಯದ ರತಿಸುಖವನು
ತಾನುಂಬ ಊಟವನು
ಬೇರೊಬ್ಬರ ಕೈಯಲು ಮಾಡಿಸಬಹುದೆ

ಎಂದು ಕೇಳುತ್ತಾರೆ. 'ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ' 'ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ.' ಈ ದೇಹ ಕಾಲಕ್ಕೆ ವಶವಾಗುವಂಥದು. ಆದ್ದರಿಂದ–

ನೆರೆಕೆನ್ನೆಗೆ ತೆರೆಗಲ್ಲಕೆ ಶರೀರಗೂಡುವೋಗದ ಮುನ್ನ
ಹಲ್ಲುಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ
ಮುಪ್ಪಿನಿಂದೊಪ್ಪವಳಿಯದ ಮುನ್ನ ಮೃತ್ಯುಮುಟ್ಟದ ಮುನ್ನ
ಪೂಜಿಸು ವೋ ಕೂಡಲ ಸಂಗಮದೇವನ

ಎಂದು ಹೃದಯಸ್ಪರ್ಶಿಯಾಗಿ ಈ ದೇಹ ರೂಪಾಂತರಗೊಳ್ಳುವ ಕಾಲವಶವಾಗುವ ಚಿತ್ರ ಕೊಡುತ್ತಲೇ ಹೀಗಾಗುವ ಮುನ್ನ ಶಿವನನ್ನು ಪೂಜಿಸು ಎಂದು ಉಪದೇಶಿಸಿದ್ದಾರೆ. 'ಸಂಸಾರವೆಂಬುದೊಂದು ಗಾಳಿಯ ಸೊಡರು... ಇದ ನೆಚ್ಚಿ ಕೆಡಬೇಡ' ಎನ್ನುತ್ತಾರೆ. ಇದೇ ಬಗೆಯ ಬಹಳಷ್ಟು ವಚನಗಳನ್ನು ಇವರಲ್ಲಿ ಕಾಣಬಹುದು.

ಹೀಗೆ ಸಮಾಜದ ಓರೆಕೋರೆಗಳತ್ತ ಬೆರಳಿಟ್ಟು ತೋರಿಸಿ ಇದು ಸಲ್ಲದ್ದು ಎಂದು ಹೇಳಿದಂತೆಯೇ ಇಹಪರಗಳಲ್ಲಿ ಸಲ್ಲುವ ಮಾರ್ಗಯಾವುದು ಎಂಬುದನ್ನು ಅಷ್ಟೇ ಸಮರ್ಥವಾಗಿ ತಾವು ನಂಬಿದ,ಅನುಸರಿಸಿದ ಜೀವನ ಸಿದ್ಧಾಂತದ ಮೂಲಕ ಸಮಾಜದ ಎಲ್ಲರಿಗೂ ಬೋಧಿಸಲೆತ್ನಿಸಿದ ಹಿರಿಯರು ಬಸವಣ್ಣನವರು.ಅವರ ಬದುಕಿನ ವಿಭಿನ್ನ ಮುಖಗಳ ಅತ್ಯುತ್ತಮ ಚಿತ್ರ ಅವರದೇ ವಚನಗಳಲ್ಲಿ ಅವರಿಂದಲೇ ದಾಖಲಾಗಿರುವುದು ಸ್ವಾರಸ್ಯಸಂಗತಿ. ''ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ ; ಎತ್ತೆತ್ತ ನೋಡಿದರೆ ಲಿಂಗವೆಂಬ ಗೊಂಚಲು ; ಒತ್ತಿ ಹಿಂಡಿದೊಡೆ ಭಕ್ತಿಯೆಂಬ ರಸವಯ್ಯ'' . ಮಡಿವಾಳ ಮಾಚಯ್ಯನ ಈ ವಚನ ಬಸವಣ್ಣನವರ ಭಕ್ತಿಪೂರ್ಣವ್ಯಕ್ತಿತ್ವ ಶರಣರೊಳಗೆ ವ್ಯಾಪಕವಾಗಿ ಹರಡಿದ್ದುದನ್ನು ತುಂಬಾ ಚೆನ್ನಾಗಿ ಚಿತ್ರಿಸುತ್ತದೆ.

ಗಾತ್ರ ಗುಣಗಳಲ್ಲಿ ವ್ಯತ್ಯಾಸ ಇದ್ದರೂ ವೀರಶೈವ ಕ್ರಾಂತಿಯ ನಂತರ ಕನ್ನಡ ನಾಡು-ನುಡಿ ಕಂಡ ಮತ್ತೊಂದು ಗಣನೀಯ ಘಟನೆ ಹರಿದಾಸಪಂಥದ ಉದಯ. ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕಕ್ರಾಂತಿಯಿಂದಾಗಿ ಸಾಮಾನ್ಯ ಜನ ತಂಡ ತಂಡವಾಗಿ ವೀರಶೈವ ಧರ್ಮವನ್ನವಲಂಬಿಸಿದ್ದನ್ನು

ಕಂಡು ವೈದಿಕ ಧರ್ಮದವರು ತಮ್ಮ ಧರ್ಮದ ಉಳಿವಿನ ಬಗ್ಗೆ ಚಿಂತಿಸುವಂತಾಯಿತು. ಶಿವಶರಣರು ಅನುಭವ ಮಂಟಪದ ಮೂಲಕ ಸಂಘಟಿತರಾಗಿ ವಚನಗಳ ಮೂಲಕ ಯಶಸ್ವಿಯಾಗಿ ಧರ್ಮಪ್ರಚಾರ ಮಾಡಿದ್ದನ್ನು ಕಂಡು ಅದೇ ರೀತಿ ತಮ್ಮ ಮತದ ಪ್ರಚಾರ ಮಾಡುವ ಅಗತ್ಯ ಅವರಿಗೆ ಕಾಣಿಸಿರಬೇಕು. ಬಹುಶಃ ಇದರ ಫಲವಾಗಿಯೇ ದಾಸಸಾಹಿತ್ಯ ಹುಟ್ಟಿರಬೇಕು. ವಚನಗಳಲ್ಲಿ ಹರಪಾರಮ್ಯವಿದ್ದರೆ ದಾಸಸಾಹಿತ್ಯದಲ್ಲಿ ಹರಿಪಾರಮ್ಯವಿದೆ. ಅಲ್ಲಿ ಶಕ್ತಿವಿಶಿಷ್ಟಾದ್ವೈತದ ನೆಲಗಟ್ಟಿದ್ದರೆ ಇಲ್ಲಿ ಮಧ್ವಮತವನ್ನು ಆಧರಿಸಿರುವುದು ಕಾಣುತ್ತದೆ. ಅಲ್ಲಿಯಂತೆ ಇಲ್ಲಿಯೂ ಭಕ್ತಿಗೆ ಮೊದಲ ಮಣೆ. ಧರ್ಮ ಪ್ರಚಾರಕ್ಕೆ ಎರಡೂ ಪಂಥಗಳಲ್ಲಿ ಜನರ ನುಡಿಯೇ ವಾಹಕ. ಅಲ್ಲಿ ಕಾವ್ಯಮಯವಾದ ಗದ್ಯದಲ್ಲಿ ವಚನ ಸೃಷ್ಟಿಯಾದರೆ ಇಲ್ಲಿ ಕೀರ್ತನೆ ನರ್ತನಗಳು ಕಾಣಿಸಿಕೊಂಡವು. ಶೂನ್ಯಸಿಂಹಾಸನ, ಅನುಭವ ಮಂಟಪಗಳು ಅಲ್ಲಿದ್ದರೆ, ಇಲ್ಲಿ ವ್ಯಾಸಕೂಟ ದಾಸಕೂಟಗಳು ತಲೆಯೆತ್ತಿದವು. ವಚನಕಾರರಂತೆ ಹರಿದಾಸರೂ ತಮ್ಮ ಕೃತಿಗಳಲ್ಲಿ ಇಷ್ಟದೈವದ ಅಂಕಿತಗಳನ್ನು ಬಳಸಿದರು. ಅವರಲ್ಲಿ ವಚನಗಳು, ಹಾಡುಗಳು ಮಾತ್ರ ಸೃಷ್ಟಿಯಾದರೆ ಇವರಲ್ಲಿ ಪದ, ಉಗಾಭೋಗ, ಸುಳಾದಿ, ಮುಂಡಿಗೆ, ಸುವ್ವಾಲಿ, ದಂಡಕ, ವೃತ್ತನಾಮಗಳ ವೈವಿಧ್ಯಪೂರ್ಣ ಸೃಷ್ಟಿಯಿದೆ. ಶಿವಶರಣರು ಸಾಕಾರದಿಂದ ನಿರಾಕಾರಕ್ಕೇರಿದವರು;ದಾಸರು ಸಾಕಾರ ಮಾರ್ಗದವರು. ಇಬ್ಬರೂ ತಮ್ಮ ತಮ್ಮ ಮತತತ್ವಗಳನ್ನು ಪ್ರತಿಪಾದಿಸಿದವರು ಹಾಗೂ ಪ್ರಚಾರ ಮಾಡಿದವರು. ವೇದ ಆಗಮಗಳಲ್ಲಿಯ ಆಧ್ಯಾತ್ಮಿಕ ತತ್ವಗಳನ್ನು ಆಡು ನುಡಿಯಲ್ಲಿ ಸರಳವಾಗಿ ಸಾಮಾನ್ಯರಿಗೆ ಹೇಳುವ ಪ್ರಯತ್ನವನ್ನು ಮಾಡಿದವರು. ಅವರಿಬ್ಬರ ಗುರಿ ಒಂದಾದರೂ ದಾರಿಗಳು ಬೇರೆ ಬೇರೆಯಾಗಿದ್ದದ್ದರಿಂದ ಅವರಲ್ಲಿ ಸಾಮ್ಯಗಳನ್ನು ಗುರುತಿಸಿದಂತೆ ಅನೇಕ ಅಂಶಗಳಲ್ಲಿ ವೈಷಮ್ಯಗಳನ್ನೂ ಗುರುತಿಸಬಹುದು.

ದಾಸಪಂಥಕ್ಕೆ ದ್ವೈತ ಮತಾಚಾರ್ಯರಾದ ಮಧ್ವಾಚಾರ್ಯರೇ ಮೂಲ ಪುರುಷರೆಂಬ ಅಭಿಪ್ರಾಯವಿದೆ. ಆದರೆ ಕರ್ನಾಟಕದಲ್ಲಿ ದಾಸಪಂಥ ವಾಸ್ತವವಾಗಿ ಪ್ರಾರಂಭವಾಗಿ ಔನ್ನತ್ಯಕ್ಕೇರಿದ್ದು ೧೫–೧೬ನೆಯ ಶತಮಾನಗಳಲ್ಲಿ ಆಧ್ಯಾತ್ಮಿಕ ತತ್ವಗಳನ್ನು ಮೊದಲಿಗೆ ಕನ್ನಡದಲ್ಲಿ ರಚಿಸಿ ಹಾಡಿದವರು ಶ್ರೀಪಾದರಾಯರು. ಇವರ ದಾರಿಯಲ್ಲೇ ನಡೆದವರು ವ್ಯಾಸರಾಯರು. ಇವರೂ ಶ್ರೀಪಾದರಾಯರಂತೆ ಮಠದ ಸ್ವಾಮಿಗಳಾಗಿದ್ದವರು. ವಿಜಯನಗರ ಸಾಮ್ರಾಜ್ಯದ ರಾಜಗುರುಗಳಾಗಿದ್ದು ಸಂಸ್ಕೃತ ಹಾಗೂ ಕನ್ನಡಗಳಲ್ಲಿ ಅನೇಕ

ಕೃತಿಗಳನ್ನು ರಚಿಸಿದವರು. ಮುಂದೆ ಪುರಂದರದಾಸರು, ಕನಕದಾಸರು, ವಾದಿರಾಜರು ಮೊದಲಾದವರು ಇವರ ನೇತೃತ್ವದಲ್ಲಿ ದಾಸಪಂಥವನ್ನು ಬೆಳೆಸಿದರು. ಮಧ್ಯದ ಕೆಲವು ವರ್ಷಗಳನ್ನು ಬಿಟ್ಟರೆ ಅಂದಿನಿಂದ ಇಂದಿನ ವರೆಗೂ ದಾಸಪಂಥ ಅವಿಚ್ಛಿನ್ನವಾಗಿ ಬೆಳೆದು ಬಂದಿದೆ. ಈ ಪಂಥದ ಶ್ರೇಷ್ಠ ಪ್ರತಿನಿಧಿಗಳಾಗಿ, ವಿರಾಗಿಗಳಾಗಿ, ಭಕ್ತರಾಗಿ, ಸಂಗೀತ ಹಾಗೂ ಸಾಹಿತ್ಯ–ಎರಡೂ ಕ್ಷೇತ್ರಗಳಲ್ಲಿ ಗಣ್ಯರಾಗಿ, ತಮ್ಮ ಬದುಕು ಮತ್ತು ಕೃತಿಗಳಿಂದ ಪಂಡಿತಪಾಮರರೆಲ್ಲರ ಪ್ರಶಂಸೆಯನ್ನೂ ಗಳಿಸಿದ ದಾಸಶ್ರೇಷ್ಠರು ಪುರಂದರ ದಾಸರು.

ಪುರಂದರದಾಸರ ಕಾಲ, ಜನ್ಮಸ್ಥಳ, ಪೂರ್ವಾಶ್ರಮದ ಹೆಸರು – ಇವೆಲ್ಲದರ ಬಗೆಗೂ ಚರ್ಚೆ ಇನ್ನೂ ನಡೆಯುತ್ತಲೇ ಇದೆ. ಆಗರ್ಭ ಶ್ರೀಮಂತರೂ ಜಿಪುಣಾಗ್ರೇಸರರೂ ಆಗಿದ್ದ ಇವರು ಸಂದರ್ಭವಶಾತ್ ವಿರಾಗಿಗಳಾಗಿ ತಮ್ಮೆಲ್ಲ ಸಂಪತ್ತನ್ನು ತ್ಯಜಿಸಿ ಹೆಂಡತಿ ಮಕ್ಕಳೊಂದಿಗೆ ಹಂಪೆಗೆ ಬಂದು, ವ್ಯಾಸರಾಯರಿಂದ ಹರಿದಾಸದೀಕ್ಷೆಯನ್ನು ಪಡೆಯುತ್ತಾರೆ. ಅವರ ಬದುಕಿನ ಈ ಮುಖ್ಯ ತಿರುವಿಗೆ ಅವರ ಹೆಂಡತಿಯ ಪ್ರೇರಣೆ ಇದ್ದಿತೆನ್ನುವುದು "ಆದದ್ದೆಲ್ಲ ಒಳಿತೇ ಆಯಿತು" – ಎಂಬ ಅವರದೇ ಆದ ಒಂದು ಕೀರ್ತನೆಯಿಂದ ತಿಳಿಯುತ್ತದೆ. ಆ ಕಾಲದಲ್ಲಿ ಮಠಾಧಿಪತಿಗಳೂ ವಿದ್ವಾಂಸರೂ ಆಗಿದ್ದವರು ಸಂಸ್ಕೃತದಲ್ಲಿ ಗ್ರಂಥರಚನೆ ಮಾಡಿ ವ್ಯಾಸಕೂಟವನ್ನು ಬೆಳೆಸಿದ್ದರು. ಆ ಗಹನವಾದ ಆಧ್ಯಾತ್ಮಿಕ ತತ್ವಗಳನ್ನು ಊರೂರು ತಿರುಗುತ್ತ ಸಾಮಾನ್ಯ ಜನತೆಗೆ ಕನ್ನಡದಲ್ಲಿ ಸರಳವಾಗಿ ಹೇಳುವ ಕೆಲಸವನ್ನು ದಾಸಪಂಥದವರು ಮಾಡಿದರು. ಇದಕ್ಕೆ ಪುರಂದರರೇ ಮೊದಲಿಗರಾದರು. ಮೈಸೂರು, ಉಡುಪಿ, ತಿರುಪತಿ, ತಮಿಳ್ನಾಡು ಇತ್ಯಾದಿ ಸ್ಥಳಗಳಲ್ಲಿ ತಿರುಗುತ್ತ ತಮ್ಮ ಕೀರ್ತನೆ, ಸುಳಾದಿ, ಉಗಾಭೋಗಗಳ ಮೂಲಕ ಜನರಿಗೆ ಹರಿಭಕ್ತಿ ಹಾಗೂ ಉತ್ತಮ ಬದುಕಿನ ಸಂದೇಶವನ್ನು ನೀಡಿದರು. ಬಹುಶಃ ಹಾಡುತ್ತಲೇ ಸೃಷ್ಟಿಯಾದ ಇವರ ಕೃತಿಗಳು ತುಂಬ ಜನಪ್ರಿಯವೂ ಆಗಿವೆ. "ದೀಕ್ಷಾಸ್ವೀಕಾರಕ್ಕೆ ಮೊದಲೇ ದಾಸರಿಗೆ ಸಂಗೀತಾದಿ ಕಲೆಗಳಲ್ಲಿ ಆಸಕ್ತಿ ಇದ್ದಿರಬೇಕು. ದಾಸರಾದ ನಂತರ ಅವುಗಳ ಅರ್ಥಪೂರ್ಣ ಬಳಕೆಗೆ ದಾರಿಯಾಯಿತು. ಭಕ್ತಿಯ ನಿರ್ಭರತೆ, ಮನಸ್ಸಿನ ಪಕ್ವತೆ, ಅನುಭವದ ಹಿರಿತನ, ದಾಸರ ಕೃತಿಗಳಲ್ಲಿ ಒಂದು ಅಪೂರ್ವವಾದ ಗಾಂಭೀರ್ಯವನ್ನು ನಿಲುವನ್ನು ತನ್ಮಯತೆಯನ್ನು ಒದಗಿಸುವುದು ಸಾಧ್ಯವಾಯಿತು."[1]

1. ಎಚ್. ಎಸ್. ವೆಂಕಟೇಶಮೂರ್ತಿ, ಕೀರ್ತನಕಾರರು. ಪು. ೨೮



ಸಂಗೀತದ ಮಾಧುರ್ಯ, ಸಾಹಿತ್ಯದ ಸ್ವಾರಸ್ಯ, ಧರ್ಮದ ಸಂದೇಶ– ಇವುಗಳ ತ್ರಿವೇಣಿಸಂಗಮವಾದ ಪುರಂದರದಾಸರ ಕೃತಿಗಳು ದಾಸಸಾಹಿತ್ಯಕ್ಕೆ ವೈವಿಧ್ಯವನ್ನು ವೈಶಾಲ್ಯವನ್ನು ದೊರಕಿಸಿಕೊಟ್ಟವು. ಇವರ ಕೃತಿಗಳನ್ನು ಬಸವಣ್ಣನವರ ವಚನಗಳನ್ನು ವಿಭಾಗಿಸಿದಂತೆ ವ್ಯಕ್ತಿನಿಷ್ಠ, ಸಾಮಾಜಿಕ ಎಂದು ಸ್ಥೂಲವಾಗಿ ವಿಭಾಗಿಸಬಹುದು. ವ್ಯಕ್ತಿನಿಷ್ಠ ಕೃತಿಗಳಲ್ಲಿ ಆತ್ಮ ನಿವೇದನೆ, ಭಗವಂತನ ನಾಮಸ್ಮರಣೆ, ವರ್ಣನೆ, ಲೀಲಾವಿನೋದಗಳು ಹೃದ್ಯವಾಗಿ ಚಿತ್ರಿತವಾಗಿವೆ. ಸಾಮಾಜಿಕ ಕೃತಿಗಳಲ್ಲಿ ಸಮಾಜದ ಬಗ್ಗೆ ಅವರು ಸ್ಪಂದಿಸಿದ ರೀತಿಯು ವರ್ಣಮಯ ಚಿತ್ರವಿದೆ. ಬಸವಣ್ಣನವರಂತೆಯೇ ಸಮಾಜದ ಕುಂದುಕೊರತೆಗಳನ್ನು ಬೆರಳಿಟ್ಟು ತೋರಿ ಕಟೂಕ್ತಿಗಳಿಂದ ಖಂಡಿಸಿ, ಸದಾಚಾರದ ಬದುಕಿನ ತಿಳಿವನ್ನು ಕೊಡುವ ಇವರ ಅನೇಕ ಕೃತಿಗಳಲ್ಲಿ ಅಸಾಮಾನ್ಯ ನೈತಿಕ ಹಾಗೂ ಸಾಮಾಜಿಕ ಪ್ರಜ್ಞೆಗಳಿವೆ. ಇವರ ವ್ಯಕ್ತಿನಿಷ್ಠ ಭಕ್ತಿಗೀತೆಗಳಲ್ಲಿ ಭಾವಗೀತೆಯ ತೀವ್ರತೆಯನ್ನು ವೈಚಾರಿಕ ಕೃತಿಗಳಲ್ಲಿ ವಿಚಾರದ ತೀಕ್ಷ್ಣತೆಯನ್ನು ಗುರುತಿಸಬಹುದಾಗಿದೆ.

ಆತ್ಮನಿವೇದನೆಯ ಕೃತಿಗಳಲ್ಲಿ ಭಕ್ತಜೀವದ ಆಳವಾದ ನೋವು, ವಿಷಾದ, ಸಂಸಾರದಿಂದ ಬಿಡಿಸಿಕೊಳ್ಳುವ ತವಕ, ತಳಮಳ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ. ಆದರೆ ಈ ಎಲ್ಲದರ ಹಿಂದೆ ಅಚಲವಾದ ದೈವನಿಷ್ಠೆ ಹಾಗೂ ಜೀವನಶ್ರದ್ಧೆ ಇರುವುದನ್ನು ಅವರ ಕೃತಿಗಳಲ್ಲಿ ಗಮನಿಸಬಹುದು. ಬಿನ್ನಹಕೆ ಬಾಯಿಲ್ಲವಯ್ಯ, ನಂಬಿಕೆಟ್ಟವರಿಲ್ಲವೋ, ಕರುಣಾಕರ ನೀನೆಂಬುವದೇಕೋ – ಇತ್ಯಾದಿ ಕೃತಿಗಳನ್ನು ಈ ದೃಷ್ಟಿಯಿಂದ ಗಮನಿಸಬಹುದು.

ಹರಿಯ ಅವತಾರಗಳಲ್ಲಿ ಹಾಗೂ ಮಧ್ವಾಚಾರ್ಯರ ಅವತಾರಗಳಲ್ಲಿ ಇವರಿಗೆ ನಂಬಿಕೆ ಇರುವುದರಿಂದ ರಾಮಾಯಣ, ಮಹಾಭಾರತ, ಭಾಗವತಗಳ ಒಳಕೆ ಹೆಚ್ಚಾಗಿ ಕಂಡುಬರುತ್ತದೆ. ಹರಿಯ ಅವತಾರಗಳನ್ನು ಪಂಚಭಾವಗಳಲ್ಲಿ ಸ್ತುತಿಸುವ ಕೃತಿಗಳು ಬಹಳಷ್ಟು ಇದ್ದರೂ, ವಾತ್ಸಲ್ಯಭಾವದ– ಬಾಲಕೃಷ್ಣನನ್ನು ಕುರಿತ – ಇವರ ಕೃತಿಗಳು ತುಂಬ ಜನಪ್ರಿಯವಾಗಿವೆ. ವಾತ್ಸಲ್ಯಭಾವದ ಶ್ರೇಷ್ಠಕೃತಿಗಳನ್ನು ರಚಿಸಿದವರಲ್ಲಿ ಪುರಂದರದಾಸರು ಅಗ್ರಗಣ್ಯರು. ಗುಮ್ಮನ ಕರೆಯದಿರೆ, ಪೋಗದಿರಲೊ ರಂಗ, ಗೋಪಿಯ ಭಾಗ್ಯವಿದು, ಆಡಿದನೋ ರಂಗ ಅದ್ಭುತದಿಂದಲಿ – ಇತ್ಯಾದಿ ಕೃತಿಗಳನ್ನು ವಾತ್ಸಲ್ಯಭಾವದ ಚಿತ್ರಣಕ್ಕಾಗಿ ನೋಡಬಹುದು.

ಸಂಸಾರದ ನಿಸ್ಸಾರತೆಯನ್ನು ನಶ್ವರತೆಯನ್ನು ಅನೇಕ ಕೃತಿಗಳಲ್ಲಿ

ಹೇಳುತ್ತಾರಾದರೂ, ಸಂಸಾರದಿಂದ ಪಲಾಯನ ಮಾಡುವುದನ್ನು ಇವರು ಒಪ್ಪುವುದಿಲ್ಲ. 'ಮಾನವಜನ್ಮ ದೊಡ್ಡದು ಇದ ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ' ; 'ಈಸಬೇಕು ಇದ್ದು ಜೈಸಬೇಕು' ಎಂದು ಹೇಳುತ್ತ ಬದುಕಿನ ಸುಖದುಃಖಗಳನ್ನೆಲ್ಲ ಹರಿಸಮರ್ಪಣೆ ಮಾಡಿ ಬದುಕಬೇಕು ಎಂದು ಬೋಧಿಸುತ್ತಾರೆ.

ಇವರ ಅನೇಕ ಕೃತಿಗಳಲ್ಲಿ ಗಾಢವಾದ ಸಾಮಾಜಿಕ ಪ್ರಜ್ಞೆ ಇರುವುದನ್ನು ಗಮನಿಸಬಹುದು. ನಗೆಯು ಬರುತಿದೆ, ನಿಂದಕರಿರಬೇಕು, ಆಚಾರವಿಲ್ಲದ ನಾಲಗೆ, ಮಡಿಮಡಿಮಡಿಯೆಂದಡಿಗಡಿಹಾರುತಿ ಮಡಿಯೆಲ್ಲಿದೆಯೋ ಬಿಕನಾಸಿ, ಹೊಲೆಯ ಹೊರಗಿಹನೆ, ಹೊಲೆಯಬಂದನೆಂದು, ಡೊಂಕುಬಾಲದ ನಾಯಕರೆ – ಇವೇ ಮೊದಲಾದ ಕೃತಿಗಳನ್ನು ಈ ದೃಷ್ಟಿಯಿಂದ ಗಮನಿಸಬಹುದು.

'ಆಚಾರವಿಲ್ಲದ ನಾಲಗೆ' ವ್ಯಕ್ತಿ ಮಾತಿನ ಬಗ್ಗೆ ತೋರಬೇಕಾದ ಎಚ್ಚರವನ್ನು ಕುರಿತು ಹೇಳಿದರೆ, 'ಡೊಂಕುಬಾಲದ ನಾಯಕರೆ' ವಿಕೃತ ವ್ಯಕ್ತಿತ್ವವೊಂದರ ವ್ಯಂಗ್ಯಪೂರ್ಣ ಚಿತ್ರವನ್ನು ಕಟ್ಟಿಕೊಡುತ್ತದೆ. ಹೊಲೆಯ ಹೊರಗಿಹನೆ, ಹೊಲೆಯ ಬಂದನೆಂದು, ಮಡಿ ಮಡಿ ಮಡಿಯೆಂದು – ಇವು ದಾಸರಿಗೆ ರೂಢಿಗತ ಜಾತಿವ್ಯವಸ್ಥೆ, ಕಂದಾಚಾರಗಳ ಬಗ್ಗೆ ಇದ್ದ ಅಸಹನೆಯನ್ನು ವ್ಯಕ್ತಪಡಿಸುತ್ತವೆ.

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಗಣ ಗಣ ಗಂಟೆಯ ಬಾರಿಸುವರಯ್ಯ
ತನುವಿನ ಕೋಪವು ಹೊಲೆಯಲ್ಲವೆ
ಪರಧನ ಪರಸತಿ ಹೊಲೆಯಲ್ಲವೆ
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ
ಇದಕೇನು ಮದ್ದೊ ಪುರಂದರವಿಠಲ

ಈ ಉಗಾಭೋಗವನ್ನು ಗಮನಿಸಿದರೆ, ಹೊಲೆತನ ಹುಟ್ಟಿನಿಂದ ಬರುವಂಥದಲ್ಲ, ಗುಣಕರ್ಮದಿಂದ ಬರುವಂಥದು ಎಂದು ಹೇಳುವಲ್ಲಿ ಪುರಂದರದಾಸರು ಶಿವಶರಣರಿಂದ ಹಾಗೂ ವೀರಶೈವ ಕಾವ್ಯಗಳಿಂದ ಪ್ರಭಾವಿತರಾಗಿದ್ದಾರೆ ಎನ್ನಿಸುತ್ತದೆ. ಆದರೆ ವೈಚಾರಿಕ ನೆಲೆಯಲ್ಲಿ ಇದನ್ನು ಒಪ್ಪಿದ್ದರೂ, ಶಿವಶರಣರಂತೆ ಜಾತ್ಯತೀತ ಸಮಾಜವೊಂದರ ನಿರ್ಮಾಣ, ಸಮಾಜದ ಆಮೂಲಾಗ್ರ ಬದಲಾವಣೆಯ ಕ್ರಾಂತಿ ದಾಸಪಂಥದ ಉದ್ದೇಶವಾಗಿರಲಿಲ್ಲ.

ಭಕ್ತಶ್ರೇಷ್ಠರೂ ಕವಿ ಹೃದಯರೂ ಆದ ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೂ ಹೌದು. ಅವರ ಕೃತಿ ಸಮುದಾಯ ಸಾಹಿತ್ಯವಾಗಿ ಮಾನ್ಯವಾಗಿರುವಂತೆ 'ಪುರಂದರೋಪನಿಷತ್' ಎಂಬ ಪ್ರಶಂಸೆಗೂ ಪಾತ್ರವಾಗಿರುವುದು ಅದರ ಎತ್ತರ ಬಿತ್ತರಗಳಿಗೆ ಸಾಕ್ಷಿ.

ಡಾ. ಎಂ. ಚಿದಾನಂದಮೂರ್ತಿಯವರು 'ಉಗಾಭೋಗಗಳು ಮತ್ತು ವಚನಗಳು' ಎಂಬ ತಮ್ಮ ಪ್ರಬಂಧವೊಂದರಲ್ಲಿ ದಾಸಸಾಹಿತ್ಯದ ಮೇಲೆ ವಚನಸಾಹಿತ್ಯದ ಪ್ರಭಾವವಿರುವುದನ್ನು ಹೇಳುತ್ತ ಉಗಾಭೋಗಗಳ ಬಂಧ ವಚನಗಳ ಬಂಧವನ್ನು ಬಹುಮಟ್ಟಿಗೆ ಹೋಲುತ್ತದೆ ಎನ್ನುವುದನ್ನು ಅನೇಕ ನಿದರ್ಶನಗಳೊಂದಿಗೆ ತೋರಿಸಿಕೊಟ್ಟಿದ್ದಾರೆ. ಹಾಗೆಯೇ ಸಮಾನ ಮನೋಧರ್ಮದವರಾದ ಪುರಂದರರ ಮೇಲೆ ಬಸವಣ್ಣನವರ ಪ್ರಭಾವ ಆಗಿರುವುದನ್ನು ಅವರು ಸವಿವರವಾಗಿಯೇ ಗುರುತಿಸಿದ್ದಾರೆ :

"ಎಲ್ಲ ಹರಿದಾಸರಿಗಿಂತ ಪುರಂದರದಾಸರ ಮೇಲೆ ವಚನ ಸಾಹಿತ್ಯದ ಅದರಲ್ಲೂ ಬಸವಣ್ಣನವರ ವಚನಗಳ ಪ್ರಭಾವವು ಹಿರಿದಾಗಿದೆ. ಮನೋಭಾವವನ್ನು ಗಮನಿಸಿ ಹೇಳುವುದಾದರೆ ಅವರೂ ಬಸವಣ್ಣನವರೂ ಒಂದೇ ಗೊಂಚಲ ಎರಡು ಹೂವುಗಳು. ಭಕ್ತಿವೃಕ್ಷದ ಎರಡು ಪಕ್ವಫಲಗಳು. ವಚನಕಾರರಲ್ಲೆಲ್ಲ ಅತ್ಯುತ್ತಮ ಕವಿ ಹೃದಯದವರೆಂದರೆ ಬಸವಣ್ಣನವರು. ಅದೇ ರೀತಿ ಹರಿದಾಸರಲ್ಲೆಲ್ಲ ಪುರಂದರದಾಸರು. ತೀವ್ರಸಂವೇದನೆಯಲ್ಲಿ, ಉಪಮಾ ಪ್ರತಿಭೆಯಲ್ಲಿ ಹೊಸ ಹೊಸ ಪ್ರತಿಮಾನಿರ್ಮಾಣಶಕ್ತಿಯಲ್ಲಿ ಪ್ರಕೃತಿಯ ಮತ್ತು ಜೀವನದ ಸೂಕ್ಷ್ಮಾವಲೋಕನದಲ್ಲಿ ಇಬ್ಬರಿಗೂ ಸಾಮ್ಯವುಂಟು. ವಚನ ಸಾಹಿತ್ಯದಲ್ಲಿ ಬಸವಣ್ಣನವರಿದ್ದಂತೆ ಹರಿದಾಸ ಸಾಹಿತ್ಯದಲ್ಲಿ ಪುರಂದರ ದಾಸರು. ಆಯಾ ಸಾಹಿತ್ಯದಲ್ಲಿ ಅವರಿಬ್ಬರವು ಅತ್ಯಂತ ಶ್ರೇಷ್ಠ ಕೃತಿಗಳೆಂದು ಪರಿಗಣಿತವಾಗಿವೆ. ಭಕ್ತಿಯ ಮಾತು ಬಂದಾಗ ಇಬ್ಬರೂ ಹೇಗೆ ಹಣ್ಣಿಗಿಂತ ಮೆದುವಾಗುತ್ತಿದ್ದರೋ ಸಮಾಜದ ದೌರ್ಬಲ್ಯಗಳನ್ನು ಕಂಡಾಗ ಅವರ ನಾಲಿಗೆಗಳು ಅಷ್ಟೇ ಹರಿತವಾಗುತ್ತಿದ್ದವು. ಕನ್ನಡ ಭಾಷೆ, ಸಾಹಿತ್ಯಗಳಿಗೆ ಇವರಿಬ್ಬರಿಂದ ಒದಗಿದ ಪುಷ್ಟಿ ಸ್ಮರಣೀಯವಾದುದು.

ಪುರಂದರದಾಸರು ಬಸವಣ್ಣನವರ ವಚನಗಳ ಸೊಗಸಿಗೆ ಮಾರು ಹೋಗಿದ್ದರು. ಅವುಗಳ ಭಾಷೆ ಲಯ ಸೊಗಸುಗಳಲ್ಲಿ ಮಿಂದಿದ್ದರು. ಅವುಗಳ ಧಾಟಿ ಅವರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದಿತು. ಭಾವಗಳಲ್ಲಿ ಅಭಿಪ್ರಾಯಗಳಲ್ಲಿ ಅವರಿಬ್ಬರಿಗೂ ಅನೇಕ ಕಡೆ ಸಾಮ್ಯಗಳಿವೆ........

ಪುರಂದರದಾಸರ ಆಲೋಚನಾ ವಿಧಾನದ ಮೇಲೆ ಅವರ ದೃಷ್ಟಿಯನ್ನು ರೂಪಿಸಿದ ಹಲವು ಶಕ್ತಿಗಳಲ್ಲಿ ಒಂದಾಗಿ ಬಸವಣ್ಣನವರ ಪ್ರಭಾವವೂ ಇರಬಹುದು. ಬಸವಣ್ಣನವರ ವಚನಗಳ ಪ್ರಭಾವವು ಅವರ ಕೀರ್ತನೆಗಳಲ್ಲಿ ಮತ್ತು ಸುಳಾದಿಗಳಲ್ಲಿ ತಕ್ಕಮಟ್ಟಿಗೂ ಉಗಾಭೋಗಗಳಲ್ಲಿ ವಿಶೇಷವಾಗಿಯೂ ಕಾಣಿಸಿಕೊಳ್ಳುತ್ತವೆ''[1]. ವಚನ ಉಗಾಭೋಗಗಳಲ್ಲಿ ಬಂಧ, ಭಾವಗಳೆರಡರಲ್ಲೂ ಹೆಚ್ಚಿನ ಸಾಮ್ಯವನ್ನು ಗುರುತಿಸಬಹುದು. ಆದರೆ ಕೀರ್ತನೆ ಸುಳಾದಿಗಳಲ್ಲಿ ಅಲ್ಲಲ್ಲಿ ಉಕ್ತಿಸಾಮ್ಯ ಗೋಚರಿಸಿದರೂ, ಹೆಚ್ಚಿನೆಡೆಗಳಲ್ಲಿ ಭಾವದಲ್ಲಿ ಹೋಲಿಕೆ ಇದ್ದು ವಚನಗಳಲ್ಲಿ ಅಡಕವಾಗಿ ಹೇಳಿದ್ದನ್ನೇ ಇಲ್ಲಿ ವಿಸ್ತರಿಸಿ ಹೇಳಿರುವ ರೀತಿ ಕಾಣಿಸುತ್ತದೆ. ಇಲ್ಲಿ ನಾವು ವಚನ ಹಾಗೂ ಕೀರ್ತನೆಗಳ ನಡುವಿನ ರೂಪ ವ್ಯತ್ಯಾಸವನ್ನು ಮರೆಯುವಂತಿಲ್ಲ, ಕೀರ್ತನೆಗಳಲ್ಲಿ ಪಲ್ಲವಿ, ಅನುಪಲ್ಲವಿಯಲ್ಲಿ ಒಂದು ತತ್ವವನ್ನು ಹೇಳಿ ಮುಂದಿನ ನುಡಿಗಳಲ್ಲಿ ಆ ಮಾತನ್ನು ಉಪಮೆ ದೃಷ್ಟಾಂತಗಳಿಂದ ಪುಷ್ಟೀಕರಿಸಿದರೆ, ವಚನಗಳಲ್ಲಿ ಹಲವು ಉಪಮೆಗಳಿಂದ ಬೇರೆ ಬೇರೆ ಮಾತುಗಳಿಂದ ಪುಷ್ಟೀಕರಿಸುತ್ತ ಮುಖ್ಯ ತತ್ವಕ್ಕೆ ಕೊನೆಯಲ್ಲಿ ತಲುಪುವ ಕ್ರಮ ಬಹುಮಟ್ಟಿಗೆ ಕಾಣಿಸುತ್ತದೆ. 'ತಾಳ ಮಾನ ಸರಿಸವನಾನರಿಯೆ' ಎನ್ನುವ ಬಸವಣ್ಣನವರ ಮಾತು ಹಾಗೂ ''ತಾಳ ಬೇಕು ತಕ್ಕ ಮೇಳಬೇಕು'' ಎನ್ನುವ ಪುರಂದರರ ಮಾತು – ಇವೂ ಕೂಡ ವಚನ ಹಾಗೂ ಕೀರ್ತನೆಗಳಿಗಿರುವ ವ್ಯತ್ಯಾಸವನ್ನು ತಿಳಿಸುತ್ತವೆ.

ವಚನವೊಂದು ಉಗಾಭೋಗವಾಗಿರುವ ಪರಿಗೆ ಈ ನಿದರ್ಶನವನ್ನು ಗಮನಿಸಬಹುದು –

| | |
|---|---|
| ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ | ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ |
| ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ | ನಿನ್ನ ಸುತ್ತಿಹುದೆಲ್ಲ ಎನ್ನ ಮಾಯವಯ್ಯ |
| ನೀನು ಜಗಕ್ಕೆ ಬಲ್ಲಿದನು ಆನು ನಿನಗೆ ಬಲ್ಲಿದನು ಕಂಡಯ್ಯ | ಜಗವು ನಿನ್ನೊಳಗೆ ನೀನು ಎನ್ನೊಳಗೆ |
| | ಜಗಕ್ಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು |
| ಕರಿಯು ಕನ್ನಡಿಯೊಳಗಡಗಿದಂತಯ್ಯ | ಕರಿಯು ಕನ್ನಡಿಯೊಳಗೆ ಅಡಗಿಪ್ಪ ತೆರನಂತೆ |
| ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ | ನೀನು ಎನ್ನೊಳಗಡಗಿಪ್ಪೆ ಪುರಂದರ ವಿಠಲ |
| – ಬಸವಣ್ಣನವರು | – ಪುರಂದರದಾಸರು |

ಮೂಲಭಾವದಲ್ಲಿ ಹೋಲಿಕೆ ಇದ್ದು, ಅದು ವಚನ ಹಾಗೂ ಕೀರ್ತನೆ

1. ಡಾ. ಎಂ. ಚಿದಾನಂದಮೂರ್ತಿ, ಸಂಶೋಧನತರಂಗ, ಪು. ೩೩

ಗಳಲ್ಲಿ ವ್ಯಕ್ತಪಡಿಸಿದ್ದ ರೀತಿಗೆ, ವಚನ ಹಾಗೂ ಕೀರ್ತನೆಗಳಲ್ಲಿರುವ ವ್ಯತ್ಯಾಸಕ್ಕೂ ಈ ನಿದರ್ಶನವನ್ನು ಗಮನಿಸಬಹುದು –

ಎದೆ ಬಿರಿವನ್ನಕ ಮನ ದಣಿವನ್ನಕ
ನಾಲಗೆ ನಲಿನಲಿದೋಲಾಡುವನ್ನಕ
ನಿಮ್ಮ ನಾಮಾಮೃತವ ತಂದಿರಿಸು ಕಂಡ
ಎಲೆ ಶಿವನೆ......
ಬಿರಿಮುಗುಳಂತೆ ಎನ್ನ ಹೃದಯ
ನಿಮ್ಮ ಶ್ರೀ ಚರಣದ ಮೇಲೆ ಬಿದ್ದರಳುಗೆ
ಕೂಡಲಸಂಗಮದೇವ–ಈ ವಚನವನ್ನು

ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವೆನ್ನ ನಾಲಿಗ್ಗೆ ಬರಲಿ

ಎಂಬ ಕೀರ್ತನೆಯೊಡನೆ ಹೋಲಿಸಿ ನೋಡಿದಾಗ ಪುರಂದರರ ಕೃತಿ ಭಕ್ತನೊಬ್ಬನ ಪ್ರಾರ್ಥನೆ ಮಾತ್ರವಾಗಿ ಕಂಡರೆ ಬಸವಣ್ಣನವರ ಪ್ರಾರ್ಥನೆ ಕಾವ್ಯವೂ ಆಗಿರುವುದು ಕಂಡು ಬರುತ್ತದೆ. ಅಲ್ಲದೆ ವಚನದಲ್ಲಿ ಏಳು ಸಾಲುಗಳಲ್ಲಿ ಶಕ್ತವಾಗಿ ಸಂಕ್ಷಿಪ್ತವಾಗಿ ಬಂದ ಭಾವ, ಕೀರ್ತನೆಯಲ್ಲಿ ಮೂವತ್ತು ಸಾಲುಗಳಲ್ಲಿ ಹರಡಿ ಜಾಳುಜಾಳಾಗಿ ಕಾಣಿಸುತ್ತದೆ. ಬಹುಮಟ್ಟಿಗೆ ವಚನ ಮತ್ತು ಕೀರ್ತನೆಗಳಿಗೆ ಇದು ಒಟ್ಟಾಗಿಯೇ ಹೇಳಬಹುದಾದ ಮಾತು. ಇಂಥ ರಾಚನಿಕ ಹಾಗೂ ಸೈದ್ಧಾಂತಿಕ ವ್ಯತ್ಯಾಸಗಳ ನಡುವೆಯೂ ಅವರಿಬ್ಬರ ಕೃತಿಗಳಲ್ಲಿ ಭಾವ ಹಾಗೂ ಅಭಿವ್ಯಕ್ತಿಗಳಲ್ಲಿರುವ ಸಾಮ್ಯಕ್ಕೆ ನಿದರ್ಶನಗಳು ಹೇರಳವಾಗಿಯೇ ಸಿಕ್ಕುತ್ತವೆ.

ಬಸವಣ್ಣನವರು ತಮ್ಮ ಮನಸ್ಸನ್ನು ಓತಿ, ಕೋತಿ, ನಾಯಿಗಳಿಗೆ ಹೋಲಿಸಿದಂತೆ ಪುರಂದರದಾಸರೂ ತಮ್ಮ ಮನಸ್ಸನ್ನು ಕುನ್ನಿ, ಕೋತಿಗಳಿಗೆ ಹೋಲಿಸಿ ನುಡಿದಿದ್ದಾರೆ. ಬಸವಣ್ಣನವರು 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದಂತೆ ಪುರಂದರರರೂ 'ಬಡವರೊಳಗೆ ಎನ್ನಿಂದಾರು ಬಡವರಿಲ್ಲ ಕೊಡುವರೊಳಗೆ ನಿನ್ನಿಂದಾರು ಕೊಡುವರಿಲ್ಲ' ಎನ್ನುತ್ತಾರೆ. ಪುರಂದರರು ಪಂಚಭಾವಗಳಲ್ಲಿ ಭಗವಂತನನ್ನು ಕಂಡು ಕೀರ್ತಿಸಿರುವಂತೆ ಇವರೂ ದಾಸ್ಯ ಸಖ್ಯ ಮಧುರ ಭಾವಗಳಲ್ಲಿ ವಚನಗಳನ್ನು ರಚಿಸಿರುವುದು ಕಾಣಿಸುತ್ತದೆ.

ಬಸವಣ್ಣನವರು 'ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ' ಎಂದು ಶಿವನನ್ನು ಬೇಡಿಕೊಂಡರೆ, ದಾಸರು ಹರಿಯನ್ನು 'ದಾಸನ ಮಾಡಿಕೊ ಎನ್ನ' ಎಂದು ಪ್ರಾರ್ಥಿಸಿದ್ದಾರೆ. 'ನಿನ್ನ ದಾಸರ ದಾಸ

ನನ್ನಾಗಿಸು' ಎಂಬ ಮಾತುಗಳು ಇಬ್ಬರಲ್ಲಿಯೂ ಬರುತ್ತವೆ. ಬಸವಣ್ಣನವರು ಸಖ್ಯ ಭಾವದಲ್ಲಿ 'ಒಡದಿರೊಡದಿರು ನಿನ್ನ ಬೇಡುವವ ನಾನಲ್ಲ' ಎಂದರೆ, ಪುರಂದರರು 'ನೀನ್ಯಾಕೊ ನಿನ್ನ ಹಂಗ್ಯಾಕೊ ನಿನ್ನ ನಾಮದ ಬಲವೊಂದಿದ್ದರೆ ಸಾಕೊ' ಎಂದಿದ್ದಾರೆ. ಬಸವಣ್ಣನವರು "ಎನ್ನ ಗಂಡ ಬರಬೇಕೆಂದು...... ಬಾಗಿಲತೆರೆದು ಕಂಗಳೇ ಪ್ರಾಣವಾಗಿ ಹಾರುತ್ತಿರ್ದೆನಯ್ಯ" ಎಂದು ಸತಿಯಾಗಿ ಶಿವಪತಿಗಾಗಿ ಹಂಬಲಿಸಿದಂತೆ, ದಾಸರೂ "ಕಾಣದಿರಲಾರೆ ಪ್ರಾಣಕಾಂತನ ವೇಣುನಾಥನ ತೋರಿಸೆ" ಎಂದು ಕೃಷ್ಣನಿಗಾಗಿ ಹಂಬಲಿಸಿದ್ದಾರೆ. ಇಂಥದೇ ಇನ್ನು ಕೆಲವು ನಿದರ್ಶನಗಳನ್ನು ಗಮನಿಸಬಹುದು.

| ಬಸವಣ್ಣನವರು | ಪುರಂದರದಾಸರು |
|---|---|
| 1. ತಂದೆ ನೀನು ತಾಯಿ ನೀನು ಬಂಧು ನೀನು<br>ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯ | 1. ಬಂಧು ಬಳಗ ನೀನೆ ತಂದೆ ತಾಯಿಯು ನೀನೆ ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣ |
| 2. ಎತ್ತೆತ್ತ ನೋಡಿದಡತ್ತತ್ತ ನೀನೆ ದೇವಾ<br>ಸಕಲ ವಿಸ್ತಾರದ ರೂಹು ನೀನೆ ದೇವಾ | 2. ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ<br>ಎಲ್ಲೆಲ್ಲಿ ನೋಡಿದರು ಶ್ರೀರಾಮಚಂದ್ರ |
| 3. ಅರ್ಚಿಸಲರಿಯೆ ಪೂಜಿಸಲರಿಯೆ ನಿಚ್ಚ ನಿಚ್ಚ<br>ಶಿವರಾತ್ರಿಯನೆ ಮಾಡಲರಿಯೆ | 3. ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ನಾಗಶಯನನೆ<br>ನಾರದ ವಂದ್ಯನೆ ದೇವ |

— ಇತ್ಯಾದಿ.

ಸಮಾಜ ವಿಮರ್ಶೆ, ಬೋಧನೆಗಳನ್ನು ಕುರಿತ ಕೃತಿಗಳಲ್ಲೂ ಇಬ್ಬರ ಅಭಿಪ್ರಾಯ, ಅಭಿವ್ಯಕ್ತಿಗಳಲ್ಲಿ ಸಾಮ್ಯವನ್ನು ಗುರುತಿಸಬಹುದು. ಕೆಲವು ನಿದರ್ಶನಗಳು —

| | |
|---|---|
| 1. ಸಾರಸಜ್ಜನರ ಸಂಗವೇ ಲೇಸು ಕಂಡಯ್ಯ<br>ದೂರ ದುರ್ಜನರ ಸಂಗವದು ಭಂಗವಯ್ಯ | 1. ದುಷ್ಟರ ಸಂಗವ ಬಿಡುವದೆ ಸ್ನಾನ<br>ಶಿಷ್ಟರ ಸಹವಾಸ ಮಾಡುವದೆ ಸ್ನಾನ |
| 2. ನುಡಿದರೆ ಮುತ್ತಿನ ಹಾರದಂತಿರಬೇಕು | 2. ಆಚಾರವಿಲ್ಲದ ನಾಲಗೆ ನಿನ್ನ |

ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು
ಮೃದುವಚನವೇ ಸಕಲ ಜಪಂಗಳಯ್ಯ
ಮೃದುವಚನವೇ ಸಕಲ ತಪಂಗಳಯ್ಯ

3. ಹೊಯ್ದವರೆನ್ನ ಹೊರೆದವರೆಂಬೆ
ನಿಂದಿಸಿದರೆನ್ನ ತಂದೆ ತಾಯಿಗಳೆಂಬೆ

ನೀಚ ಬುದ್ಧಿಯ ಬಿಡು ನಾಲಗೆ
ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ
ಚಾಚಿಕೊಂಡಿರುವಂಥ ನಾಲಗೆ

3. ನಿಂದಕರಿರಬೇಕು ಹಂದಿಯಿದ್ದರೆ ಕೇರಿ
ಹ್ಯಾಂಗೆ ಶುದ್ಧವೊ ಹಾಂಗೆ

— ಇತ್ಯಾದಿ.

ಕಾಲದ ದೃಷ್ಟಿಯಿಂದ ಇವರ ನಡುವೆ ನಾಲ್ಕು ಶತಮಾನಗಳ ಅಂತರವಿದ್ದರೂ ಇಬ್ಬರ ಸಾಧನೆಯಲ್ಲಿ, ಭಾವ, ಅಭಿವ್ಯಕ್ತಿಗಳಲ್ಲಿ ಅನೇಕ ಕಡೆ ಸಾಮ್ಯಗಳು ಕಾಣಿಸುತ್ತವೆ. ಇದಕ್ಕೆ ಡಾ. ಎಂ. ಚಿದಾನಂದಮೂರ್ತಿಯವರು ಗುರುತಿಸಿರುವಂತೆ ಕೆಲವು ವಿಚಾರಗಳಲ್ಲಿ ಅವರಲ್ಲಿದ್ದ ಸಮಾನ ಮನೋಧರ್ಮವೂ ಕಾರಣ ಇರಬಹುದು, ಪುರಂದರರು ಬಸವಣ್ಣನವರಿಂದ ಪ್ರಭಾವಿತರಾಗಿರುವುದೂ ಕಾರಣ ಇರಬಹುದು. ಇಬ್ಬರೂ ಎರಡು ವಿಭಿನ್ನ ಧಾರ್ಮಿಕ ನೆಲೆಗಳಲ್ಲಿ ನಿಂತೂ ತಂತಮ್ಮ ದಾರಿಯಲ್ಲಿ ಅತ್ಯುನ್ನತ ಸಾಧನೆ ನಡೆಸಿದ ಭಕ್ತರು, ಕವಿಗಳು, ಸಮಾಜ ಸುಧಾರಕರು. ಈ ಕಾರಣಗಳಿಗಾಗಿಯೇ ಕರ್ನಾಟಕದ ಚರಿತ್ರೆಯಲ್ಲಿ ಅವಿಸ್ಮರಣೀಯರು.

# ಪುರಂದರದಾಸರು – ಅನ್ನಮಾಚಾರ್ಯರು

ಡಾ|| ಅಕ್ಕಮಹಾದೇವಿ

ದಕ್ಷಿಣ ಭಾರತದ ಕೀರ್ತನಕಾರರಲ್ಲಿ ಮೇರುಸದೃಶರಾದ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಸಂಗೀತ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಕೊಡುಗೆ ಅಪೂರ್ವವಾದುದು. ಇವರು ತಮ್ಮ ಅಭಿವ್ಯಕ್ತಿಗಾಗಿ ಆರಿಸಿಕೊಂಡ ಕೀರ್ತನಸಾಹಿತ್ಯ ಜನರೊಡನೆ ನೇರ ಸಂಬಂಧವನ್ನು ಪಡೆಯುವ ಶಕ್ತಿಯುಳ್ಳಂಥದು. ಅದು ಜನರಿಗೆ ಭಕ್ತಿ, ಗಾನ, ಕಾವ್ಯ ಮೂರನ್ನೂ ನೀಡುವಂಥದು. ಕನ್ನಡಕ್ಕೆ ಭಕ್ತಿಸಾಹಿತ್ಯದ ಸುದೀರ್ಘ ಪರಂಪರೆ ಇದ್ದಂತೆಯೇ ತೆಲುಗಿಗೂ ಹಲವು ನೂರು ವರ್ಷಗಳ ಪರಂಪರೆ ಇದೆ. ಭಕ್ತಿ ಸಾಹಿತ್ಯದ ಪ್ರಮುಖ ಮಾಧ್ಯಮವಾಗಿ ಕೀರ್ತನೆ ಬೆಳೆದು ಬಂದಿದೆ.

ಕ್ರಿ.ಶ. ೧೨–೧೩ನೆಯ ಶತಮಾನಕ್ಕೆ ಸೇರಿದ ಕೃಷ್ಣಮಾಚಾರ್ಯರನ್ನು ತೆಲುಗಿನ ಮೊದಲ ವಾಗ್ಗೇಯಕಾರರೆನ್ನಲಾಗಿದೆ. ಇವರಿಗಿಂತ ಮೊದಲೇ ಪದ ರಚನೆ ನಡೆಯುತ್ತಿತ್ತೆಂಬುದಕ್ಕೆ ಗ್ರಂಥಸ್ಥ ಆಧಾರಗಳಿದ್ದರೂ ವಿಸ್ತೃತವಾಗಿ ಸಂಕೀರ್ತನ ಸಾಹಿತ್ಯ ಸೃಷ್ಟಿಮಾಡಿದವರಲ್ಲಿ ಇವರನ್ನೇ ಮೊದಲು ಹೇಳಬೇಕು. ಏಗಂಟಿ ಲಕ್ಷ್ಮಯ್ಯನವರ (೧೫ನೆಯ ಶತಮಾನ) ಕೀರ್ತನೆಗಳು ಶಿವನನ್ನು ಕುರಿತಾದವು. ಇವರನ್ನು ಅನ್ನಮಾಚಾರ್ಯರ ಸಮಕಾಲೀನರೆನ್ನಲಾಗಿದೆ.

ಅನ್ನಮಾಚಾರ್ಯರದು ಕವಿ ಕುಟುಂಬ. ಅವರ ಮಗ ಪೆದತಿರುಮಲಾಚಾರ್ಯ ಮತ್ತು ಮೊಮ್ಮಗ ಚಿನತಿರುಮಲಾಚಾರ್ಯ ಅನೇಕ ಶೃಂಗಾರ, ಅಧ್ಯಾತ್ಮ ಸಂಕೀರ್ತನೆಗಳನ್ನು ರಚಿಸಿದ್ದಾರೆ. ಕಂಚರ್ಲಗೋಪನ್ನ ಅಥವಾ ಭದ್ರಾಚಲರಾಮದಾಸ (೧೬೨೦–೮೦) ಭಜನ ಕೀರ್ತನೆಗಳಿಗೆ ನೀಡಿದ ಕೊಡುಗೆ ಗಣನೀಯ. ಕ್ಷೇತ್ರಯ್ಯ (೧೭ನೆಯ ಶತಮಾನ) ನವರ ಕಾಲದಲ್ಲಿ ತೆಲುಗಿನ ಶೃಂಗಾರ ಕೀರ್ತನೆಗಳಿಗೆ 'ಪದ' ಎಂಬ ಹೆಸರು ಪಾರಿಭಾಷಿಕ ಶಬ್ದವಾಯಿತು. ಅನ್ನಮಾಚಾರ್ಯರ ಮತ್ತು ಪುರಂದರದಾಸರ ಪರಂಪರೆಯನ್ನೇ ಕ್ಷೇತ್ರಯ್ಯ ಮುಂದುವರಿಸಿದರೆಂದು ತಿಳಿಯುತ್ತದೆ. ಮುನಿಪಲ್ಲೆ ಸುಬ್ರಹ್ಮಣ್ಯ ಕವಿಯ (೧೭೩೦–೮೧) ಅಧ್ಯಾತ್ಮರಾಮಾಯಣ ಸಂಕೀರ್ತನೆಗಳಿಗೆ ಆಂಧ್ರದಲ್ಲಿ ತುಂಬ ಪ್ರಚಾರವಿದೆ. ೧೬೦೦–೧೮೫೦ರ ಅವಧಿಯನ್ನು ಯಕ್ಷಗಾನ ಮತ್ತು ಕೀರ್ತನಕಾರರ ಸ್ವರ್ಣಯುಗವೆಂದು ಹೇಳಲಾಗಿದೆ. ಈ ಕಾಲದಲ್ಲಿ ಆಂಧ್ರಸಾಹಿತ್ಯ ದಕ್ಷಿಣ ದೇಶದಲ್ಲಿ ಬೆಳೆಯಿತು. ತಂಜಾವೂರು, ಮಧುರೈ, ಚೆಂಜಿ, ಮೈಸೂರು ಕ್ಷೇತ್ರಗಳು ತೆಲುಗು ಸಾಹಿತ್ಯ ರಚನೆಗೆ ಕೇಂದ್ರಗಳಾ

ದುವು. ರಘುನಾಥನಾಯಕನೆಂಬ ರಾಜನ ಕಾಲದಲ್ಲೇ ಗೋವಿಂದದೀಕ್ಷಿತ 'ಸಂಗೀತಸುಧಾ' ಎಂಬ ಲಕ್ಷಣ ಗ್ರಂಥವನ್ನು ರಚಿಸಿದ. ಇದೇ ಅವಧಿಯಲ್ಲಿ ಹೊರಬಂದ ನೂರಾರು ಯಕ್ಷಗಾನಗಳಲ್ಲಿ ಅಸಂಖ್ಯಾತ ಕೀರ್ತನೆಗಳಿವೆ. ತಂಜಾವೂರನ್ನು ಆಳಿದ ಶಾಹಭೂಪಾಲ (೧೬೮೪–೧೭೧೨) ಸ್ವತಃ ತೆಲುಗಿನಲ್ಲಿ ಕೃತಿ ರಚಿಸಿದ್ದು ಮಾತ್ರವಲ್ಲದೆ ಗಿರಿರಾಜ ಕವಿಯಂಥ ಉತ್ತಮ ವಾಗ್ಗೇಯಕಾರರಿಗೆ ಪ್ರೋತ್ಸಾಹ ನೀಡಿದ. ಸಾರಂಗಪಾಣಿ (೧೬೮೦–೧೭೧೦) ಶೃಂಗಾರ ಪದಗಳನ್ನು ಬರೆದು ಖ್ಯಾತರಾಗಿದ್ದಾರೆ. ೧೭೫೦–೧೮೫೦ರ ನಡುವಿನ ಅವಧಿ ಸಂಗೀತದ ಮಟ್ಟಿಗೆ ತುಂಬ ಮುಖ್ಯವಾದ ಕಾಲ. ಶ್ಯಾಮಾಶಾಸ್ತ್ರಿ (೧೭೬೨–೧೮೨೭), ತ್ಯಾಗರಾಜ (೧೭೬೭–೧೮೪೭) ಮತ್ತು ಮುತ್ತುಸ್ವಾಮಿದೀಕ್ಷಿತ (೧೭೭೬–೧೮೩೫) ಎಂಬ ಸಂಗೀತಗಾರತ್ರಯರು ಈ ಅವಧಿಯಲ್ಲೇ ಬಾಳಿದ್ದು.

ಅನ್ನಮಾಚಾರ್ಯರ ಕೀರ್ತನೆ, ರಾಮದಾಸರ ಭಜನಕೀರ್ತನೆ, ಕ್ಷೇತ್ರಯ್ಯನ ಪದ ಎಂಬ ಮಾರ್ಗದಲ್ಲಿ ವಿಕಾಸಗೊಂಡ ತೆಲುಗು ಸಂಗೀತ ತ್ಯಾಗರಾಜರ 'ಕೃತಿ'ಗಳಲ್ಲಿ ಸಿದ್ಧಿಯನ್ನು ಪಡೆಯಿತು. ತ್ಯಾಗರಾಜರು ೭೨ ಮೇಳಕರ್ತರಾಗಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಇವರ ರಾಗಸಂಯೋಜನೆ ಕರ್ಣಾಟಕಸಂಗೀತಕ್ಕೆ ಅಮೂಲ್ಯ ಕಾಣಿಕೆ.

ತ್ಯಾಗರಾಜರ ಪ್ರಶಿಷ್ಯರಾದ ಪಟ್ನಂ ಸುಬ್ರಹ್ಮಣ್ಯಯ್ಯರ್ ಅನೇಕ ತೆಲುಗು ಕೀರ್ತನೆಗಳನ್ನು ಬರೆದಿದ್ದಾರೆ. ಸುಬ್ಬರಾಮದೀಕ್ಷಿತರು ತೆಲುಗು, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಷ್ಟೇ ಅಲ್ಲದೆ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಲಕ್ಷಣ ಗ್ರಂಥವನ್ನು ಬರೆದಿದ್ದಾರೆ. ಸ್ವಾತಿತಿರುನಾಳ್, ಮುತ್ತಯ್ಯಭಾಗವತರ್, ಮೈಸೂರು ವಾಸುದೇವಾಚಾರ್ಯ ಮುಂತಾದವರನ್ನು ತೆಲುಗು ಕೀರ್ತನಕಾರರ ಸಾಲಿನಲ್ಲಿ ಹೆಸರಿಸಬಹುದು. ಈ ಕೀರ್ತನಕಾರರ ಪೈಕಿ ಕಾಲದ ಮತ್ತು ರಚನಾ ವೈವಿಧ್ಯದ ದೃಷ್ಟಿಯಿಂದ ಅನ್ನಮಯ್ಯ (ಅನ್ನಮಾಚಾರ್ಯರು) ಪ್ರಮುಖರು.

ಅನ್ನಮಾಚಾರ್ಯರು ಕ್ರಿ.ಶ. ೧೫ನೆಯ ಶತಮಾನದ ಪ್ರಾರಂಭದಲ್ಲಿ ಹುಟ್ಟಿ ಆ ಶತಮಾನದ ಅಂತ್ಯದ ತನಕ ಬಾಳಿದವರು. ಕಡಪ ಜಿಲ್ಲೆಯ ರಾಜಂಪೇಟ ತಾಲ್ಲೂಕಿನ ತಾಳ್ಳಪಾಕ ಎಂಬ ಗ್ರಾಮ ಇವರ ಹುಟ್ಟೂರು. ತಾಯಿ ಲಕ್ಕಮಾಂಬೆ, ತಂದೆ ನಾರಾಯಣಸೂರಿ. ಅನ್ನಮಾಚಾರ್ಯರು ಹಸುಗೂಸಾಗಿದ್ದಾಗಲೇ ಹರಿಭಕ್ತಿಯುಳ್ಳವರಾಗಿದ್ದರೆಂದು ತಿಳಿದುಬರುತ್ತದೆ. ಮುಂದೆ ಶಠಕೋಪಮುನಿಯ ಬಳಿ ವೇದಾಂತಶಾಸ್ತ್ರಾಧ್ಯಯನ ಮಾಡಿದರು.

ದಿನಕ್ಕೊಂದರಂತೆ ಸುಮಾರು ೩೨,೦೦೦ ಕೀರ್ತನೆಗಳನ್ನು ರಚಿಸಿರುವರೆಂದು ತಿಳಿದುಬರುತ್ತದೆ. ಇವುಗಳಲ್ಲಿ ಶೃಂಗಾರ ಮತ್ತು ಆಧ್ಯಾತ್ಮ ಸಂಕೀರ್ತನೆಗಳಿವೆ. ಶೃಂಗಾರವನ್ನೂ ಆಧ್ಯಾತ್ಮಿಕದ ಮಟ್ಟಕ್ಕೇರಿಸಿ ಇವೆರಡು ವಿಭಿನ್ನ ತತ್ವಗಳಿಗೆ ಸಮನ್ವಯವನ್ನು ಸಾಧಿಸಿದ ಅಪೂರ್ವ ವ್ಯಕ್ತಿ ಇವರು. ಇವರು ಸಂಕೀರ್ತನೆಗಳನ್ನೇ ಅಲ್ಲದೆ ಶೃಂಗಾರ ಮಂಜರಿ, ಸಂಕೀರ್ತನ ಲಕ್ಷಣ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ಇಬ್ಬರಲ್ಲಿಯೂ ಅನೇಕ ಸಾದೃಶ್ಯಗಳನ್ನು ಕಾಣಬಹುದು : ಇಬ್ಬರೂ ದಕ್ಷಿಣಭಾರತದವರು, ವಿಜಯನಗರ ರಾಜ್ಯಕ್ಕೆ ಸೇರಿದವರು, ಕರ್ನಾಟಕ ಸಂಗೀತದ ಆರಂಭ ಕಾಲದಲ್ಲಿ ಅದಕ್ಕೆ ಮಹತ್ವದ ಕೊಡುಗೆ ನೀಡಿದವರು, ಮಾರ್ಗ ಮತ್ತು ದೇಸಿ ಎರಡು ಪದ್ಧತಿಗಳನ್ನೂ ಸಮದೃಷ್ಟಿಯಿಂದ ನೋಡಿದವರು. ಇವೆಲ್ಲಕ್ಕಿಂತ ಮಿಗಿಲಾಗಿ ವಿಷ್ಣುಭಕ್ತರು.

ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳನ್ನು ಪರಿಶೀಲಿಸಿದಾಗ ಕೆಲವು ವಿಭೇದಗಳು ಕೂಡ ಕಂಡು ಬರುತ್ತವೆ. ಪುರಂದರದಾಸರು ಮಧ್ವದರ್ಶನವನ್ನೇ ನಂಬಿ ಅದನ್ನು ಹಾಡುಗಳ ಮೂಲಕ ಪ್ರಚಾರ ಮಾಡಿದವರು. ಅನ್ನಮಾಚಾರ್ಯರು ವಿಶಿಷ್ಟಾದ್ವೈತವನ್ನೇ ನಂಬಿ ಆತ್ಮ ಸಂತೋಷಕ್ಕಾಗಿ ಹಾಡುಗಳನ್ನು ರಚಿಸಿದವರು. ದಾಸರ ಇಷ್ಟದೈವ ವಿಠಲನಾದರೆ ಆಚಾರ್ಯರ ಇಷ್ಟದೈವ ವೆಂಕಟೇಶ್ವರ. ಇಬ್ಬರ ಜೀವನದಲ್ಲೂ ಸಾಕಷ್ಟು ವ್ಯತ್ಯಾಸವಿದೆ. ಹೀಗೆ ಸಾದೃಶ್ಯ ವೈದೃಶ್ಯಗಳನ್ನು ವಿವೇಚಿಸಿದಾಗ ಅನೇಕ ವಿಷಯಗಳ ಪರಿಚಯವಾಗುತ್ತದೆ.

ಪುರಂದರದಾಸರ ಕೀರ್ತನೆಗಳಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಮೂರು ಭಾಗಗಳಿರುತ್ತವೆ. ಅನ್ನಮಾಚಾರ್ಯರಲ್ಲಿ ಪಲ್ಲವಿ ಮತ್ತು ಚರಣ – ಇವೇ ಮುಖ್ಯ ಭಾಗಗಳು. ಕೀರ್ತನೆಯ ಪರಮಾರ್ಥ ಪಲ್ಲವಿಯಲ್ಲಿ ಸಂಕ್ಷಿಪ್ತವಾಗಿರುತ್ತದೆ. ಈ ಅರ್ಥ ಅನಂತರದ ಚರಣಗಳಲ್ಲಿ ವಿಸ್ತೃತರೂಪವನ್ನು ಪಡೆಯುತ್ತದೆ. ಒಂದು ವೇಳೆ ಕೀರ್ತನೆಯ ತಿರುಳು ಒಂದೇ ವಾಕ್ಯದಲ್ಲಿ ಮುಗಿಯದಿದ್ದರೆ ಅದು ಅನುಪಲ್ಲವಿಯಾಗಿ ಪರಿಣಮಿಸುವುದುಂಟು. ಅನುಪಲ್ಲವಿ ಎಲ್ಲೋ ಕೆಲವೆಡೆ ಮಾತ್ರ ಕಂಡುಬರುತ್ತದೆ.

ದಾಸರು ತಮ್ಮ ಹಿಂದಿನ ಕೀರ್ತನಕಾರರಿಂದ ಸ್ಫೂರ್ತಿ ಪಡೆದವರು. ವಚನಕಾರರು, ಆದ್ಯರೆಂಬ ಹೆಸರಿನ ಕೀರ್ತನಕಾರರು, ಶ್ರೀ ಪಾದರಾಜರು ಮತ್ತು ವ್ಯಾಸರಾಯರು ಪುರಂದರದಾಸರಿಗೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರೇರಕಶಕ್ತಿಗಳಾದರು. ಇವರ ಮೇಲೆ ಅನ್ನಮಾಚಾರ್ಯರ

ಪ್ರಭಾವವೂ ಇತ್ತೆಂಬುದರಲ್ಲಿ ಸಂದೇಹವಿಲ್ಲ. ದಾಸರು ಚಿಕ್ಕವಯಸ್ಸಿನಲ್ಲಿ ಅನ್ನಮಾಚಾರ್ಯರನ್ನು ಸಂದರ್ಶಿಸಿದ್ದ ವಿಚಾರ ಚಿನ್ನನ್ನನಿಂದ ತಿಳಿದುಬರುತ್ತದೆ.

ಪುರಂದರದಾಸರಿಗಿದ್ದಂತೆ ಅನ್ನಮಾಚಾರ್ಯರಿಗೆ ಕೀರ್ತನೆಗಳ ಭವ್ಯ ಪರಂಪರೆ ಇರಲಿಲ್ಲ. ಕ್ರಿ. ಶ. ಸು. ೧೦-೧೧ ನೆಯ ಶತಮಾನಗಳಿಂದಲೂ ತೆಲುಗಿನಲ್ಲಿ ಪದಸಾಹಿತ್ಯ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆಯಾದರೂ ಭವ್ಯಪರಂಪರೆಯ ಭಾವನಿಷ್ಠಕವಿಗಳು ಬಹುಸಂಖ್ಯೆಯಲ್ಲಿ ಇರಲಿಲ್ಲ. ಕೃಷ್ಣಮಾಚಾರ್ಯರ ರಚನೆಗಳನ್ನು ಆಚಾರ್ಯರು ನೋಡಿರಬಹುದಾದರೂ ಆಚಾರ್ಯರ ಕೀರ್ತನ ಸೃಷ್ಟಿ ಬಲುಮಟ್ಟಿಗೆ ಸ್ವಪ್ರತಿಭೆಯಿಂದ ಮೂಡಿ ಬಂದುದು. ಇವರು ಸಾವಿರಾರು ಕೀರ್ತನೆಗಳನ್ನು ಬರೆದರೆಂಬುದು ಕೇವಲ ಹೇಳಿಕೆಯ ಮಾತಾಗಿರದೆ ಇಂದು ಸಿಕ್ಕಿರುವವೇ ಹನ್ನೆರಡು ಸಾವಿರಕ್ಕೂ ಹೆಚ್ಚಾಗಿವೆ. 'ಪದಕವಿತಾಪಿತಾಮಹ' ಎಂಬ ಇವರ ಬಿರುದು ಆಂಧ್ರದ ಮಟ್ಟಿಗಾದರೂ ಸತ್ಯವೆಂದೇ ಹೇಳಬೇಕು. ಇವರಷ್ಟು ವಿಸ್ತೃತವಾಗಿ, ವೈವಿಧ್ಯಮಯವಾಗಿ, ಶಾಸ್ತ್ರೀಯವಾಗಿ ತೆಲುಗಿನಲ್ಲಿ ಸಾವಿರಾರು ಕೀರ್ತನೆಗಳನ್ನು ರಚಿಸಿದವರು ಯಾರೂ ಇಲ್ಲ.

ಅನ್ನಮಾಚಾರ್ಯರ ಸಂಕೀರ್ತನೆಗಳು ಸಾವಿರಾರು ಸಂಖ್ಯೆಯಲ್ಲಿ ಸಿಕ್ಕುತ್ತಿದ್ದರೂ ಆ ಕಾಲದಲ್ಲಿ ಅವನ್ನು ಹೇಗೆ ಹಾಡುತ್ತಿದ್ದರು ಎಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆ ಕಾಲದಲ್ಲಿ ಕರ್ನಾಟಕ ಸಂಗೀತ ಅಷ್ಟೇನೂ ವಿಕಾಸ ಹೊಂದಿರಲಿಲ್ಲ. ಆಗ ಹೆಚ್ಚಿನ ರಾಗಗಳೂ ಪ್ರಚಾರದಲ್ಲಿರಲಿಲ್ಲ. ಆಚಾರ್ಯರಿಗೆ ಶಿಷ್ಯ ಪರಂಪರೆಯೂ ಇರಲಿಲ್ಲ. ಆದುದರಿಂದ ಆಚಾರ್ಯರ ಸಾಹಿತ್ಯದ ಗಾನಪದ್ಧತಿ ತಿಳಿಯದಾಗಿದೆ.

ಪುರಂದರದಾಸರು ಮತ್ತು ಅನ್ನಮಾಚಾರ್ಯರು ಧಾತುಮಾತುಗಳಿಗೆ ಸಮಾನ ಪ್ರಾಧಾನ್ಯ ನೀಡಿದ್ದಾರೆ. ಇವರು ವಾಗ್ಗೇಯಕಾರರಾದುದರಿಂದ ಇವರ ಸಾಹಿತ್ಯ ಲಿಖಿತಸಾಹಿತ್ಯಕ್ಕಿಂತ ಬೇರೆಯಾದರೂ ಉನ್ನತಮಟ್ಟದ ಸಾಹಿತ್ಯ ರಚನೆಗಳೇ ಆಗಿವೆ. ಇವರು ಆಶುವಾಗಿ ಬರೆದರೂ ಭಾರತೀಯ ಸಂಪ್ರದಾಯದ ಶ್ರುತಿ, ಸ್ಮೃತಿ, ಪುರಾಣೇತಿಹಾಸ ಕಾವ್ಯದ ಪರಂಪರೆ ಇವರ ಸಾಹಿತ್ಯದ ಬೆನ್ನೆಲುಬಾಗಿದೆ.

''ದ್ವಾಸುಪರ್ಣಾ ಸಯುಜಾಸಖಾಯ......'' ಎಂಬ ಉಪನಿಷತ್ತಿನ ಶ್ಲೋಕವನ್ನು ಇವರಿಬ್ಬರೂ ಬಳಸಿಕೊಂಡಿದ್ದಾರೆ. ಅನ್ನಮಯ್ಯ

''ನಿಂಡಿನ ಯೀ ಜೀವುಲ ನೀವೇಯುನ ವೆರತುನು
ದಂಡನ ಒದ್ದುಲು 'ದ್ವಾಸುಪರ್ಣ'ವುನ್ನದಿಗಾನ''

ಎಂದಿದ್ದರೆ ಪುರಂದರದಾಸರು "ಎರಡೂ ಒಂದಾಗದು ರಂಗ ಎರಡೂ ಒಂದಾಗದು ಎಂದೆಂದಿಗು" ಎಂಬ ಕೀರ್ತನೆಯಲ್ಲಿ ಹೇಳಿದ್ದಾರೆ.

ಅಕ್ಕಡ ವೇದಶ್ರುತಿ "ಯತ್ಕತಿಷ್ಠದ್ದಶಾಂಗುಲ"
ಮೆಕ್ಕುವಯಾನಿ ಪೊಗಡನಿಡಿವೋ ನೀರೂಪಮು

ಎಂದು ವೇದಶ್ರುತಿಯನ್ನು ಅನ್ನಮಯ್ಯ ಬಳಸಿಕೊಂಡಿದ್ದರೆ,

ಸಂದೇಹಾತ್ಮ ವಿನಶ್ಯತಿಯೆಂದ ಶ್ರುತಿವೃಂದಗಳೆಲ್ಲವು
ಮಿಥಿಲೇಶ "ಮಮಕಿಂಚಿನ್ನ ದಹ್ಯತೇ"

ಎಂಬಂತೆ ಇರಬೇಕು ಎಂದಿದ್ದಾರೆ ದಾಸರು.

ಇವರಿಬ್ಬರ ಕೀರ್ತನೆಗಳಲ್ಲಿ ರಾಮಾಯಣ, ಮಹಾಭಾರತ ಮತ್ತು ಭಾಗವತಗಳಿಂದ ಆಯ್ದ ಅನೇಕ ಪ್ರಸಂಗಗಳು ದೊರೆಯುತ್ತವೆ. ಅನ್ನಮಾ–ಚಾರ್ಯರು ಹನುಮಂತನನ್ನು ಸ್ತುತಿಸುವ ಸಂದರ್ಭದಲ್ಲಿ ಆತನ ಶೌರ್ಯ ಪರಾಕ್ರಮಗಳಿಗೆ ರಾಮಾಯಣ,ಮಹಾಭಾರತದ ಪ್ರಸಂಗಗಳನ್ನು ಹೇಳಿದ್ದಾರೆ:

ಜಲಧಿಬಂಧಿಂಚಿದಾಟೆಚಲಪಟ್ಟಿ ರಾಘವುಡು
ಅಲರಿವೂರಕೇದಾಟೆ ಹನುಮಂತುಡು
ಅಲುಕತೋ ರಾವಣುನಿಯದಟಣಚಿನತಡು
ತಲಚಿಮೈರಾವಣುನಿ ದಂಡಿಂಚಿನಿತಡು[1]

ಎಂದು ಹನುಮ ಜಲಧಿ ದಾಟಿದ್ದನ್ನು ಹೇಳಿದ್ದಾರೆ.

ತೇರಿಮೀದ ನೀರೂಪುದೆಚ್ಚಿ ಪೆಟ್ಟಿಯರ್ಜುನಡು
ಕೌರವುಲಗೆಲಿಚೆ ಸಂಗರಭೂಮಿನಿ
ಸಾರೆಕು ಭೀಮುಡು ಪುರುಷಾಮೃಗಮುದೆಚ್ಚಿಚೋಟ
ನೀರೋಮಮುಲುಗಾವಾ ನಿಖಿಲ ಕಾರಣಮು[2]

---

1 ಜಲಧಿಯು ಬಂಧಿಸಿ ದಾಟಿದ ಚಲಹಿಡಿದು ರಾಘವ
ಮರೆದು ಸುಮ್ಮನೆ ದಾಟಿದ ಹನುಮಂತನು
ಕೋಪದಿಂ ರಾವಣನ ಗರ್ವಭಂಗ ಮಾಡಿದನಾತ
ನೆನೆದು ಮೈರಾವಣನ ಶಿಕ್ಷಿಸಿದನೀತ

2 ತೇರಿನ ಮೇಲೆ ನಿನ್ನ ರೂಪವ ತಂದಿಟ್ಟು ಅರ್ಜುನ
ಕೌರವರ ಗೆದ್ದ ಸಂಗರಭೂಮಿಯಲಿ
ಭೀಮ ಪುರುಷಾಮೃಗವ ತರುವಾಗ
ನಿನ್ನ ರೋಮಗಳಲ್ಲವೆ ನಿಖಿಲಕಾರಣ

ಇಲ್ಲಿ ಮಹಾಭಾರತದಲ್ಲಿ ಬರುವ ಪುರುಷಾಮೃಗದ ಸಂದರ್ಭವನ್ನು ಹೇಳಿದ್ದಾರೆ.

ಭಾಗವತದಲ್ಲಿ ಗೋವರ್ಧನಗಿರಿಯನೆತ್ತಿದ ಕೃಷ್ಣನ ಲೀಲೆಯನ್ನು ಅನ್ನಮಯ್ಯ ವರ್ಣಿಸಿ

ಏಲ ಮೋಸಪೋಯಿರೋ ಅಕಾಲಪುವಾರು
ಬಾಲ ಕೃಷ್ಣುನಿ ಬಂಟುಲೈ ಬ್ರತುಕವದ್ದಾ
ಪಶುಲಗಾಚೇಟಿವಾನಿ ಬ್ರಹ್ಮನುತಿಂಚಿನಂಟೇನು
ದಿಶಲ ದೇವುಡನಿ ತೆಲಯವದ್ದಾ
ಶಿಶುವು ಗೋವರ್ಧನಗಿರಿ ಚೇತಬಟ್ಟಿಯೆತ್ತೆನಂಟೆ
ಕೊಸರಿಯಾತನಿ ಪಾದಾಲೇ ಕೊಲುವವದ್ದಾ[1]

ಎಂದು ಕೃಷ್ಣನ ಆಧಿಕ್ಯವನ್ನು ಎತ್ತಿ ಹೇಳಿದ್ದಾರೆ.

ಪುರಂದರದಾಸರು ವಿಧಿನಿಯಮವೇ ಅತ್ಯಂತ ಪ್ರಬಲವಾದುದು. ಆದರ ಮುಂದೆ ಬೇರೇನೂ ನಡೆಯದು ಎಂದು ಹೇಳುವಲ್ಲಿ ರಾಮಾಯಣದ ಸೀತಾಪಹರಣ ಪ್ರಸಂಗವನ್ನು ಹೇಳಿದ್ದಾರೆ.

ನೃಪರೊಳಗೆ ಅತಿಶ್ರೇಷ್ಠ ಬಲವಂತ ರಘುರಾಮ
ಅಪರಿಮಿತಶೂರ ಲಕ್ಷ್ಮಣದೇವರು
ಚಪಲಾಕ್ಷಿ ಸೀತೆಯನ್ನು ಖಳನು ಕದ್ದೊಯ್ವಾಗ
ವಿಪರೀತ ವೀರರಿದ್ದೇನ ಮಾಡಿದರು

'ಎಂಥ ಬಲವಂತನೋ ಕುಂತಿಯ ಸಂಜಾತನೋ' ಎಂದು ಭೀಮನ ಪರಾಕ್ರಮವನ್ನು ಹೊಗಳುತ್ತಾ 'ಕುಂತಿಯ ಕಂದನೋ ಸೌಗಂಧಿಕವತಂದನೋ' ಎಂದು ಅವನು ಸೌಗಂಧಿಕ ಪುಷ್ಪವನ್ನು ತಂದ ವಿಚಾರವನ್ನು ಹೇಳಿದ್ದಾರೆ.

ಆಡಿದನೊ ರಂಗ ಅದ್ಭುತದಿಂದಲಿ
ಕಾಳಿಂಗನ ಫಣೆಯಲಿ......

---

[1] ಏಕೆ ಮೋಸ ಹೋದರೊ ಕಾಣೆ ಆ ಕಾಲದವರು
ಬಾಲಕೃಷ್ಣನ ಸೇವಕರಾಗಿ ಬಾಳಬೇಕಲ್ಲವೇ
ದನಕಾಯುವವನ ಬ್ರಹ್ಮ ನುತಿಸಿದನೆಂದರೆ
ದಿಶೆಯ ದೇವರೆಂದು ತಿಳಿಯಬೇಡವೆ
ಶಿಶು ಗೋವರ್ಧನಗಿರಿಯ ಕೈಲಿ ಎತ್ತಿದನೆಂದರೆ
ಮತ್ತೆ ಮತ್ತೆ ಆತನ ಪಾದ ಸೇವಿಸಬೇಡವೆ

ಗೋವರ್ಧನಗಿರಿಯನೆತ್ತಿ ದೇವೇಂದ್ರ ಮಳೆಗರೆಯೆ
ಆ ಗಿರಿಯ ಕೃಷ್ಣ ಕೊಡೆಮಾಡಿ ನೆಗಹಿದ
ಗೋವಿಂದ ನಮ್ಮ ಮನೆದೈವ

ಎಂದು ಕೃಷ್ಣ ಗೋವರ್ಧನಗಿರಿಯನ್ನೆತ್ತಿದ ಪ್ರಸಂಗವನ್ನು ದಾಸರು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

ಆಚಾರ್ಯರು ಮತ್ತು ದಾಸರು ಮೂಢಾಚಾರಗಳನ್ನು ನಂಬದೆ ಶುದ್ಧವಾದ ಸಾತ್ವಿಕಭಕ್ತಿಯಲ್ಲೇ ನಂಬಿಕೆಯಿಟ್ಟಿದ್ದಂಥವರು. ಶುಭ್ರತೆಯ ದೃಷ್ಟಿಯಿಂದ ಏರ್ಪಟ್ಟ ಮಡಿ, ಮೈಲಿಗೆ ಮುಂತಾದುವನ್ನು ಮೂಲಭೂತವಾಗಿ ಅರ್ಥಮಾಡಿಕೊಳ್ಳಬೇಕೆಂಬುದು ಇವರಿಬ್ಬರ ಅಭಿಪ್ರಾಯ. 'ಬಟ್ಟೆಯ ನೀರೊಳಗಿಟ್ಟು ಒಣಗಿಸಿ ಉಟ್ಟರೆ ಅದು ತಾ ಮಡಿಯಲ್ಲ, ಹೊಟ್ಟೆಯೊಳಗಣ ಕಾಮ ಕ್ರೋಧಗಳ ಬಿಟ್ಟರೆ ಅದು ತಾ ಮಡಿಯೊ'. ಎಂಬುದು ಪುರಂದರ ದಾಸರ ಅಭಿಪ್ರಾಯ. 'ಜನ್ಮಸೂತಕ ಆಚರಿಸಿದ ಮಾತ್ರಕ್ಕೆ ಪ್ರಯೋಜನವೇನೂ ಇಲ್ಲ' ಎಂಬುದು ಆಚಾರ್ಯರ ಅಭಿಪ್ರಾಯ. ಇವರಿಬ್ಬರಲ್ಲೂ ಇಂಥ ಪ್ರಗತಿಶೀಲ ಅಭಿಪ್ರಾಯಗಳಿದ್ದರೂ ಮತಾಚಾರಗಳ ಚೌಕಟ್ಟಿನಲ್ಲೇ ಕಾರ್ಯಶೀಲರಾದುದರಿಂದ ಇವರು ಕೆಲವು ಮತಾಚಾರಗಳಿಗೆ ಕಟ್ಟುಬಿದ್ದಿದ್ದಾರೆ.

ಪುರಂದರದಾಸರು 'ಮತದೊಳಗೆ ಒಳ್ಳೆ ಮತ ಮಧ್ವಮತವು' ಎಂದು ಹೇಳಿ 'ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ, ಹರಿಸರ್ವೋತ್ತಮನಹುದೆಂಬ ಜ್ಞಾನವ ತಾರತಮ್ಯದಲಿ ತಿಳಿವ ಮಾರ್ಗವಿದು'ಎಂದು ಮಧ್ವದರ್ಶನದ ತಿರುಳನ್ನು ಸಂಗ್ರಹಿಸಿ ಹೇಳಿದ್ದಾರೆ. ಇವರ ಮಧ್ವದರ್ಶನ ಕೇವಲ ಆಧ್ಯಾತ್ಮಿಕ ಮನೋಭಾವದಿಂದ ಮಾತ್ರ ಮೂಡಿಬಂದದ್ದಲ್ಲ. ವೇದೋಪನಿಷತ್ತುಗಳ ಸಾರವನ್ನು ಅರಗಿಸಿಕೊಂಡು, ವಿಚಾರಮಂಥನ ಮಾಡಿ ಆಧ್ಯಾತ್ಮಿಕ ಅಭಿವ್ಯಕ್ತಿಗೆ ನೀತಿಯನ್ನೂ ಸೇರಿಸಿಕೊಂಡಂಥದು. ಪುರಂದರದಾಸರ ಧಾರ್ಮಿಕ ಹಿನ್ನೆಲೆ ವಿಸ್ತಾರವಾದುದು. ದಾಸಕೂಟ ಮತ್ತು ವ್ಯಾಸಕೂಟಕ್ಕೆ ಸೇರಿದ ನೂರಾರು ಭಕ್ತರು, ವಿದ್ವಾಂಸರು, ಕೀರ್ತನಕಾರರು ತಾತ್ತ್ವಿಕನಿಷ್ಠೆಯಿಂದ ಬೆಳೆಸಿದ ಜನಪ್ರಿಯ ಪಂಥದ ನೇತಾರರಾಗಿ ಪುರಂದರದಾಸರು ಪ್ರಾಧಾನ್ಯ ಪಡೆದಿದ್ದಾರೆ.

ಅನ್ನಮಾಚಾರ್ಯರು ತಮ್ಮದೇ ಆದ ಮಾರ್ಗದಲ್ಲಿ ಭಕ್ತಿಯ ಸಾಧನೆಯಲ್ಲಿ ತೊಡಗಿದವರು. ಮತಪ್ರಚಾರಕ್ಕಾಗಿ ಪ್ರತ್ಯೇಕವಾಗಿ ಅವರು ಮಾಡಿದ ಸೇವೆ ಏನೂ ಇಲ್ಲವೆನ್ನಬಹುದು. ಅವರ ಧಾರ್ಮಿಕನಿಷ್ಠೆ ಪರಂಪರೆಯಿಂದ ಬಂದದ್ದು. ಅದು ಭಕ್ತಿಯ ಅಭಿವ್ಯಕ್ತಿಗೆ ಒಂದು ಹಿನ್ನೆಲೆ ಮಾತ್ರ, ಇವರ

ಕೀರ್ತನೆಗಳಲ್ಲಿ ವಿಶಿಷ್ಟಾದ್ವೈತದ ಪ್ರತಿಪಾದನೆ ಇದೆ. ರಾಮಾನುಜಮತದಂತೆ ಮುದ್ರೆಗಳನ್ನು ಒತ್ತಿಸಿಕೊಂಡ ಆಚಾರ್ಯರು ದೀಕ್ಷಾಸ್ವೀಕಾರದ ಪಾವಿತ್ರ್ಯ ವನ್ನು ಒಂದೆಡೆ ಹೀಗೆ ಹೇಳಿದ್ದಾರೆ :

ಮೊನಸಿಮುದ್ರಲು ಭುಜಮುಲ ನುಂಡಿತೇ ಚಾಲು
ತನುವೆಂತ ಹೇಯಮೈನಾ ದಾನಿಕೇಮಿ
ಶ್ರೀಕಾಂತು ನಾಮಮು ಜಿಹ್ವದಗಿಲಿತೇ ಚಾಲು
ಯೇಕುಲಜುಡೈನಾನು ಹೀನಮೇಮಿ[1]

ಭೌತಿಕ ದೇಹದ ಮಲಿನ ಎಂಥದಾದರೂ ಧಾರ್ಮಿಕ ಚಿಹ್ನೆಗಳಿಂದ ಅಳಿದು ಹೋಗುವುದು. ಕುಲ ಯಾವುದಾದರೂ ಔನ್ನತ್ಯಕ್ಕೇರಿಸಲು ವಿಷ್ಣು ನಾಮವೊಂದೇ ಸಾಕು ಎಂಬುದನ್ನು ಇಲ್ಲಿ ಪ್ರತಿಪಾದಿಸಿದ್ದಾರೆ.

ವೈಷ್ಣವ ಭಾಗವತೋತ್ತಮರಾಗಿ ತಾವು ನಡೆಸಿದ ಜೀವನವನ್ನು ಅನ್ನ-ಮಯ್ಯ ಹೀಗೆ ಹೇಳಿಕೊಂಡಿದ್ದಾರೆ :

ಸಹಜವೈಷ್ಣವಾಚಾರ ವರ್ತನುಲ
ಸಹವಾಸಮೇ ಮಾ ಸಂಧ್ಯ
ಅತಿಶಯಮಗು ಶ್ರೀಹರಿಸಂಕೀರ್ತನ
ಸತತಂಬುನು ಮಾ ಸಂಧ್ಯ
ಮತಿರಾಮಾನುಜಮತಮೇ ಮಾಕುನು
ಚತುರತಮೆರಸಿನ ಸಂಧ್ಯ
ಪರಮಭಾಗವತ ಪದ ಸೇವನಮೇ
ಸರವಿನೆನ್ನ ಮಾ ಸಂಧ್ಯ
ತಿರುಮಂತ್ರಪಠನಮೇ ಸಂತತಮುನು ಮಾ ಸಂಧ್ಯ

ವಿಷ್ಣುಭಕ್ತಿಯನ್ನು ಸಂಕೀರ್ತನ ರೂಪದಲ್ಲಿ ಸಮರ್ಪಿಸುವಾಗ ಆಚಾರ್ಯರ ಅಭಿವ್ಯಕ್ತಿ ಹಲವೆಡೆ ವಿಶಿಷ್ಟ ಕಾವ್ಯವಾಗಿ ಮೂಡಿಬಂದಿದೆ :

ದಾಚುಕೋ ನೀ ಪಾದಾಲಕು ತಗನೇಜೇಸಿನ ಪೂಜಲಿವಿ
ಪೂಚಿ ನೀಕೀರಿತಿರೂಪ ಪುಷ್ಪಮುಲಿವಿಯಯ್ಯಾ
ವೊಕ್ಕ ಸಂಕೀರ್ತನೇ ಚಾಲು ವೊದ್ದಿಕೈಮಮ್ಮು ರಕ್ಷಿಂಚಗ

---

[1] ಚೆನ್ನಾಗಿ ಮುದ್ರೆಗಳು ಭುಜಗಳಿಗಿದ್ದರೆ ಸಾಕು
ತನುವೆಷ್ಟು ಹೇಯವಾದರೇನು
ಶ್ರೀಕಾಂತನ ನಾಮ ನಾಲಗೆ ಮೇಲಿದ್ದರೆ ಸಾಕು
ಯಾವ ಕುಲಜನಾದರೇನು ಹೀನನೇನು

ತಕ್ಕಿನವಿ ಭಂಡಾರಾನ ದಾಚಿವುಂಡನೀ
ವೆಕ್ಕಸಮುಗು ನೀ ನಾಮಮು ವೆಲ ಸುಲಭಮು ಫಲಮಧಿಕಮು
ದಿಕ್ಕೈನನ್ನೇಲಿತಿವಿತನವಿ ತೀರನಿ ನಾ ಧನಮಯ್ಯಾ......[1]

ವೈಷ್ಣವದ ಆಧಿಕ್ಯವನ್ನು ಹೇಳುತ್ತಾ ಒಂದೆಡೆ "ಅನ್ನಿಟಾನು ಹರಿದಾಸುಲ ಧಿಕುಲು ಕನ್ನುಲವಂಟಿವಾರು ಕಮಲಜಾದುಲಕು" (ಎಲ್ಲದರಲ್ಲೂ ಹರಿದಾಸರು ಅಧಿಕರು, ಕಮಲಜಾದಿಗಳಿಗೆ ಕಣ್ಣಿನಂಥವರು) ಎಂದು ಹರಿದಾಸರ ವಿಚಾರ ಪ್ರಸ್ತಾಪಿಸಿದ್ದಾರೆ. ಹರಿದಾಸರೆಂದರೆ ಕರ್ನಾಟಕದ ಹರಿದಾಸರು ಅನ್ನಮಾಚಾರ್ಯರ ಮನಸ್ಸಿನಲ್ಲಿದ್ದಿರಬಹುದು. ಇನ್ನೊಂದೆಡೆ 'ಎಲ್ಲ ಮಂತಗಳು ಒಂದೇ ಎಂದು ಹೇಳಲು ಸಾಧ್ಯವೇ ? ಸ್ವರ್ಣಟಂಕ ಎಲ್ಲೆಡೆ ಚಲಾವಣೆ ಆಗುವಂತೆ ತೊಗಲ ಬಿಲ್ಲೆಗಳು ಸಲ್ಲುವವೇ ?' ಎಂದು ಹೇಳಿದ್ದಾರೆ.

ಅನ್ನಮಾಚಾರ್ಯರು ವಿಠಲನನ್ನು ಕುರಿತಂತೆ ಸಂಕೀರ್ತನೆಗಳನ್ನು ಬರೆದಿದ್ದಾರೆ. ಇವುಗಳಲ್ಲಿ ವಿಠಲನೂ ಸಾಕ್ಷಾತ್ ವೆಂಕಟೇಶ್ವರನೇ ಎಂದು ಸಾರಿದ್ದಾರೆ. ಉದಾಹರಣೆಗೆ :

ಬಲ್ಲಿದಪು ಶ್ರೀವೇಂಕಟಪತಿವೈ ಪಾಂಡುರಂಗಾನ ಪಾಂಡುರಂಗಾನ
ಚಲ್ಲನಾ ನೆಲಕೊಂಟಿವಿ ಜಯವಿಠಲೇಶ್ವರಾ[2]

ಹಾಗೆಯೇ ಪುರಂದರದಾಸರು ಶ್ರೀನಿವಾಸನಲ್ಲಿಯೇ ವಿಠಲಸ್ವರೂಪವನ್ನು ಕಂಡಿದ್ದಾರೆ :

ಶರಣು ನಿನಗೆ ಶರಣೆಂಬರು ವಿಠಲ
ಕರುಣಾವಾರಿಧಿ ಎನ್ನ ಕಾಯೋ ವಿಠಲ......
ಕಂಡೆ ನಾ ನಿನ್ನ ವೆಂಕಟನೆಂಬ ವಿಠಲ

ವೈಷ್ಣವತತ್ತ್ವದಲ್ಲಿ ದೇವರ ಅನಂತರ ಗುರುವಿಗೆ ಪ್ರಥಮ ಸ್ಥಾನ. ಅನ್ನಮಯ್ಯ ಮತ್ತು ಪುರಂದರದಾಸರ ರಚನೆಗಳಲ್ಲಿ ಗುರುವೇ ಪ್ರತ್ಯಕ್ಷದೈವ

[1] ನಿನ್ನ ಪಾದಕೆ ನಾ ಮಾಡಿದ ಈ ಪೂಜೆಯ ಭದ್ರವಾಗಿಟ್ಟುಕೋ
ಹೂಬಿಟ್ಟ ನಿನ್ನ ಕೀರ್ತಿರೂಪ ಪುಷ್ಪಗಳಿವು
ಒಂದು ಕೀರ್ತನೆ ಸಾಕು ಚೆನ್ನಾಗಿ ನಮ್ಮನು ರಕ್ಷಿಸಲು
ಉಳಿದವು ಭಂಡಾರದಲಿ ಭದ್ರವಾಗಿರಲಿ
ನಿನ್ನ ನಾಮದ ಬೆಲೆ ಸುಲಭ ಫಲವಧಿಕ
ದಿಕ್ಕಾಗಿ ಆಳಿದ ನಿನ್ನ ಸಂಕೀರ್ತನಗಳೇ ನನಗೆ ತೀರದ ಧನವಯ್ಯಾ......

[2] ಬಲ್ಲಿದ ಶ್ರೀವೇಂಕಟಪತಿಯಾಗಿ ಪಾಂಡುರಂಗ
ತಣ್ಣಗೆ ನೆಲಸಿರುವೆ ಜಯವಿಠಲೇಶ್ವರ

ವೆಂಬ ಭಾವನೆ ಹಲವೆಡೆ ಕಂಡುಬರುತ್ತದೆ. ''ಗುರುವು ಗಲವಾನಿಕಿ ಕೊರತ ಯೇಮಿಯುಲೇದು'' (ಗುರುವಿರುವವನಿಗೆ ಕೊರತೆ ಎಂಬುದಿಲ್ಲ.)

ಪುರಂದರದಾಸರ ಗುರುಭಕ್ತಿಯೂ ಅನನ್ಯವಾದುದು. (ಉದಾ : ''ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ'') ಕೆಲವು ರಚನೆಗಳು ಇಬ್ಬರಲ್ಲೂ ಒಂದೇ ರೀತಿ ಇವೆ. ಉದಾಹರಣೆಗೆ:

ಶರಣು ಶರಣು ಸುರೇಂದ್ರಸನ್ನುತ ಶರಣು ಶ್ರೀಸತಿವಲ್ಲಭಾ
ಶರಣು ರಾಕ್ಷಸಗರ್ವಸಂಹರ ಶರಣು ವೆಂಕಟನಾಯಕ

ಇದು ಮಾಳವಿರಾಗದಲ್ಲಿರುವ ಆಚಾರ್ಯರ ಕೀರ್ತನೆಯೊಂದರ ಪಲ್ಲವಿ, ಇದನ್ನೇ ಪುರಂದರದಾಸರು ರಾಗಸಹಿತ ಅನುಕರಿಸಿರುವಂತೆ ಕಾಣುತ್ತದೆ:

ಶರಣು ಶರಣು ಸುರೇಂದ್ರವಂದಿತ ಶರಣು ಶ್ರೀಪತಿಸೇವಿತ
ಶರಣು ಪಾರ್ವತೀತನಯ ಮೂರುತಿ ಶರಣು ಸಿದ್ಧವಿನಾಯಕ

ಜನಪದ ವಸ್ತು ಮತ್ತು ರೀತಿಗಳನ್ನು ಜೀರ್ಣಿಸಿಕೊಂಡು ಕೀರ್ತನ ಸಾರಸ್ವತಕ್ಕೆ ಅವನ್ನು ಅಳವಡಿಸಿಕೊಂಡ ಕವಿಗಳಲ್ಲೂ ಅನ್ನಮಾಚಾರ್ಯರು ಮೊದಲಿಗರು. ದೇಶಿ ಪ್ರಕಾರಗಳಾದ ಗೊಬ್ಬಿಳ್ಳು, ಲಾಲಿಪದ, ಚಂದಮಾಮ ಪದ, ಜೋಗುಳದ ಹಾಡು ಮುಂತಾದುವನ್ನು ಇವರು ಬಳಸಿಕೊಂಡಿದ್ದಾರೆ. ಉದಾಹರಣೆಗೆ:

ಜೋ ಅಚ್ಯುತಾನಂದ ಜೋ ಜೋ ಮುಕುಂದಾ
ರಾವೆ ಪರಮಾನಂದ ರಾಮು ಗೋವಿಂದ
ನಂದು ನಿಂಟನು ಜೇರಿ ನಯಮು ಮೀರಂಗ
ಚಂದ್ರವದನಲು ನೀಕು ಸೇವ ಚೇಯಂಗ
ಅಂದಮುಗ ವಾರಿಂಡ್ಲ ನಾಡು–ಚುಂಡಂಗ[1]...

ಪುರಂದರದಾಸರೂ ತಮ್ಮ ಕೀರ್ತನೆಗಳಲ್ಲಿ ಜನಪದ ಗೀತೆಗಳಿಂದ ಸ್ಫೂರ್ತಿ ಪಡೆದು ಲಾಲಿಪದ, ಜೋಗುಳದ ಹಾಡು, ಶೋಭಾನೆಹಾಡು ಮುಂತಾದವನ್ನು ಹಾಡಿದ್ದಾರೆ:

---

[1] ಜೋ ಅಚ್ಯುತಾನಂದ ಜೋ ಜೋ ಮುಕುಂದಾ
ಬಾ ಪರಮಾನಂದ ರಾಮು ಗೋವಿಂದ
ನಂದನ ಮನೆಗೆ ಸೇರಿ ನಯದಿಂದ
ಚಂದ್ರವದನೆಯರು ನಿನಗೆ ಸೇವೆ ಮಾಡಲು
ಅಂದವಾಗಿ ಅವರ ಮನೆಗಳಲ್ಲಿ ಆಡುತಿರಲು...

ಜೋ ಜೋ ಯಶೋದೆಯ ಕಂದ ಮುಕುಂದ
ಜೋ ಜೋ ಕಂಸ ಕುಠಾರಿ
ಜೋ ಜೋ ಮುನಿಗಳ ಹೃದಯಮಂದಿರ
ಜೋ ಜೋ ಲಕುಮಿಯ ರಮಣ

ದಕ್ಷಿಣ ಭಾರತೀಯ ಭಕ್ತಿಪಂಥಗಳು, ಸಂಗೀತ ಸಂಪ್ರದಾಯಗಳು ಮತ್ತು ಗೇಯಸಾಹಿತ್ಯಪ್ರಕಾರಗಳನ್ನು ಅಧ್ಯಯನ ಮಾಡುವಾಗ ನಮ್ಮ ಗಮನ ಸೆಳೆಯುವವರಲ್ಲಿ ಪುರಂದರದಾಸರು ಮತ್ತು ಅನ್ನಮಾಚಾರ್ಯರು ಪ್ರಮುಖರು. ಭಕ್ತಿಯ ಅಭಿವ್ಯಕ್ತಿಯಲ್ಲಿ ಸಂಗೀತ ಪ್ರಯೋಗದಲ್ಲಿ ಮತ್ತು ರಚನಾ ವೈವಿಧ್ಯದಲ್ಲಿ ಇಬ್ಬರ ಸಾಧನೆ ಉನ್ನತವಾದುದು. ಒಟ್ಟಿನಲ್ಲಿ ದಕ್ಷಿಣ ಭಾರತೀಯ ಸಾಂಸ್ಕೃತಿಕ ಕ್ಷೇತ್ರಕ್ಕೆ ಈ ಮಹನೀಯರು ಸಲ್ಲಿಸಿದ ಸೇವೆ ಚಿರ ಸ್ಮರಣೀಯವಾದುದು.

# ಪುರಂದರದಾಸರು – ಮಲಯಾಳೀಸಂತರು

–ಸಿ. ಕಮಲಾದೇವಿ

ಭಾರತ ವೈವಿಧ್ಯಗಳ ನಾಡು. ಆದರೆ ಭಾಷೆ ಸಾಹಿತ್ಯ ಧರ್ಮ ಸಂಪ್ರದಾಯ ಮುಂತಾದವುಗಳ 'ನಾನಾತ್ವ'ದ ಮಧ್ಯದಲ್ಲಿಯೂ 'ಏಕತ್ವ' ಈ ನಾಡಿನ ಮತ್ತೊಂದು ವಿಶಿಷ್ಟತೆ. ಭಾರತೀಯ ಸಾಹಿತ್ಯವನ್ನು ಪರಿಶೀಲಿಸಿದಾಗ ಇದು ಮತ್ತೊಮ್ಮೆ ಸುವ್ಯಕ್ತ. ಇದರ ಬಗ್ಗೆ ಡಾ. ಕೆ. ಎಂ. ಜಾರ್ಜ್‌ರವರು ಹೀಗೆ ಅಭಿಪ್ರಾಯ ಪಡುತ್ತಾರೆ : "A traditional brass lamp has several wicks jutting out to be lit. The more numerous the wicks, the brighter the light. The lamp is the same the oil is same, but it is the wicks that determine the brightness of the light. The light from the various wicks merge imperceptibly and produce a bright ness which is the totality of many lights. Just as many wicks produce one light, India's many languages produce one literature.[1] ಪ್ರಾದೇಶಿಕವಾದ ವೈವಿಧ್ಯಗಳನ್ನು ಉಳಿಸಿಕೊಂಡೂ ಭಾರತೀಯ ಸಾಹಿತ್ಯಗಳಲ್ಲಿ ಸಮಾನವಾದ ಚಳುವಳಿಗಳು ಮತ್ತು ಅದರ ಮೂಲಕವಾಗಿ ದರ್ಶನಗಳು ಕೂಡ ಪ್ರಕಟವಾಗಿವೆ. ಅಂಥ ಸಾರ್ವಜನಿಕವಾದ ಚಳುವಳಿಗಳಲ್ಲಿ ಭಕ್ತಿಸಾಹಿತ್ಯವೂ ಒಂದು. ಭಾರತದ ಎಲ್ಲಾ ಕಡೆಗಳಲ್ಲೂ ಧರ್ಮಗಳ ಪುನರುಜ್ಜೀವನದ ಅಂಗವಾಗಿ ಭಕ್ತಿಚಳುವಳಿಯು ಆರಂಭವಾಯಿತು ಎನ್ನುವುದು ಗಮನಾರ್ಹ.

ದಕ್ಷಿಣಭಾರತದಲ್ಲಿಯೂ ಇದೇ ಹಿನ್ನೆಲೆಯಲ್ಲಿ ಭಕ್ತಿ ಚಳುವಳಿಯು ರೂಪತಾಳಿದೆ. ತಮಿಳುನಾಡಿನ ಶೈವ ವೈಷ್ಣವ ಧರ್ಮಗಳ ಸಂದೇಶವು ನೆರೆಯ ಕೇರಳ ದೇಶಕ್ಕೂ ತಲುಪುವುದು ಸಹಜ. ಅಲ್ಲಿ ಶೈವಾಚಾರ್ಯರನ್ನು 'ನಾಯನ್ಮಾರ್' ಎಂಬುದಾಗಿಯೂ ಮತ್ತು ವೈಷ್ಣವಾಚಾರ್ಯರನ್ನು 'ಆಳವಾರ್' ಎಂಬುದಾಗಿಯೂ ವ್ಯವಹರಿಸಲಾಗಿದೆ. ಅರುವತ್ತ್ಮೂರು ಜನ ನಾಯನ್ಮಾರರಲ್ಲಿ ಕೇರಳ ದೇಶಕ್ಕೆ ಸೇರಿದವರು ಇಬ್ಬರು. ವೈಷ್ಣವಾಚಾರ್ಯರಾದ ಹನ್ನೆರಡು ಆಳ್ವಾರರಲ್ಲಿ ಒಬ್ಬರು ಮಾತ್ರ ಕೇರಳೀಯರು. ವೈಷ್ಣವರ ೧೦೮

---

[1] Dr. K. M. George – comparative Indian Literature – Vol.1 (Kerala Sahitya Academy Publication)

ದೇವಸ್ಥಾನಗಳಲ್ಲಿ ೧೩ರಷ್ಟು ಕೇರಳಕ್ಕೆ ಸೇರಿವೆ, ಶೈವರ ೨೭೪ ದೇವಸ್ಥಾನಗಳಲ್ಲಿ ಕೇರಳಕ್ಕೆ ಸೇರಿದ್ದು ಒಂದು ಮಾತ್ರ.[1] ಹೀಗೆ ತಮಿಳುನಾಡಿನ ಭಕ್ತಿ ಚಳುವಳಿಗೂ ಮತ್ತು ಕೇರಳಕ್ಕೂ ಸಂಬಂಧವಿತ್ತು.

ಕೇರಳದಲ್ಲಿ ಶಿವನನ್ನು ಮತ್ತು ವಿಷ್ಣುವನ್ನು ಪೂಜಿಸುವ ಸಂಪ್ರದಾಯವು ರೂಢಿಯಲ್ಲಿದ್ದರೂ ಇವುಗಳನ್ನು ಎರಡು ಭಿನ್ನ ಮಾರ್ಗಗಳಾಗಿ ಪರಿಗಣಿಸಲಿಲ್ಲ. ಇದಕ್ಕೆ ಪ್ರಾದೇಶಿಕವಾದ ಕೆಲವು ಕಾರಣಗಳಿರಬಹುದು. ಕೇರಳದಲ್ಲಿ ಜೈನ ಮತ್ತು ಬೌದ್ಧಧರ್ಮಗಳಿಗೆ ತಮಿಳುನಾಡು ಮತ್ತು ಕರ್ನಾಟಕದಲ್ಲಿ ಇದ್ದಷ್ಟು ಪ್ರಾಬಲ್ಯ ಇರಲಿಲ್ಲ. ಆದ್ದರಿಂದ ಅಲ್ಲಿ ಹಿಂದೂಧರ್ಮವು ಈ ಎರಡು ಧರ್ಮಗಳಿಂದ ವಿರೋಧವನ್ನು ಎದುರಿಸಬೇಕಾದ ಪ್ರಮೇಯ ಬರಲಿಲ್ಲ. ಅಲ್ಲದೆ, ಕೇರಳಕ್ಕೆ ಬಂದು ನೆಲೆಸಿದ ಆರ್ಯಬ್ರಾಹ್ಮಣರು (ನಂಬೂದಿಯರು) ಭಾಗವತಪಂಥದವರು. ಅವರು ಶಿವನನ್ನು ಮತ್ತು ವಿಷ್ಣುವನ್ನು ಅಭೇದಭಾವದಿಂದ ಆರಾಧಿಸುವವರು. ಈ ಸಮನ್ವಯದೃಷ್ಟಿಯನ್ನು ಕೇರಳದ ಸಾಹಿತ್ಯದಲ್ಲಿಯೂ ಮತ್ತು ಜನಜೀವನದಲ್ಲಿಯೂ ಕಾಣಬಹುದು.

ಮಲಯಾಳಸಾಹಿತ್ಯದಲ್ಲಿ ಭಕ್ತಿಸಾಹಿತ್ಯದ ಚರಿತ್ರೆ ಇತಿಹಾಸಪುರಾಣಗಳ ಅನುವಾದದ ಮೂಲಕ ಪ್ರಾರಂಭವಾಗಿದೆ. ಮಲಯಾಳದ ಪ್ರಥಮಕಾವ್ಯವಾದ 'ರಾಮಚರಿತ'ದಲ್ಲಿಯೇ ರಾಮಾಯಣದ ಪ್ರಭಾವವನ್ನು ಗುರುತಿಸಬಹುದು. ೧೪ನೆಯ ಶತಮಾನದ ಕಣ್ಣಶ್ಶನ್ ಪಾಟ್ಟುಗಳೂ ರಾಮಾಯಣ ಭಾರತ ಭಾಗವತ ಭಗವದ್ಗೀತೆ ಇತ್ಯಾದಿಗಳ ಅನುವಾದರೂಪದಲ್ಲಿ ಪ್ರಕಟವಾಗಿವೆ. ಈ ಕಾವ್ಯಗಳಲ್ಲಿ ಭಕ್ತಿಸಂಬಂಧವಾದ ಸನ್ನಿವೇಶಗಳು ಮತ್ತು ಸ್ತುತಿಗಳು ಇದ್ದರೂ ಇವುಗಳಿಗೆ ಸಾಕಷ್ಟು ಪ್ರಚಾರ ಸಿಕ್ಕಿರಲಿಲ್ಲ. ಈ ಕಾವ್ಯಗಳಲ್ಲಿಯ ಮಿಶ್ರಭಾಷಾ ಶೈಲಿಯೇ (ತಮಿಳು, ಮಲಯಾಳಂ) ಅದಕ್ಕೆ ಮುಖ್ಯ ಕಾರಣ. ಆದರೂ ಕಣ್ಣಶ್ಶನ್ ಪಾಟ್ಟುಗಳ ಕಾಲಕ್ಕೆ ಭಕ್ತಿಯು ಕವಿಹೃದಯದ ಸ್ಥಾಯೀಭಾವವಾಗಿ ಪರಿಣಮಿಸಿತು ಎಂಬುದರಲ್ಲಿ ಸಂದೇಹವಿಲ್ಲ.

೧೫ನೆಯ ಶತಮಾನದ ಹೊತ್ತಿಗೆ ಕೇರಳದಲ್ಲಿ ವೈಷ್ಣವಭಕ್ತಿಯು ಆಳವಾಗಿ ಬೇರೂರಿತ್ತು. ಚೆರುಶ್ಶೇರಿ ನಂಬೂದಿರಿಯ 'ಕೃಷ್ಣಗಾಥೆ' ಎಂಬ ಕಾವ್ಯ ಈ ಮಾತಿಗೆ ಉದಾಹರಣೆ. ಈ ಕಾವ್ಯವು ಮುಖ್ಯವಾಗಿ ಭಾಗವತದ ದಶಮ ಸ್ಕಂಧವನ್ನು ಆಧರಿಸಿದೆ. ಕೃಷ್ಣನ ಜೀವನಚರಿತ್ರೆಯೇ ಕೃಷ್ಣಗಾಥೆಯ ವಸ್ತು. ಕೃಷ್ಣನ ಜನನದಿಂದ ಸ್ವರ್ಗಾರೋಹಣದವರೆಗಿರುವ ಕಥೆ ಅದರಲ್ಲಿದೆ. ಕೃಷ್ಣನ ಮಾಹಾತ್ಮ್ಯೆಯನ್ನು ಚಿತ್ರಿಸುವಲ್ಲಿ ಚೆರುಶ್ಶೇರಿಯ ಸ್ವಂತಿಕೆ ವ್ಯಕ್ತವಾಗಿದೆ.ಅವರ

1 ಉಳ್ಳೂರ್ – Kerala Sahitya caritre – Vol,1

ನಾಯಕನ ಕಲ್ಪನೆಯೂ ವಿಶೇಷವಾದದ್ದು. ವಿಷ್ಣುವಿನ ಅವತಾರವಾದ ಕೃಷ್ಣನಲ್ಲಿ ಮಾನವಸಹಜವಾದ ಭಾವಗಳನ್ನು ಅವರು ಆರೋಪಿಸಿದ್ದಾರೆ. ಬಾಹ್ಯ ಲಕ್ಷಣಗಳನ್ನು ಗಮನಿಸಿದಾಗ ಕೃಷ್ಣಗಾಥೆ ಹಾಗೂ ಪುರಂದರದಾಸರ ಕೃತಿಗಳಲ್ಲಿ ಅನೇಕ ಸಾಮ್ಯ–ವೈಷಮ್ಯಗಳನ್ನು ಕಾಣಬಹುದು. ಮೊದಲನೆಯದಾಗಿ ಕೇರಳದಲ್ಲಿ ದಾಸಕೂಟದಂಥ ಧಾರ್ಮಿಕ ಪರಂಪರೆ ರೂಢಿಯಲ್ಲಿರಲಿಲ್ಲ. ಕೃಷ್ಣಗಾಥೆ ಕೀರ್ತನ ಶೈಲಿಯಲ್ಲಿ ಬರೆದದ್ದು ಅಲ್ಲ. ಅದರಲ್ಲಿ ಸಂಗೀತವಿಲ್ಲ ; ಆದರೆ ಸಂಗೀತದ ಲಯಮಾಧುರ್ಯವನ್ನು ಅದರಲ್ಲಿ ಅನುಭವಿಸಬಹುದು. ಕವಿಯ ಮನಸ್ಸಿನಿಂದ ತುಳುಕಿ ಹರಿಯುವ ಭಕ್ತಿಯು ಸಹಜ ಸಂಗೀತವೇ ಆದು. ಹರಿದಾಸರ ಕೃತಿಗಳಲ್ಲಿ ಕಂಡುಬರುವ ಪಂಚಭಾವಗಳನ್ನು[1] (ವಾತ್ಸಲ್ಯ, ಮಧುರ,ಸಖ್ಯ, ಶಾಂತ ಮತ್ತು ದಾಸ್ಯಭಾವಗಳು) ಸ್ವಲ್ಪಮಟ್ಟಿಗೆ ಕೃಷ್ಣಗಾಥೆಯಲ್ಲಿ ಕಾಣಬಹುದು. ಕೃಷ್ಣಗಾಥೆಯ ಹೆಚ್ಚಿನ ಭಾಗ ಕೃಷ್ಣನ ಬಾಲಲೀಲೆಗಳಿಗೇ ಮೀಸಲಾಗಿದೆ. ಇಂಥ ಸಂದರ್ಭದಲ್ಲಿ ಪುರಂದರದಾಸರ ಮತ್ತು ಚೆರುಶ್ಶೇರಿಯ ವರ್ಣನೆಗಳಲ್ಲಿ ಕಂಡುಬರುವ ಸಾಮ್ಯ ಆಶ್ಚರ್ಯವನ್ನುಂಟುಮಾಡುತ್ತದೆ.

ತಾಯಿ–ಮಗುವಿನ ಪರಿಶುದ್ಧವಾದ ಸಂಬಂಧವೇ ವಾತ್ಸಲ್ಯ. ಮಗುವಿನ ಬೆಳವಣಿಗೆಯ ಒಂದೊಂದು ಹಂತ, ಅಲ್ಲಿ ಕಂಡುಬರುವ ಸ್ವಭಾವ ವಿಶೇಷ ಇವುಗಳನ್ನು ಪುರಂದರದಾಸರು, ಚೆರುಶ್ಶೇರಿ–ಇಬ್ಬರೂ ಹೃದ್ಯವಾಗಿ ಚಿತ್ರಿಸಿದ್ದಾರೆ. ಕೃಷ್ಣನ ದಂತಾಂಕುರವನ್ನು ಕಂಡು ''ಮಲ್ಲಿಗೆಯ ಮೊಗ್ಗಿನಂತೆ ಹಲ್ಲುಬಂದಿವೆ ಸಿರಿ ಕೃಷ್ಣಯ್ಯಗೆ'' ಎಂದು ಪುರಂದರದಾಸರು ಹಾಡಿದ್ದಾರೆ.

ಚೆಂದಮೆ ಉಣ್ಣಿರು ಚೆಂದೊಂಡಿವಾತನ್ನಿಲ್
ದಂತಚ್ಚಳ್ ಪೊನ್ನುವನ್ನುಂಗುರಿಚ್ಚು
ಪಲ್ಲವಂ ಪೂಂಡೊರು ಮುಲ್ಲಯಾಂ ವಲ್ಲಿಮೇಲ್
ಉಲ್ಲಾಸ ಮೊಟ್ಟುಗಳೆನ್ನಪೋಲೆ[2]

– ಉಲೂಖಲ ಬಂಧನಂ, ಕೃಷ್ಣಗಾಥೆ, ಚೆರುಶ್ಶೇರಿ

ಎಂದಿರುವುದಲ್ಲದೆ ಸ್ವಲ್ಪ ಮುಂದುವರಿಸಿ ''ಈ ದಂತಗಳು ಮಲ್ಲಿಗೆಯ ಮೊಗ್ಗಿನಂತೆ ಕೋಮಲವಾದುವಲ್ಲ ಎಂಬುದು ಸ್ತನ್ಯಪಾನದ ಸಮಯದಲ್ಲಿ ತಾಯಿಗೆ

---

[1] ವಿವರಗಳಿಗೆ ನೋಡಿ : ಡಾ. ಟಿ. ಎನ್. ನಾಗರತ್ನ, ಹರಿದಾಸರ ಭಕ್ತಿ ಸ್ವರೂಪ, ಪು. ೬೦

[2] ಚಿಗುರಿನ ಮಧ್ಯದಲ್ಲಿ ಬೆಳಗುವ ಮಲ್ಲಿಗೆಯ ಬಿಳಿ ಮೊಗ್ಗುಗಳಂತೆ ಕೃಷ್ಣನ ಬಾಯಲ್ಲಿ ದಂತಾಂಕುರವಾಗಿದೆ.

ಅರಿವಾಗಿದೆ'' ಎನ್ನುವರು, ಚೆರುಶ್ಶೇರಿ. ದಾಸರ ಹಾಡಿನಲ್ಲಿ ಯಶೋದೆ ಕೃಷ್ಣನ ಬಾಯನ್ನು ತೆಗೆಸಿದಾಗ ''ಎಲ್ಲ ಬೊಮ್ಮಾಂಡವ ಕಂಡೆ, ಎಲ್ಲರಂಥ ಕಂದನಲ್ಲಿವ'' ಎಂದು ತಾಯಿ ಗಾಬರಿಗೊಳ್ಳುವಳು. ಗಾಥೆಯಲ್ಲಿ ಮಣ್ಣನ್ನು ತಿಂದ ಕೃಷ್ಣನ ಬಾಯನ್ನು ಬಲವಂತದಿಂದ ತೆಗೆಸಿದಾಗ ಇಡೀ ಬ್ರಹ್ಮಾಂಡವನ್ನೂ, ದೇವತೆಗಳನ್ನೂ, ಗೋಕುಲ ಮತ್ತು ಗೋಪಾಲರನ್ನೂ ಕೊನೆಗೆ ತನ್ನನ್ನೂ ಅದರಲ್ಲಿ ಕಂಡ ತಾಯಿ 'ಬಾಯನ್ನು ಮುಚ್ಚಿಕೊಳ್ಳೋ ಕೃಷ್ಣ' ಎಂದು ಬೇಡಿಕೊಳ್ಳುತ್ತಾಳೆ. ಬಳಿಕ ತಾನು ಕಂಡ ದೃಶ್ಯಗಳೆಲ್ಲವೂ ಕನಸೆಂದು ಭಾವಿಸಿ ತನ್ನ ಮಗುವನ್ನು ಆಲಂಗಿಸುತ್ತಾಳೆ, ಮುದ್ದಾಡುತ್ತಾಳೆ.

ಬಾಲಕ ಕೃಷ್ಣನಿಗೆ ಇರುವ ಹಾಲು ಬೆಣ್ಣೆಗಳ ಆಸೆಯನ್ನು ಇಬ್ಬರೂ ವರ್ಣಿಸಿದ್ದಾರೆ. ತಿಂಡಿ ತಿನಿಸುಗಳ ಬಗ್ಗೆ ಮಕ್ಕಳಿಗಿರುವ ಆಸೆ ಮತ್ತು ಅದರ ಸಹಜತೆ ಪುರಂದರದಾಸರ ''ಸೆರಗ ಬಿಡಯ್ಯ ಕೃಷ್ಣ'' ಮುಂತಾದ ಎಷ್ಟೋ ಹಾಡುಗಳಲ್ಲಿ ಭಾವಪೂರ್ಣವಾಗಿ ವರ್ಣಿತವಾಗಿದೆ. ಕೃಷ್ಣಗಾಥೆಯಲ್ಲಿ ಇಂಥ ಒಂದು ಸಂದರ್ಭ ಹೀಗಿದೆ :

ವೆಣ್ಣಕಾಣುಣ್ಣಿ ! ನಿನಕ್ಕೆನ್ನು ಚೊಲ್ಲುಂಬೋಳ್ ।
ಪೆಣ್ಣುಙ್ಙಳ್ ಚಾರತ್ತು ತಿಣ್ಣಂ ಚೆಲ್ಲುಂ
ವಾ಴ಪಟತ್ತಿಂಡೆ ವಾರ್ತಯೆ ಕೇಳ್ಕುಂಬೋಳ್
ವಾಯುಂ ಪಿಳರ್ನವನ್ ಮುನ್ನಿಲ್ ಚೆಲ್ಲುಂ
ಪಾಚ್ಚೋಱು ಕೇಳ್ಕುಂ ಬೋಳಾಚ್ಚಿಮಾರ್ ಪಿನ್ನಾಲೆ ।
ಪಾಚ್ಚಲ್ ತುಡಙ್ಙಿಯಿಡುಂ । ಪಾರಂ ಪಿನ್ನೆ[1]

ಕೃಷ್ಣ ತನ್ನ ಗೆಳೆಯರೊಡನೆ ಸೇರಿ ಗೋಪಿಯರ ಮನೆಗಳಲ್ಲಿ ಮಾಡುವ ಚೇಷ್ಟೆಗಳನ್ನು ಕೆಲವು ಸಂದರ್ಭಗಳಲ್ಲಿ ಅವರಿಗೆ ಸಹಿಸಲು ಆಗುವುದಿಲ್ಲ. ಆದ್ದರಿಂದ ಅವರು ಯಶೋದೆಯಲ್ಲಿ ದೂರುತ್ತಾರೆ. ಗಾಥೆಯಲ್ಲಿಯು ಈ ಸಂದರ್ಭ : ಕೋಪದಿಂದ ಹೊಡೆಯಲು ಗೋಪಿಯರು ಕೃಷ್ಣನ ಹತ್ತಿರಕ್ಕೆ ಹೋದಾಗ ಅವನ ನಗುವನ್ನು ಕಂಡು ಎಲ್ಲವನ್ನೂ ಮರೆತುಬಿಡುತ್ತಾರೆ. ದೂರು ಕೇಳಿ ನೋವಾದರೂ ಯಶೋದೆಗೆ ಮಗುವನ್ನು ಶಿಕ್ಷಿಸಲು ಸಾಧ್ಯ

---

[1] ನಿನಗೀಗ ಬೆಣ್ಣೆ ಕೊಡುತ್ತೇನೆ ಎಂದು ಹೇಳುವಾಗಲೇ ಕೃಷ್ಣನು ಗೋಪಿಕೆಯರ ಹತ್ತಿರಕ್ಕೆ ಓಡಿಬರುತ್ತಾನೆ. 'ಬಾಳೆಹಣ್ಣು' ಎಂದು ನುಡಿಯುವಾಗಲೇ ಬಾಯನ್ನು ತೆರೆದು ಕಾದು ನಿಲ್ಲುವನು. 'ಹಾಲುಅನ್ನ'ದ ಸೂಚನೆ ಬರುತ್ತಲೆ ಗೋಪಿಯರ ಹಿಂದೆ ಓಡುತ್ತಾನೆ. 'ಬೆಲ್ಲ' ಎಂದು ಆಡಿದ ಕೂಡಲೆ ಅವನ ಬಾಯಲ್ಲಿ ನೀರೂರುತ್ತದೆ''

— ಉಲೂಖಲ ಬಂಧನಂ, ಕೃಷ್ಣಗಾಥೆ, ಚೆರುಶ್ಶೇರಿ

ವಾಗುವುದಿಲ್ಲ. ತಾಯಿಯ ಮನಸ್ಸಿನ ತಳಮಳ ಮತ್ತು ಕೋಮಲ ಭಾವಗಳು ಇಬ್ಬರ ಕೃತಿಗಳಲ್ಲೂ ವ್ಯಕ್ತವಾಗಿವೆ. ಒಟ್ಟಿನಲ್ಲಿ ಗೋಕುಲದಲ್ಲಿಯ ಕೃಷ್ಣನ ಜೀವನ, ಅವನ ಚೇಷ್ಟೆಗಳು, ಗೋಪಿಯರ ದೂರು, ತಾಯಿಯ ವಾತ್ಸಲ್ಯಪೂರ್ಣಪ್ರತಿಕ್ರಿಯೆ ಮುಂತಾದ ವರ್ಣನೆಗಳನ್ನು ನೋಡಿದಾಗ ಒಂದು ಮಗುವಿನ ಬಾಲ್ಯವನ್ನೇ ಕಂಡಂತಾಗುತ್ತದೆ.

ಭಕ್ತ–ಭಗವಂತರಲ್ಲಿ ಪ್ರೇಮವನ್ನಾರೋಪಿಸಿಕೊಂಡು ಸಾಧನೆಮಾಡುವುದು ಮಧುರ ಭಕ್ತಿ. ಗೋಪಿಕೆಯರ ಹಾಗೂ ಕೃಷ್ಣನ ನಡುವಣ ಸಂಬಂಧದಲ್ಲಿ ಶೃಂಗಾರಭಾವಾದಿಗಳು ಮೂಡಿದ್ದರೂ ಜೀವ–ಪರಮಾತ್ಮರ ಸಂಬಂಧವೇ ಇದರ ಆಂತರಿಕ ಚೋದನೆ. ವೃಂದಾವನದಲ್ಲಿ ನಡೆಯುವ ವನ ಕ್ರೀಡೆ ಮತ್ತು ಗೋಪಿಯರ ವಿರಹದ ಚಿತ್ರಣದ ಮೂಲಕ ಭಕ್ತಿಯ ಇನ್ನೊಂದು ಭಾವ ಪ್ರಕಟವಾಗುತ್ತದೆ. ಚೆರುಶ್ಶೇರಿ ತನ್ನ ಕಾವ್ಯದಲ್ಲಿ ಹೆಚ್ಚು ಸಾಲುಗಳನ್ನು ಈ ಭಾವಕ್ಕೆ ವಿನಿಯೋಗಿಸಿದ್ದಾರೆ. ಮಾಧುರ್ಯ ಮತ್ತು ಕರುಣ ಇಲ್ಲಿ ಸಮಂಜಸವಾಗಿ ಮೇಳಗೊಂಡಿವೆ. ವಿರಹದ ಅವಸ್ಥೆಯಲ್ಲಿ ಕಾಡಿನ ಮರಗಳೊಡನೆ, ಮೃಗಗಳೊಡನೆ, ವೃಕ್ಷಗಳೊಡನೆ ಕೃಷ್ಣನ ಬಗ್ಗೆ ವಿಚಾರಿಸುತ್ತಾ ಅಲೆದಾಡುವ ಗೋಪಿಯರು ವಿಶ್ವಪ್ರಕೃತಿಯಲ್ಲಿ ಲೀನವಾದ ಭಗವಂತನ ಸಾನ್ನಿಧ್ಯವನ್ನು ತಿಳಿದವರು. ನೋಡುವ ವಸ್ತುಗಳಲ್ಲೆಲ್ಲ ಕೃಷ್ಣನನ್ನು ಮಾತ್ರ ಕಾಣುವ ಕವಿಯ ಮನೋವೃತ್ತಿಯನ್ನೇ ಗೋಪಿಯರಲ್ಲಿಯೂ ಗುರುತಿಸಬಹುದು. ಕೃಷ್ಣನ ಧ್ಯಾನದಲ್ಲಿ ತನ್ನನ್ನೇ ಮರೆತು ಹೋಗುವ ಈ ಅವಸ್ಥೆಯನ್ನು ದಾಸರು ಅತ್ಯಂತ ಸುಂದರವಾಗಿ ಚಿತ್ರಿಸಿದ್ದಾರೆ.

ಭಗವಂತನನ್ನು ಗೆಳೆಯನೆಂದು ಭಾವಿಸಿ ಆರಾಧಿಸುವುದೇ ಸಖ್ಯಭಾವ. ಈ ಸಂದರ್ಭದಲ್ಲಿ ಭಗವಂತನನ್ನು ಪ್ರಶ್ನಿಸುವ, ಪರಿಹಾಸ್ಯಮಾಡುವ ಸಲುಗೆಯಿರುವುದನ್ನು ಇಬ್ಬರಲ್ಲಿಯೂ ನೋಡಬಹುದು. ಇಲ್ಲಿಯೂ ಆಂತರಿಕಪ್ರೇರಣೆ ಭಕ್ತಿ. ಪುರಂದರದಾಸರು ''ಭಕ್ತವತ್ಸಲನೆಂಬ ಬಿರುದು ಬೇಕಾದರೆ ಭಕ್ತರ ಅಧೀನವಾಗಿ ಇರಬೇಕು'' ಎಂದು ಅಧಿಕಾರಯುತವಾಗಿ ಅಪ್ಪಣೆಕೊಡುವ ರೀತಿಯೇ 'ಕೃಷ್ಣಗಾಥೆ'ಯಲ್ಲಿ ಗೋವರ್ಧನೋದ್ಧರಣಾ ನಂತರದ ನಾರದರ ಮಾತುಗಳಲ್ಲಿಯೂ ಮಿಂಚಿದೆ :

ಮಾರಿವರುನ್ನೇರಂ ನಲ್ಕುಡ ಚೂಡುವಾನ್
ಆರುಮೊರುತ್ತರುಂ ತಾರಾಞ್ಞಿರೋ ?
ಕುನ್ನುಚುಮನ್ನಿಟ್ಟು ವೆಣ್ಣಚೆಮನ್ನುಳ್ಳೋ—

ರುಣ್ಣಿಕೈ, ನೋಕುನ್ನದಿಲ್ಲಯೋ ಚೊಲ್

... ... ...

ವೆಣ್ಣಯೆನ್ನೋರ್ತಿಟ್ಟು ಕುನ್ನಿನೆತ್ತನ್ನೆಯುಂ ।
ಮೆಲ್ಲವೇ ವಾಯಿಲಾಕ್ಕಾ ಕ್ಕೊಲ್ಲದೆ[1]

ಮತ್ತೊಂದು ಸಂದರ್ಭವನ್ನು ಕುಚೇಲನ ಕಥೆಯಲ್ಲಿ ಕಾಣಬಹುದು. ತನ್ನ ಆತ್ಮೀಯ ಗೆಳೆಯನಿಗೆ ಕೃಷ್ಣನು ನೀಡುವ ಸ್ವಾಗತ, ಅವರ ಮಾತುಕಥೆಗಳು, ಹಳೆಯ ನೆನಪುಗಳು, ಕುಚೇಲನು ತಂದ ಅವಲಕ್ಕಿಯನ್ನು ಕೃಷ್ಣನು ಪ್ರೀತಿಯಿಂದ ತಿನ್ನುವ ಸಂದರ್ಭ ಇತ್ಯಾದಿಗಳು ಸಖ್ಯಭಾವಕ್ಕೆ ಒಳ್ಳೆಯ ನಿದರ್ಶನಗಳಾಗಿವೆ.

ಭಗವಂತನ ಅನಂತಮಾಹಾತ್ಮ್ಯವನ್ನು ಕಂಡು ಪ್ರಶಾಂತಚಿತ್ತದಿಂದ ಹಾಡಿ ಆನಂದಿಸುವುದು ಶಾಂತಭಾವ. ಹರಿದಾಸರು ಹರಿಯ ಗುಣಮಾಹಾತ್ಮ್ಯಗಳನ್ನು ಧಾರಾಳವಾಗಿ ಕೀರ್ತಿಸಿದವರು. ಪುರಂದರದಾಸರ "ಹರಿ ನಡೆಯದಿರಲು ನಡೆಯಲಿಲ್ಲ ಜಗವು, ಹರಿ ನುಡಿಯದಿರಲು ನುಡಿಯಲಿಲ್ಲ ಜಗವು" ಮುಂತಾದ ಹಾಡುಗಳಲ್ಲಿ ಹರಿಯ ಸರ್ವೋತ್ತಮತ್ವದ ಪ್ರತಿಪಾದನೆಯಿದೆ. "ಹೊಂದಿದ ಪಾಪವೆಲ್ಲ ಕಳೆದು ಉದ್ಧಾರವಾಯಿತು ಕುಲಕೋಟಿಯು ಮುದ್ದು ಕೃಷ್ಣನ ದಿವ್ಯನಾಮ ವಜ್ರಕವಚ ಹೃದಯದಲ್ಲಿ" ಎಂದು ಹರಿಯಲ್ಲಿ ಶರಣಾಗುತ್ತಾರೆ, ದಾಸರು. 'ಕೃಷ್ಣಗಾಥೆ'ಯಲ್ಲಿ ಈ ಭಾವ ಎದ್ದು ಕಾಣುವುದು 'ಸ್ವರ್ಗಾರೋಹಣ' ಎಂಬ ಭಾಗದಲ್ಲಿ. ದೇವತೆಗಳು, ಬ್ರಹ್ಮ ಮತ್ತು ಶಿವಾದಿಗಳು ಕೃಷ್ಣನನ್ನು ಸ್ತುತಿಸುವರು. "ಈ ಲೋಕದ ಉಗಮಕ್ಕೆ ಕಾರಣ ನೀನೇ, ಈ ಲೋಕವನ್ನು ಪಾಲಿಸುವವನು ನೀನು. ಇಂದ್ರನಾದದ್ದು, ಚಂದ್ರನಾದದ್ದು, ರುದ್ರನಾದದ್ದು ನೀನೇ" ಎಂಬಲ್ಲಿ ಹರಿಯ ಸರ್ವೋತ್ತಮತ್ವವನ್ನು ಸೂಚಿಸಿದೆ.

ಭಕ್ತ ತನ್ನನ್ನು ಭಗವಂತನ ಸೇವಕ ಅಥವಾ ದಾಸನಾಗಿ ಭಾವಿಸಿ ಆರಾಧಿಸುವುದು ದಾಸ್ಯಭಕ್ತಿಯೆನ್ನಿಸಿಕೊಳ್ಳುತ್ತದೆ. 'ಹರಿದಾಸ' ಎಂಬ ಪದವೇ ದಾಸರ ಈ ಮನೋವೃತ್ತಿಯನ್ನು ಸೂಚಿಸುತ್ತದೆ. ಪುರಂದರದಾಸರ "ದಾಸನ ಮಾಡಿಕೋ ಎನ್ನ" "ದಾಸನೆಂತಾಗುವೆನು ಧರೆಯೊಳಗೆ ನಾನು, ವಾಸು

---

[1] ಈ ಮಳೆ ಬಂದಾಗ ಯಾರೂ ನಿನಗೆ ಛತ್ರಿಯನ್ನು ಕೊಡಲಿಲ್ಲವೆ ? ಬೆಣ್ಣೆಯನ್ನು ಮಾತ್ರ ಹಿಡಿದ ನಿನ್ನ ಕೈ ಬೆಟ್ಟವನ್ನು ಹಿಡಿದಾಗ ನೋವಾಗಲಿಲ್ಲವೆ ? ಬೆಣ್ಣೆಯೆಂದು ಭಾವಿಸಿ ಬೆಟ್ಟವನ್ನು ನುಂಗಬಾರದು.

ಗೋವರ್ಧನೋದ್ಧರಣಂ — ಕೃಷ್ಣಗಾಥ, ಚೆರುಶ್ಶೇರಿ

ದೇವನಲಿ ಲೇಶ ಭಕುತಿಯು ಕಾಣೆ'' ಮುಂತಾದ ಹಾಡುಗಳಲ್ಲಿ ಈ ಭಾವ ವ್ಯಕ್ತವಾಗಿದೆ. 'ಕೃಷ್ಣಗಾಥೆ'ಯ ಕೊನೆಯ ಭಾಗದಲ್ಲಿ ಕವಿಯು ಮರಣಾನಂತರ ವೈಷ್ಣವ ದೂತರು ತನ್ನನ್ನು ವೈಕುಂಠಕ್ಕೆ ಕರೆದುಕೊಂಡುಹೋಗಿ ಭಗವಂತ ನಿಗೆ ''ಇವನು ಪಾಪಿಗಳನ್ನು ಗಾನದಿಂದ ಶುದ್ಧಗೊಳಿಸಿದವನು ; ಗಾನದಿಂದ ಭಕ್ತರ ಮನಸ್ಸನ್ನು ತಂಪಾಗಿಸಿದವನು ; ಗಾಥೆಯನ್ನು ಬರೆದ ಅವನನ್ನು ನಿಮ್ಮ ದಾಸನಾಗಿ ಮಾಡಿಕೊಳ್ಳಬಹುದು ಎನ್ನುವರು'' ಎಂಬುದಾಗಿ ಕವಿ ತನ್ನ ಮೋಕ್ಷಪ್ರಾಪ್ತಿಯನ್ನು ಕಲ್ಪಿಸಿಕೊಂಡಿರುವನು. ಬಳಿಕ ಹರಿಯು ಕವಿಯ ಮುಖವನ್ನು ನೋಡಿ ಸಂಜ್ಞೆ ಮಾಡಿದಂತೆಯೂ ತಕ್ಷಣ ತಾನು ಆ ಪಾದ ಗಳನ್ನು ತನ್ನ ಎದೆಯ ಮೇಲೆ ಜೋಡಿಸಿಕೊಂಡಂತೆಯೂ ಆನಂದಬಾಷ್ಪದಲ್ಲಿ ಆ ಪಾದಗಳನ್ನು ಮುಳುಗಿಸಿದಂತೆಯೂ ಹಿಂದೆ ಕೃಷ್ಣಗಾಥೆಯಲ್ಲಿ ತಾನು ವರ್ಣಿಸಿದ್ದೆಲ್ಲ ನಿಜವೋ ಎಂಬುದನ್ನು ಪರೀಕ್ಷಿಸಲು ಆ ಪಾದಗಳನ್ನು ಸವರು ತ್ತಿರುವಂತೆಯೂ ಕಲ್ಪಿಸಿಕೊಂಡಿರುವನು. ಹೀಗೆ ಭಗವದ್ ಸಾಯುಜ್ಯದ 'ಆನಂದ ಮೂರ್ಛೆ'ಯಲ್ಲಿ 'ಕೃಷ್ಣಗಾಥೆ' ಕೊನೆಗೊಳ್ಳುತ್ತದೆ. ಮತ್ತು ಪಂಚ ಭಾವಗಳು ಭಕ್ತಿಸ್ವರೂಪದ ವಿಶ್ಲೇಷಣೆಯಲ್ಲಿ ಅಡಗದೆ ಕಾವ್ಯದ ಒಟ್ಟು ರಸಾಸ್ವಾದನೆಯಲ್ಲಿಯೂ ಪ್ರಚೋದಕಶಕ್ತಿಯಾಗಿ ಉಳಿದಿವೆ.

೧೬ನೆ ಶತಮಾನದ ಭಕ್ತಕವಿ ಎಳುತ್ತಚ್ಚನ್‌ರ ಕಾಲಕ್ಕೆ ಕೇರಳದಲ್ಲಿ ಭಕ್ತಿಚಳುವಳಿಯು ಪರಮೋನ್ನತಸ್ಥಿತಿಯನ್ನು ಮುಟ್ಟಿತ್ತು. ಅವರು ಬಳಸಿದ ಕಾವ್ಯಶೈಲಿ ಕಿಳಿಪಾಟ್ಟು.ಅಧ್ಯಾತ್ಮದಲ್ಲಿ ಬೆರೆತ ಭಕ್ತಿಯೇ ಕಿಳಿಪ್ಪಾಟ್ಟು ಶೈಲಿಯ ಆಂತರಿಕ ಸತ್ವ. ಆ ಕಾಲದ ಸಾಮಾಜಿಕ-ಸಾಂಸ್ಕೃತಿಕ ವಾತಾವರಣದ ವಿಶೇಷ ಪರಿಸ್ಥಿತಿಯಲ್ಲಿ ಭಕ್ತಿಚಳುವಳಿ ಅಗತ್ಯವಾಯಿತು.

ಪುರಂದರದಾಸರಂತೆ ಎಳುತ್ತಚ್ಚನ್ ಕೂಡ ಸಂಕೀರ್ಣವಾದ ಸಾಮಾ ಜಿಕ ಪರಿಸ್ಥಿತಿಗಳನ್ನು ಎದುರಿಸಬೇಕಾಗಿತ್ತು. ರಾಜಕೀಯ ಅಸ್ಥಿರತೆ, ನೈತಿಕ ಮೌಲ್ಯಗಳ ಪತನ, ಸಾಂಸ್ಕೃತಿಕ ಅವನತಿ, ವಿದೇಶೀಯರಿಂದ ಮತಪರಿವರ್ತ ನೆಯೇ ಮೊದಲಾದ ತೊಂದರೆಗಳಿಂದ ಜನಜೀವನ ಅಸ್ತವ್ಯಸ್ತವಾಗುವ ಸ್ಥಿತಿ ಬಂದಿತ್ತು. ಧರ್ಮ, ಸಮಾಜ ಮತ್ತು ಸಂಸ್ಕೃತಿಗಳ ರಕ್ಷಣೆ ಭಾವೋದ್ದೀಪನದ ಮೂಲಕ ಮಾತ್ರ ಸಾಧ್ಯ ಎಂಬ ತಿಳುವಳಿಕೆ ಬುದ್ಧಿಜೀವಿಗಳಲ್ಲಿ ಉಂಟಾಗಿತ್ತು. ಅದಕ್ಕಾಗಿ ಭಕ್ತಿಯನ್ನು ಒಂದು ಅಸ್ತ್ರವಾಗಿ ಬಳಸಿದರು. ಇದರಿಂದ ಈ ಕಾಲ ದಲ್ಲಿ ಭಕ್ತಿಚಳುವಳಿ ಹೆಚ್ಚು ಪ್ರಾಮುಖ್ಯತೆ ಪಡೆಯಿತು. ಜೀವನಮೌಲ್ಯ ಗಳನ್ನು ಕಾಪಾಡಲು ಈ ಕವಿ ನಡೆಸಿದ ಹೋರಾಟ ಅವರ ಬರಹಗಳಲ್ಲಿ ವ್ಯಕ್ತ ವಾಗಿದೆ. ಹಲವಾರು ಸಂದರ್ಭಗಳಲ್ಲಿ ಕವಿ ಸೈನಿಕನಾಗುತ್ತಾನೆ. ಇನ್ನೊಮ್ಮೆ ನಾಯಕ ಪ್ರಚಾರಕ ಮತ್ತು ಆಚಾರ್ಯ ಮುಂತಾದ ವಿವಿಧ ರೂಪಭಾವ

ಗಳನ್ನು ಪಡೆದು ಅವನು ಸಮಾಜಕ್ರಾಂತಿಯಲ್ಲಿ ಭಾಗವಹಿಸುತ್ತಾನೆ. ಎಳುತ್ತಚ್ಚನರಲ್ಲಿಯೂ ಈ ಗುಣಗಳೆಲ್ಲವನ್ನೂ ಕಾಣಬಹುದು. ಅವರನ್ನು 'ಸಾಧಾರಣ ಕವಿ' ಎಂದು ಭಾವಿಸದೆ ಋಷಿ ಸಮಾನರಾದ ಒಬ್ಬ ಆಚಾರ್ಯರೆಂದು ಗಣಿಸಿರುವುದು ಅವರ ಈ ವಿಶಿಷ್ಟ ಗುಣಗಳಿಂದ ಎಂಬುದರಲ್ಲಿ ಸಂದೇಹವಿಲ್ಲ.

ಅಧ್ಯಾತ್ಮರಾಮಾಯಣಂ ಕಿಳಿಪ್ಪಾಟ್ಟು ಮತ್ತು ಭಾರತಂ ಕಿಳಿಪ್ಪಾಟ್ಟು ಎಳುತ್ತಚ್ಚನ್ನರ ಮುಖ್ಯ ಕೃತಿಗಳು. ಈ ಎರಡು ಕಾವ್ಯಗಳಲ್ಲಿಯೂ ಕಥೆಯನ್ನು ಗಿಣಿಯ ಮೂಲಕ ಚಿತ್ತರಿಸಲಾಗಿದೆ. ಪ್ರಸಿದ್ಧವಾದ ವಾಲ್ಮೀಕಿ ರಾಮಾಯಣದ ಪರಿಚಯ ಇದ್ದರೂ ಎಳುತ್ತಚ್ಚನರು ಅಧ್ಯಾತ್ಮ ರಾಮಾಯಣವನ್ನು ಆರಿಸಿದ್ದೇಕೆಂಬುದು ಚರ್ಚೆಯ ವಿಷಯವಾಗಿದೆ. ಅಧ್ಯಾತ್ಮ ರಾಮಾಯಣ ಕಾವ್ಯವು ಭಕ್ತಿ ಮತ್ತು ತತ್ತ್ವೋಪದೇಶಗಳಿಗೆ ವಿಶಿಷ್ಟಸ್ಥಾನವನ್ನು ಕೊಟ್ಟಿದೆ. ಪ್ರಾಪಂಚಿಕ ಜೀವನದ ಲೌಕಿಕ ಸುಖಾಪೇಕ್ಷೆಯನ್ನು ಕಡೆಗಣಿಸಿ ನಶ್ವರತೆ ಹಾಗೂ ಮೃತ್ಯುವಿನ ಅನಿವಾರ್ಯತೆಯನ್ನು ಎತ್ತಿಹಿಡಿದಿರುವ ಅಧ್ಯಾತ್ಮರಾಮಾಯಣ ಮಹಾಭಾರತಕ್ಕಿಂತ ಪರಿಣಾಮಕಾರಿ ಯಾದ ಕಾವ್ಯ ಎಂಬುದನ್ನು ಎಳುತ್ತಚ್ಚನ್ ಮನಗಂಡು ತಮ್ಮ ಕೃತಿರಚಿಸಿರುವರೆಂದೆನಿಸುತ್ತದೆ.

ಪುರಂದರದಾಸರು ಮತ್ತು ಎಳುತ್ತಚ್ಚನರ ಜೀವನದೃಷ್ಟಿ ವೇದೋಪನಿಷತ್ತುಗಳ ಸಂಸ್ಕೃತಿಯಲ್ಲಿ ಅಡಕವಾಗಿದೆ. ಅವರಿಬ್ಬರು ಒತ್ತಿ ಹೇಳಿದ ಲೋಕನೀತಿಗಳು ಭಾರತೀಯರೆಲ್ಲರಿಗೂ ಸಮ್ಮತವಾದವುಗಳೇ. ಒಬ್ಬೊಬ್ಬರೂ ಆ ಕಾಲ ದೇಶಕ್ಕನುಗುಣವಾಗಿ ಸೂಕ್ತವಾದ ರೀತಿಯಲ್ಲಿ ಅವುಗಳನ್ನು ಬಳಸಿಕೊಂಡರು. ಮನುಷ್ಯಜೀವನದ ಕ್ಷಣಿಕತೆಯ ಬಗ್ಗೆ ಎಳುತ್ತಚ್ಚನ್‌ರ ಅಭಿಪ್ರಾಯ ಹೀಗಿದೆ :

ಭೋಗಙ್ಙಳೆಲ್ಲಾಂ ಕ್ಷಣ ಪ್ರಭಾಚಂಚಲಂ
ವೇಗೇನ ನಷ್ಟಮಾಮಾಯುಸ್ಸು ಮೋರ್ಕ್ಕಸೀ[1]

ನೀರ್ಪೋಳ ಪೋಲೆ ಶರೀರಙ್ಙಳಿಙ್ಙನೆ
ಪಾಯ್ಪೋಟು ಕಾಣಾಂ ಮರಯುಂ ಪುನರಪ[2]

---

[1] ಭೋಗವು ಮಿಂಚಿನಂತೆ ಚಂಚಲ, ಅದರಂತೆ ಜೀವನವೂ ಬೇಗ ನಷ್ಟವಾಗುತ್ತದೆ. –ಅಧ್ಯಾತ್ಮ ರಾಮಾಯಣ ಕಿಳಿಪ್ಪಾಟ್ಟು, ಎಳುತ್ತಚ್ಚನ್.

[2] ಜೀವ ಎಂದರೆ ನೀರಿನ ಗುಳ್ಳೆಗಳಂತೆ. ಒಂದು ಕ್ಷಣ ಕಾಣುತ್ತದೆ. ಮುಂದೆ ಕಾಣುವುದಿಲ್ಲ –ಮಹಾಭಾರತಂ ಕಿಳಿಪಾಟ್ಟು, ಎಳುತ್ತಚ್ಚನ್.

ಇದೇ ಕಲ್ಪನೆ "ವಿರಮಿಸಸಂಸಾರ ನೀರ ಮೇಲಣ ಗುಳ್ಳೆ ನಿಜವಲ್ಲ" ಮತ್ತು "ಬರಿದೆ ನೀ ಬಯಸದಿರು ಇಹಲೋಕವೆಂಬ ಅರಗಿನ ಪಾಯಸವ" ಮುಂತಾದ ದಾಸೋಕ್ತಿಗಳಲ್ಲೂ ಧ್ವನಿತವಾಗಿದೆ. ಪುರಂದರದಾಸರ "ನಾಗ ಹೆಡೆ ನೆರಳಲ್ಲಿ ನಡುಗೋ ಕಪ್ಪೆಯರೀತಿ ಕೂಗಿ ಚೀರಿದರೆ ನೀನಾಗ ಕೇಳು ವರೆ" ಎಂಬ ಹಾಡಿನ ಅಭಿಪ್ರಾಯವೇ "ಇಷ್ಟವನ್ನು ಹೇಳುವ ನೆಂಟರು ಕಷ್ಟಕಾಲದಲ್ಲಿ ಇರುವುದಿಲ್ಲ ಎಂಬುದು ನಿಶ್ಚಯ" ಎಂಬ ಎಳುತ್ತಚ್ಚನ್ ಮಾತುಗಳಲ್ಲಿಯೂ ಕಂಡುಬರುತ್ತದೆ. ಅಧ್ಯಾತ್ಮರಾಮಾಯಣದಲ್ಲಿ ಮೃತ್ಯುವಿನ ಸಾಮೀಪ್ಯದಲ್ಲೂ ಮನುಷ್ಯನಿಗಿರುವ ಸುಖ ಭೋಗಾಪೇಕ್ಷೆಯನ್ನು ಎಳುತ್ತಚ್ಚನ್ ವಿಶದಪಡಿಸಿದ್ದಾರೆ: "ಹಾವಿನ ಬಾಯೊಳಗೆ ಕುಳಿತ ಕಪ್ಪೆಯು ಭಕ್ಷ್ಯವನ್ನು ತಿನ್ನಲು ಅಪೇಕ್ಷಿಸುವ ತೆರನಂತೆ."

ಎಳುತ್ತಚ್ಚನ್ನರ ಮತ್ತೊಂದು ಕೃತಿ 'ಭಾರತಂ ಕಿಳಿಪ್ಪಾಟ್ಟು' ಭಕ್ತಿ ಪ್ರಧಾನವಾದ ಕಾವ್ಯ. ಕೃಷ್ಣನನ್ನು ಕಾವ್ಯದ ಕೇಂದ್ರ ಪಾತ್ರವಾಗಿ ಕವಿ ಪರಿಭಾವಿಸಿದ್ದಾರೆ. ಮಹಾಭಾರತದ ಎಲ್ಲಾ ಪರ್ವಗಳೂ ಸ್ತುತಿಗಳಿಂದ ಆರಂಭವಾಗುತ್ತವೆ. ಇವುಗಳ ಮೂಲಕ ಕೃಷ್ಣಭಕ್ತಿಯನ್ನು ಪ್ರಚಾರಪಡಿಸುವುದು ಎಳುತ್ತಚ್ಚನ್ನರ ಗುರಿ.ಸಭಾಪರ್ವದಲ್ಲಿ ಗಿಣಿ ಹೀಗೆ ಹಾಡುತ್ತದೆ: "ಭಗವಂತನ ಭಕ್ತರ ಕಥೆ, ಭಗವಂತನ ಕಥೆ ಮತ್ತು ನಾಮಸಂಕೀರ್ತನೆ ಇತ್ಯಾದಿಗಳನ್ನು ಕೇಳಿ ಮತ್ತು ಧ್ಯಾನಿಸಿ ಇರುವಷ್ಟು ಕಾಲ ಪರಮಾನಂದದಿಂದ ಕಳೆಯುವುದೇ ವಾಸಿ". ನಂತರ ವಿರಾಟಪರ್ವದಲ್ಲಿ "ನಾರಾಯಣ ನಾಮಾಮೃತವನ್ನು ಆಸ್ವಾದಿಸದೆ ಇರುವವರು ಅಧಮರು" ಎಂದು ನಾಮಸಂಕೀರ್ತನದ ಮಹಾತ್ಮೆಯನ್ನು ಎತ್ತಿ ಹಿಡಿಯುತ್ತಾರೆ. ಪುರಂದರದಾಸರ ಕೃತಿಗಳಲ್ಲೂ ನಾಮಸ್ಮರಣೆ ಮತ್ತು ಸಂಕೀರ್ತನೆಗಳಿಗೆ ಪ್ರಾಶಸ್ತ್ಯವಿದೆ. "ನಾಮಸ್ಮರಣೆಯೊ ಭಕ್ತನ ಪರಮ ಸಾಧನೆ"; "ನಿನ್ನ ನಾಮವು ಎನಗೆ ಅಮೃತಾನ್ನವು ಇನ್ನು ಹಸಿವಿರಲೇಕೆ"; "ಹರಿಸ್ಮರಣೆ ಮಾಡೋ ನಿರಂತರ ಪರಗತಿಗೆ ಇದು ನಿರ್ಧಾರ" ಮುಂತಾದ ಹಾಡುಗಳಲ್ಲಿ ನಾಮಸಂಕೀರ್ತನದ ಮಹತ್ವ ಸ್ಪಷ್ಟವಾಗುತ್ತದೆ.

ಎಳುತ್ತಚ್ಚನ್ನರ ಕಾವ್ಯಗಳನ್ನು ಸಮೀಕ್ಷಿಸುವಾಗ ಅವರು ವೈಷ್ಣವರೆಂಬ ಸಂದೇಹ ಉಂಟಾಗುತ್ತದೆ. ಆದರೆ ಅವರ ಕಾವ್ಯಗಳಲ್ಲಿ ವಿಷ್ಣು ಮತ್ತು ಶಿವರನ್ನು ಕುರಿತ ಅಭೇದಕಲ್ಪನೆಯಿದೆ. ದ್ರೋಣಪರ್ವದಲ್ಲಿ ಶಿವ ಅರ್ಜುನನಿಗೆ ಪಾಶುಪತವನ್ನು ಕೊಡುವ ಸಂದರ್ಭದಲ್ಲಿ ಇದು ವ್ಯಕ್ತವಾಗುತ್ತದೆ. ಶಿವನನ್ನು ವಂದಿಸುವ ಅರ್ಜುನನು ಒಂದು ಅದ್ಭುತ ದೃಶ್ಯವನ್ನು ನೋಡುವನು. ತಾನು ವಿಷ್ಣುವಿನ ಅಡಿಗಳಲ್ಲಿ ಅರ್ಪಿಸಿದ ಪುಷ್ಪಗಳನ್ನು ಶಿವನ ಶಿರಸ್ಸಿನಲ್ಲಿ ಕಂಡು ಗಾಬರಿಗೊಂಡನು. ಅನಂತರ ಕವಿ ಮುಂದುವರಿದು "ನೋಡಿದವರೆಲ್ಲ

ಎರಡನ್ನಾಗಿ ವಿವರಿಸುವರು. ಆದರೆ ಅವರು ನಿಜವಾಗಿ ನೋಡಿದವರಲ್ಲ'' ಎನ್ನುವರು. ಎಳುತ್ತಚ್ಚನ್ನರ 'ಹರಿನಾಮಕೀರ್ತನ'ದಲ್ಲಿಯೂ ಇದೇ ಭಾವ ಕಾಣುತ್ತದೆ. ಈ ಮನೋಭಾವವನ್ನು ದಾಸಪಂಥದಲ್ಲಿ ಕನಕದಾಸರ 'ಮೋಹನ ತರಂಗಿಣಿ'ಯಲ್ಲಿಯೂ ಕಾಣಬಹುದು.

ಎಳುತ್ತಚ್ಚನ್ನರೂ ಪುರಂದರದಾಸರಂತೆ ಭಾರತದ ಅನೇಕ ಪುಣ್ಯಸ್ಥಳ ಗಳನ್ನು ಸಂದರ್ಶಿಸಿದವರು. ಕಾಶಿ, ರಾಮೇಶ್ವರ, ಶ್ರೀರಂಗ, ಕುಂಭಕೋಣ, ಗೋಕರ್ಣ ಮುಂತಾದ ಸ್ಥಳಗಳ ವರ್ಣನೆಗಳನ್ನು ಅವರ ಕೃತಿಗಳಲ್ಲಿ ಕಾಣ ಬಹುದು. (ತೆಲುಗು ಮತ್ತು ತಮಿಳು ಭಾಷೆಗಳನ್ನು ಬಲ್ಲ ಅವರು ತಮಿಳಿ ನಿಂದ ಅನುವಾದಿಸಿದ 'ಕೈವಲ್ಯನವನೀತಂ' ಎಂಬ ಕೃತಿಯಲ್ಲಿ ತಿರುಪತಿಯ ವೆಂಕಟೇಶ್ವರನನ್ನು ಸ್ತುತಿಸಿದ್ದಾರೆ.) ಅವರು ಭಾರತೀಯ ಸಂಸ್ಕೃತಿಯ'ಏಕತ್ವ' ವನ್ನು ಈ ಪ್ರವಾಸಗಳಿಂದ ಕಂಡುಕೊಂಡರು. ಸಾಂಸ್ಕೃತಿಕ ಕ್ರಾಂತಿಗಾಗಿ ದುಡಿ ಯುವ ಪ್ರತಿಭಾವಂತರು ತಮ್ಮನಾಡಿನ ಸಣ್ಣ ವೃತ್ತದಲ್ಲಿ ಅಡಗದೆ ವೈಶಾಲ್ಯಕ್ಕೆ ಸರಿಯುವುದು ಸಹಜ. ಪುರಂದರದಾಸರ ಕೃತಿಗಳಲ್ಲಿಯೂ ಭಾರತದ ಅನೇಕ ತೀರ್ಥಕ್ಷೇತ್ರಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ನಾಡಿನ ಸಾಂಸ್ಕೃತಿಕ ಪುನರು ಜ್ಜೀವನದಲ್ಲಿ ಭಾಗವಹಿಸಿದ ಈ ಇಬ್ಬರು ಕವಿಗಳಿಗೆ ಈ ಪ್ರವಾಸದ ಅನುಭವ ಗಳು ಸ್ಫೂರ್ತಿಯನ್ನು ನೀಡಿರಬಹುದು.

ಹರಿದಾಸರಲ್ಲಿ ಕಂಡುಬರುವಂಥ ಗುರುಶಿಷ್ಯ ಪರಂಪರೆ ಕೇರಳದಲ್ಲಿ ಇಲ್ಲ. ಆದರೂ ಚೆರುಶ್ಶೇರಿ ಮತ್ತು ಎಳುತ್ತಚ್ಚನ್ನರನ್ನು ಗುರುವಾಗಿ ಭಾವಿಸಿಕೊಂಡು ಅದೇ ಭಕ್ತಿಮಾರ್ಗವನ್ನು ಅನುಸರಿಸಿದವರು ಪೂಂತಾನಂ ನಂಪೂತಿರಿ. ಅವರ ಕಾವ್ಯಸಾಧನೆಯನ್ನು ಕುರಿತು ಪ್ರಸಿದ್ಧ ವಿಮರ್ಶಕರಾದ ಉಳ್ಳೂರರ ಹೇಳಿಕೆ ಇಂತಿದೆ: ''ಪೂಂತಾನಂಗೆ ದೊಡ್ಡ ಕಲ್ಪನೆಗಳಿಲ್ಲ, ಅರ್ಥಾ ಲಂಕಾರಗಳಿಲ್ಲ, ಅಚ್ಚುಕಟ್ಟಾದ ರಚನೆಯಿಲ್ಲ, ಆದರೂ ಸ್ವಚ್ಛವಾದ ಭಕ್ತಿ ಮಂದಾಕಿನಿಯ ಪ್ರಸನ್ನ ಪ್ರವಾಹದಲ್ಲಿ ಸಕಲ ನ್ಯೂನತೆಗಳು ಮುಚ್ಚಿ ಹೋಗು ತ್ತವೆ.''[1] ನಿಷ್ಕಳಂಕವಾದ ಭಕ್ತಿಯೇ ಅವರನ್ನು ಕವಿಯಾಗಿ ಮಾರ್ಪಡಿಸಿದ್ದು. ಕೃಷ್ಣನ ನಾಮವನ್ನು ಸದಾ ಜಪಿಸಿ, ಧ್ಯಾನಿಸಿ ಕಾಲ ಕಳೆದ ಪುಣ್ಯಾತ್ಮವೇ ಪೂಂತಾನಂ. ಪುರಂದರದಾಸರಿಗೆ ಉಡುಪಿಯ ಕೃಷ್ಣನಿದ್ದ ಹಾಗೆ ಪೂಂತಾನಂಗೆ ಗುರುವಾಯೂರಿನ ಕೃಷ್ಣ. ಇವರಿಬ್ಬರ ನಡುವೆ ಇದ್ದ ಆಳವಾದಸಂಬಂಧ ಗಳನ್ನು ಕುರಿತು ಅನೇಕ ದಂತಕಥೆಗಳು ಕೇರಳದಲ್ಲಿ ಪ್ರಚಲಿತವಾಗಿವೆ.

ಮಕ್ಕಳಿಲ್ಲದ ಪೂಂತಾನಂ ಕೃಷ್ಣನನ್ನು ಸೇವಿಸಿ 'ಸಂತಾನಗೋಪಾಲಂ' ಎಂಬ ಕಾವ್ಯರಚನೆ ಮಾಡಿದ ಮೇಲೆ ಅವರಿಗೆ ಒಬ್ಬ ಮಗ ಹುಟ್ಟಿದನು.

---

1 ಉಳ್ಳೂರ್—ಕೇರಳ ಸಾಹಿತ್ಯ ಚರಿತ್ರೆ. ಸಂಪುಟ 2

ಬಹು ಕಾಲದ ಮೇಲೆ ಹುಟ್ಟಿದ ಆ ಮಗು ಸ್ವಲ್ಪ ದಿನಗಳ ಬಳಿಕ ಸತ್ತು ಹೋಯಿತು. ಪುತ್ರನ ಮೃತದೇಹವನ್ನು ಅಪ್ಪಿಕೊಂಡಾಗ ಹೃದಯದಿಂದ ಹರಿದು ಬಂದ ಪ್ರಲಾಪವೇ 'ಜ್ಞಾನಪ್ಪಾನ್' ಕಾವ್ಯವಾಗಿ ಪರಿಣಮಿಸಿದೆ. ಮನುಷ್ಯ ಸಹಜವಾದ ಆ ಪ್ರಲಾಪ :

ಉಣ್ಣಿಕೃಷ್ಣನ್ ಮನಸ್ಸಿಲ್ ಕಳಿಕ್ಕುಂಪೋಳ್
ಉಣ್ಣಿಕಳ್ ಮಟ್ಟು ವೇಣಮೋ ಮಕ್ಕಳಾಯ್[1]

ಎಂಬ ಜ್ಞಾನೋದಯದಲ್ಲಿ ಕೊನೆಗೊಳ್ಳುತ್ತದೆ. ಪುರಂದರದಾಸರು ಒಂದು ಮಗುವಿನ ದಿನಚರಿಯನ್ನು ಕಂಡು ಕೃಷ್ಣನನ್ನು ಒಂದು ಮಗುವೆಂದು ಭಾವಿಸಿರುವುದನ್ನು ಇಲ್ಲಿ ನೆನೆಯಬಹುದು. ಹೀಗೆ ಪೂಂತಾನಂ ನಂಪೂತಿರಿಯ ಎರಡು ಕೃತಿಗಳೂ ವೈಯಕ್ತಿಕಾನುಭವದ ತೀವ್ರತೆಯನ್ನು ಒಳಗೊಂಡಿವೆ. ಜೊತೆಗೆ ಧರ್ಮಾಧರ್ಮವಿವೇಚನೆಯಿಲ್ಲದೆ ಅಜ್ಞಾನ ದುರಂತಗಳಲ್ಲಿ ಮುಳುಗಿರುವ ಸಮಾಜದ ಚಿತ್ರಣವನ್ನು ಕೂಡ ಅಲ್ಲಿ ಕಾಣಬಹುದು.

ಜೀವನದ ಅಸಾರತೆಯನ್ನು ತಿಳಿಯದೆ ಪಾಂಡಿತ್ಯ ಮತ್ತು ಶ್ರೀಮಂತಿಕೆಯಿಂದ ಉನ್ಮತ್ತರಾಗಿ ಕಾಲಕಳೆಯುವ ಉನ್ನತವರ್ಗದವರನ್ನು ಪೂಂತಾನಂ ಟೀಕಿಸಿದ್ದಾರೆ. ಎಲ್ಲದಕ್ಕೂ ಆಸೆಯೇ ಮೂಲಕಾರಣ ಎಂಬುದನ್ನು ಅವರು ಸಮರ್ಥಿಸಿದರು. ನಾಮಸಂಕೀರ್ತನದ ಮಾಹಾತ್ಮ್ಯವನ್ನು ಪೂಂತಾನಂ ತಮ್ಮ ಕೃತಿಗಳಲ್ಲಿ ಒತ್ತಿ ಹೇಳಿದರು. ''ನರಜನ್ಮದ ಸಾಫಲ್ಯಕೆ ಕೃಷ್ಣನಾಮವು ನಾಲಿಗೆಯಲ್ಲಿರಬೇಕು'' ''ಕೃಷ್ಣನಾಮವು ನಾಲಿಗೆಯಲ್ಲಿರುವಾಗ, ಅಥವಾ ಕಿವಿಯಿಂದ ಕೇಳುವಾಗ ಬ್ರಹ್ಮಸಾಯುಜ್ಯವು ಲಭಿಸುತ್ತದೆ'' ಮುಂತಾದ 'ಜ್ಞಾನೋಪಾಸನೆ'ಯ ಸಾಲುಗಳನ್ನು ಸ್ಮರಿಸಬಹುದು. ''ನರಜನ್ಮ ಬಂದಾಗ, ನಾಲಿಗೆಯಿರುವಾಗ ಕೃಷ್ಣಾ ಎನಬಾರದೆ'' ಮತ್ತು ''ಕಲಿಯುಗದಲ್ಲಿ ಗಾನ ಮತ್ತು ದಾನವೇ ಮುಕ್ತಿ'' ಎಂಬುದಾಗಿಯೂ ಪುರಂದರದಾಸರು ಹಾಡಿದರು. ಇದೇ ಅಭಿಪ್ರಾಯ ಪೂಂತಾನರವರ ''ನಾಲ್ಕು ಯುಗಗಳಲ್ಲಿ, ಸುಲಭವಾಗಿ ಮುಕ್ತಿಯನ್ನು ಪಡೆಯಲು ಕಲಿಯುಗವೇ ಉತ್ತಮ'' ಎಂಬ ಮಾತುಗಳಲ್ಲಿಯೂ ಇದೆ. ''ಈ ಯುಗದಲ್ಲಿ ಮೋಕ್ಷಪ್ರಾಪ್ತಿಗೆ ಸಂಕೀರ್ತನವಲ್ಲದೆ ಮತ್ತೊಂದರ ಅಗತ್ಯವಿಲ್ಲ. ಒಟ್ಟು ಪುರುಷಾರ್ಥಗಳು ಸಂಕೀರ್ತನದ ಮೂಲಕ ಸಫಲವಾಗುತ್ತವೆ'' ಎಂಬುದು ಅವರ ನಂಬಿಕೆ.

---

[1] ಪುಟ್ಟಕೃಷ್ಣನು ಮನಸ್ಸಿನಲ್ಲಿ ಕುಣಿದಾಡುವಾಗ ಸ್ವಂತ ಮಕ್ಕಳ ಅಗತ್ಯವೇಕೆ
—ಜ್ಞಾನಪ್ಪಾನ್. ಪೂಂತಾನಂ ನಂಪೂತಿರಿ.

ಹೀಗೆ ಆಧ್ಯಾತ್ಮಿಕ ಜೀವನದೃಷ್ಟಿಯುಳ್ಳವರಾಗಿದ್ದರೂ ಪುರಂದರ ದಾಸರು ಚೆರುಶ್ಯೇರಿ ಎಳುತ್ತಚ್ಛನ್ ಮತ್ತು ಪೂಂತಾನಂ ಮುಂತಾದವರು ಪ್ರಾಪಂಚಿಕ ಜೀವನವನ್ನು ನಿರಾಕರಿಸಿದವರಲ್ಲ. "ಮಾನವ ಜನ್ಮ ದೊಡ್ಡದು, ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಮತ್ತು "ಉದಯಾಸ್ತ ಮಾನವೆಂಬ ಕೊಳಗವಿಟ್ಟು ಆಯುಸ್ಸು ಎಂಬೋ ರಾಶಿ ಅಳೆದು ಹೋಗದ ಮುನ್ನ ಹರಿಯ ಭಜಿಸಬೇಕು" ಮುಂತಾದ ಹಾಡುಗಳಲ್ಲಿ ಜೀವನದ ಸಾರ್ಥಕ್ಯದ ಬಗ್ಗೆ ತಿಳಿಸಿದ್ದಾರೆ. ಚೆರುಶ್ಯೇರಿ "ಜನ್ಮವೆಂಬ ಸಮುದ್ರದಲ್ಲಿ ದಡವನ್ನು ಕಾಣದೇ ಮುಳುಗಿ ನಡುಗುವಾಗ ನಿನ್ನ ಚರಣಗಳೇ ಶರಣ" ಎಂಬುದಾಗಿಯೂ "ಜನ್ಮವಿರುವಾಗ ಯಾವಾಗಲೂ ನಿನ್ನ ಪಾದಗಳು ನಮ್ಮ ತಲೆಯಲ್ಲಿರಬೇಕು" ಎಂಬುದಾಗಿಯೂ ಪರೋಕ್ಷವಾಗಿ ಮನುಷ್ಯಜನ್ಮದ ಸಾಫಲ್ಯದ ಬಗ್ಗೆ ಸೂಚಿಸಿದರು. ಎಳುತ್ತಚ್ಛನ್ ಕೂಡ ಜೀವನವನ್ನು ಪ್ರೀತಿಸಿ ಆದರಿಸಿದವರು. "ಮನುಷ್ಯಜನ್ಮ ದುರ್ಲಭ. ಈ ಜೀವನ ಅರ್ಥಪೂರ್ಣ ವಾಗಬೇಕಾದರೆ ಮನಸ್ಸನ್ನು ಮಾಯಾಮೋಹಗಳಿಂದ ವಿಮುಕ್ತಗೊಳಿಸಬೇಕು" ಎಂಬುದಾಗಿ ಅವರು 'ಹರಿನಾಮಕೀರ್ತನ' ದಲ್ಲಿ ಹಾಡಿದರು. ಪೂಂತಾನಂ 'ಜ್ಞಾನಪ್ಪಾನ್' ಎಂಬ ಕೃತಿಯಲ್ಲಿ ಭೌತಿಕ ಜೀವನದ ಸಾರ್ಥಕತೆಯ ಬಗ್ಗೆ "ಹದಿನಾಲ್ಕು ಲೋಕಗಳಲ್ಲಿ ಭೂಮಿಯೇ ಹೆಚ್ಚು ಉತ್ತಮ, ಏಕೆಂದರೆ ಜನನ ಮತ್ತು ಮುಕ್ತಿಗೆ ಕಾರಣವಾದ ಕರ್ಮಗಳು ಭೂಮಿಯಲ್ಲಿ ಮಾತ್ರ ಸಾಧ್ಯ ವಾಗುತ್ತವೆ – ವಿಶೇಷವಾಗಿ ಮನುಷ್ಯಜನ್ಮದಲ್ಲಿ. ಹಕ್ಕಿ, ಮೃಗ ಇತ್ಯಾದಿ ಎಷ್ಟೋ ಜನ್ಮಗಳು ಕಳೆದ ಅನಂತರ ಸುಕೃತದ ಫಲವಾಗಿ ಮನುಷ್ಯ-ಜನ್ಮ ಲಭಿಸುತ್ತದೆ. ಆದರೂ ಆತ್ಮಜ್ಞಾನವನ್ನು ಪಡೆಯಲು ಯಾರೂ ಪ್ರಯತ್ನಿ ಸುವುದಿಲ್ಲ" ಎಂದು ಕವಿ ಆಶ್ಚರ್ಯಪಡುತ್ತಾರೆ.

ಮೇಲೆ ಹೇಳಿರುವ ಕವಿಗಳೆಲ್ಲರೂ ರಾಮಾಯಣ ಭಾರತ ಭಾಗವತ ಗಳನ್ನು ಆಧರಿಸಿ ಕಾವ್ಯರಚನೆಯಲ್ಲಿ ತೊಡಗಿದವರು. ವೈಷ್ಣವಭಕ್ತಿಯ ಪ್ರಚಾರಕರಾದ ಇವರು ಅಲ್ಲಲ್ಲಿ ವಿಷ್ಣುವಿನ ಸರ್ವೋತ್ತಮತ್ವವನ್ನು ಸೂಚಿಸಿ ದ್ದಾರೆ. ಸುಮಾರು ಇನ್ನೂರು ವರ್ಷದ ಅವಧಿಯ ಒಳಗೆ ಜೀವಿಸಿದ ಇವರ ಕಾವ್ಯಗಳಲ್ಲಿ ಸಮಾನಾಂಶಗಳಿದ್ದರೆ ಆಶ್ಚರ್ಯವಿಲ್ಲ. ಸಂಸ್ಕೃತಭಾಷೆಯನ್ನು ನಿರಾ ಕರಿಸಿ ಆಡುನುಡಿಯಲ್ಲಿ ಇವರ ಕಾವ್ಯಗಳೆಲ್ಲವೂ ರಚಿತವಾಗಿವೆ. ಭಕ್ತಿಚಳು ವಳಿಯ ಸಂದೇಶವನ್ನು ಸಾಮಾನ್ಯ ಜನರಿಗೆ ತಲುಪಿಸುವುದರಲ್ಲಿ ಇವರ ಭಾಷೆ ಶೈಲಿಗಳಿಗೆ ಮುಖ್ಯಪಾಲಿದೆ ಎಂಬುದು ಗಮನಾರ್ಹ. ಈ ಎಲ್ಲ ಕವಿಗಳೂ ಆಧ್ಯಾತ್ಮಿಕ ಪ್ರಗತಿಯ ಹಾದಿಯಲ್ಲಿ ಮಾನವ ಕಲ್ಯಾಣಕ್ಕಾಗಿ ದುಡಿದವರು. ಆದ್ದರಿಂದ ಅವರ ಪ್ರಭಾವ ನಾಡಿನ ಸಾಹಿತ್ಯಕ್ಷೇತ್ರದಲ್ಲಿ ಮಾತ್ರವಲ್ಲದೆ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಗಳಲ್ಲಿಯೂ ಉಳಿದಿದೆ.

# ಪುರಂದರದಾಸರು—ಮರಾಠೀಸಂತರು

—ಸೀತಾರಾಮ ಜಾಗೀರ್‌ದಾರ್

ಕನ್ನಡ, ಮರಾಠೀ— ಈ ಎರಡು ಭಾಷೆಗಳನ್ನು, ಅವುಗಳನ್ನು ಆಡುವ ಜನರನ್ನು, ನಾಡುಗಳನ್ನು ಗಮನಿಸಿದಾಗ ತುಂಬ ಹತ್ತಿರದ ಸಂಬಂಧವೂ ಇದೆ; ಆಶ್ಚರ್ಯಪಡುವಷ್ಟು ಅಂತರವೂ ಇದೆ. ಪ್ರಾಚೀನ ಕರ್ನಾಟಕ ದೇಶವನ್ನು ಜ್ಞಾಪಿಸಿಕೊಂಡರೆ ಇಂದಿನ ಮಹಾರಾಷ್ಟ್ರದ ಆಂಧ್ರದ ಬಹುಭಾಗ ಕರ್ನಾಟಕ ದಲ್ಲಿ ಅಂತರ್ಗತವಾಗಿತ್ತು. ಮರಾಠೀ ಭಾಷೆಯ 'ಅಕ್ಕಾ' 'ಅಣ್ಣಾ' ಇವುಗಳ ಮೂಲ ಕನ್ನಡದ 'ಅಕ್ಕ' 'ಅಣ್ಣ' ಶಬ್ದಗಳೇ. ಭಕ್ತಿರಸಗಂಗೆ ಭಾರತವನ್ನು ಒಂದಾಗಿಸಿದರೆ 'ವಿಠ್ಠಲಭಕ್ತಿ' ಕನ್ನಡ ಹಾಗೂ ಮರಾಠೀ ಭಾಷೆಗಳ ಸಂಬಂಧವನ್ನು ಒಂದಾಗಿಸುತ್ತದೆ.

ವಿಠ್ಠಲನನ್ನು ಬಿಟ್ಟರೆ (ವಿಷ್ಣುವನ್ನು ಬಿಟ್ಟರೆ)
ಅಲ್ಲಿ ಇಲ್ಲಿ
'ಹರಿಭಕ್ತಿ' ಶೂನ್ಯ : ●

'ಹರಿದಾಸ ಪಂಥ' ಇತ್ತೀಚಿನದು ಎಂದು ಒಂದು ನಂಬಿಕೆ. ಆದರೆ ಅದು ಸಾಕಷ್ಟು ಪುರಾತನವೆಂದು ದಾಖಲೆಗಳು ಸಾರುತ್ತವೆ. ವಚನಸಾಹಿತ್ಯ ದಲ್ಲಿಯೇ 'ದ್ವೈತಪಂಥ' 'ಹರಿಭಕ್ತಿ ಹಾಗೂ ಹರಿದಾಸ' ಇವುಗಳ ಉಲ್ಲೇಖ ದೊರೆಯುತ್ತದೆ. ಬಸವಣ್ಣ, ಆದಯ್ಯ ಮತ್ತು ಗುಪ್ತಭಕ್ತಿಯ ಮಂಚಣ್ಣ ನವರ ವಚನಗಳ ಸಾಲುಗಳನ್ನು ನೋಡಬಹುದು :

೧ ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ
೨ ದ್ವೈತಾದ್ವೈತಕ್ಕೆ ನಿಲುಕದ ನಿಜವ ಕಂಡವರಾರನೂ ಕಾಣೆ
೩ ಆನು ನಾಮದದಾಸನಲ್ಲದೆ ದಾಸೋಹದ ದಾಸನಲ್ಲ
ಹರಿಭಕ್ತನಲ್ಲದೆ, ಶಿವಭಕ್ತನಲ್ಲ

ಈ ಮೂರು ವಚನಗಳ ಸಾಲುಗಳಲ್ಲಿ ನಮಗೆ 'ದ್ವೈತ ಪಂಥ' ಹಾಗೂ 'ಹರಿ ದಾಸ ಪಂಥ' ಇವುಗಳು ಇದುವರೆಗೆ ತಿಳಿದಿರುವ ತಿಳುವಳಿಕೆಗಿಂತ ಪ್ರಾಚೀನ ವಾದುವು ಎಂಬುದು ಸುಸ್ಪಷ್ಟ. ಇವನ್ನು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿದ ಸಾಕಷ್ಟು ಹಸ್ತಪ್ರತಿಗಳ ಆಧಾರದಿಂದ ಸಿದ್ಧವಾದ ಗ್ರಂಥಗಳಲ್ಲೇ

ಕಾಣಬಹುದು[1]. ಗುಪ್ತಭಕ್ತ ಮುಂಚಣ್ಣ 'ನಾಮದೇವದಾಸ', ವಿಷ್ಣುಭಕ್ತ. ಆತ ಶಿವಭಕ್ತನಾದರೂ ತನ್ನ ದೀಕ್ಷಾಪೂರ್ವದ ದೈವವಾದ ವಿಷ್ಣುವಿನ ಪೂಜೆಯನ್ನು ಕೈಬಿಡಲು ಇಷ್ಟಪಡದೆ ಒಂದು ಸಮನ್ವಯ ದೃಷ್ಟಿಯನ್ನು ಮೆರೆದಿರುವುದು ನಮಗೆ ತುಂಬ ಸಹಾಯಕವಾಗಿದೆ. ಶ್ರೀಮನ್ ಮಧ್ವಾಚಾರ್ಯರಿಂದಲೇ ದ್ವೈತಮತ ಸ್ಥಾಪನೆಯಾಯಿತೆಂದು ಹೇಳುವುದಕ್ಕಿಂತ ಶ್ರೀಮದಾಚಾರ್ಯರಿಂದ ದ್ವೈತಸಂಪ್ರದಾಯ, ಯಾವುದು ಅನಾದಿಕಾಲದಿಂದ ನಡೆದು ಬಂದಿತ್ತೋ ಅದಕ್ಕೆ ಹೆಚ್ಚು ಪ್ರಸಾರ ಹಾಗೂ ಸುಭದ್ರ ಸ್ವರೂಪ ದೊರೆಯಿತೆಂದು ಹೇಳುವುದು ಹೆಚ್ಚು ಸಮಂಜಸವಾಗುತ್ತದೆ.

ಮಧ್ವಾಚಾರ್ಯರ ಕಾಲದ ಬಗ್ಗೆಯೂ ನಮಗೆ ಸರಿಯಾದ ತಿಳುವಳಿಕೆ ಇಲ್ಲ. ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಶಾಸನಾಧಾರಗಳನ್ನು ಎಂದರೆ ಸಮಕಾಲೀನ ದಾಖಲೆಗಳನ್ನು ಹಿಡಿದು ಸರಿಯಾದ ಅಧ್ಯಯನ ಇನ್ನೂ ಆಗಬೇಕಾಗಿದೆ. ನಮಗೆ ಪರಂಪರಾಗತ ಚರಿತ್ರೆಯಲ್ಲಿ ತಿಳಿದುಬಂದ ಸಂಗತಿ ಎಂದರೆ : ಮಧ್ವಾಚಾರ್ಯರ ಅನಂತರ ಧರ್ಮ ಹಾಗೂ ದ್ವೈತತತ್ವದ ಪ್ರಸಾರಕ್ಕಾಗಿ ಕ್ರಮವಾಗಿ ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು ಮತ್ತು ಅಕ್ಷೋಭ್ಯತೀರ್ಥರು ಅವರ ಧರ್ಮಸಿಂಹಾಸನವನ್ನು ಅಲಂಕರಿಸಿದರು. ಇವರಲ್ಲಿ ನರಹರಿತೀರ್ಥರು ಕ್ರಿ.ಶ. ೧೨೮೧ರಲ್ಲಿ ಶ್ರೀಮದಾಚಾರ್ಯರ ಪೀಠದಲ್ಲಿ ಇದ್ದರು[2].

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ೨೪ ನೆಯ ಶಾಸನದ ಪ್ರಕಾರ ಸುಲಭತೀರ್ಥರೆಂಬ (ಮಾಧ್ವ) ವೈಷ್ಣವ ಯತಿಗಳಿಗೆ ದತ್ತಿಕೊಟ್ಟ ಸಂಗತಿಯು ಬಂದಿದೆ. ಇದರ ಕಾಲ ಕ್ರಿ.ಶ. ೧೪೦೫ರ ಎಡಬಲ ಎಂಬುದನ್ನು ವಿದ್ವಾಂಸರು ಈಗಾಗಲೇ ನಿರ್ಧರಿಸಿದ್ದಾರೆ[3].

ಈ ಶಾಸನದ[4] ಪ್ರಕಾರ ಯತಿಗಳ ಪರಂಪರೆಯು ರೇಖೆಯಲ್ಲಿ ಹೀಗಿರುತ್ತದೆ :

---

[1] ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ 'ಬಸವಣ್ಣನವರ ವಚನಗಳು' 'ಆದಯ್ಯನ ವಚನಗಳು' ಮತ್ತು 'ಸಕಲ ಪುರಾತನರ ವಚನಗಳು' ಗ್ರಂಥಗಳನ್ನು ನೋಡಿ.

[2] ಎಪಿ. ಇಂಡಿ. ಸಂ. VI, ಶ್ರೀಕೂರ್ಮಶಾಸನ, ಪು. ೨೬೦

[3] ಕಪಟರಾಳ ಕೃಷ್ಣರಾವ್ ''ಕರ್ನಾಟಕ ಸಂಸ್ಕೃತಿಯ ಸಂಶೋಧನೆ'' ಪು. ೨೭೪

[4] ಎಪಿ.ಕ.ಸಂ. VIII (ಬಿ.ಎಲ್.ಆರ್.) ತೀರ್ಥಹಳ್ಳಿ – ೨೪

ನೀರೇಜನಾಭವ್ರತಿಪತಿ
|
ಮಾಧವಾರ್ಯ
|
ತ್ರೈಲೋಕ್ಯಭೂಷಣ
|
ಸುಲಭತೀರ್ಥ

ಮಾಧ್ವಮಠಗಳ ಯತಿಗಳ ಪರಂಪರೆಯನ್ನು ಪರಿಶೀಲಿಸಿದರೆ ನಮಗೆ ಈ ಯತಿಗಳಲ್ಲಿ ತ್ರೈಲೋಕ್ಯಭೂಷಣ ಹಾಗೂ ಸುಲಭತೀರ್ಥರು ಡಾ. ಬಿ. ಎನ್. ಕೆ. ಶರ್ಮರು ತಮ್ಮ ಕೃತಿ ದ್ವೈತದರ್ಶನದ ಇತಿಹಾಸದಲ್ಲಿ ಕೊಟ್ಟಿರುವ ಯತಿಗಳ ವಂಶವೃಕ್ಷಗಳಲ್ಲಿ ಕೂಡಲಿಮಠದ ಪೀಳಿಗೆಯಲ್ಲಿ ಕಂಡುಬರುತ್ತಾರೆ. ಶ್ರೀಯರುತರ ವಿವರಣೆ ಹೀಗಿದೆ :

ಅಕ್ಷೋಭ್ಯತೀರ್ಥರು (ಮರಣ : ೧೩೬೫)
|
ತ್ರೈಲೋಕ್ಯಭೂಷಣ
|
ಲೋಕವಂದಿತ
|
ಸುಲಭತೀರ್ಥರು[1]

ಶಾಸನವು ಇದರಿಂದ ಭಿನ್ನವಾಗಿದೆಯಲ್ಲದೆ ಅದರ ಪ್ರಕಾರ 'ನಿರೇಜನಾಭ ಯತಿಗಳು'; ಅವರ ಶಿಷ್ಯರು 'ಮಾಧವಾಚಾರ್ಯರು'; ಅವರ ಶಿಷ್ಯರು 'ತ್ರೈಲೋಕ್ಯಭೂಷಣರು'. ಪ್ರಸ್ತುತ ಶಾಸನದಲ್ಲಿ ಬಂದಿರುವ 'ಸುಲಭ ತೀರ್ಥರ' ಕಾಲ ಕ್ರಿ.ಶ. ೧೪೦೫ರಿಂದ ಹಿಂದಕ್ಕೆ ಲೆಕ್ಕವನ್ನು ಹಾಕಿ ತಲಾ ೩೦ ವರ್ಷದಂತೆ ಗಣಿಸಿದರೆ ೧೪೦೫–೧೨೦ = ೧೨೮೫ರಲ್ಲಿ ನೀರೇಜನಾಭರು ಇದ್ದರೆಂದು ಊಹಿಸಬೇಕಾಗಿದೆ. ಮಾಧ್ವಯತಿಗಳ ಪರಂಪರೆಯಲ್ಲಿ 'ಮಾಧ ವಾರ್ಯ' ಯತಿಗಳು ಸಾಕ್ಷಾತ್ ಶ್ರೀ ಮನ್ಮಧ್ವಾಚಾರ್ಯರ ಶಿಷ್ಯರೇ ಆದುದು ಲೋಕವಿಶ್ರುತ ಸಂಗತಿ. ಅವರು, ಮಧ್ವಾಚಾರ್ಯರ ಅನಂತರ ಪದ್ಮನಾಭ

[1] Dr. B.N.K. Sharma "History of the Dvaita School of Vedanta and Its Literature" (2nd Ed. 1981) p. 206

ತೀರ್ಥರು ಮತ್ತು ನರಹರಿತೀರ್ಥರು ಆನಕೂಡಲೆ ಆ ಧರ್ಮಸಿಂಹಾಸನವನ್ನು ಅಲಂಕರಿಸಿದುದಾಗಿ ತಿಳಿದು ಬಂದಿದೆ :

ಸುಗುಣ ನರಹರಿಶ್ರೀಮಾಧವಾಕ್ಷೋಭ್ಯರೂಪಾನ್
ಹರಿಭಜನ ನಿಯುಕ್ತಾನ್ ಶುದ್ಧ ಧರ್ಮಾರ್ಥಕಾಮಾನ್
ಸುಜನ ನಿಯಮನಾರ್ಥಂ ಯಃ ಪ್ರಸಾಧ್ಯಾಪರೋಕ್ಷಂ
ಸ ಭವತು ಮಮ ಭೂತ್ಯೈಪದ್ಮನಾಭಾಖ್ಯ ಯೋಗೀ[1]

ತೀರ್ಥಹಳ್ಳಿಯ ಶಾಸನದ ಪ್ರಕಾರ ನೀರೇಜನಾಭರ ಶಿಷ್ಯರು ಮಾಧವಾಚಾರ್ಯರು. ಇಲ್ಲಿ 'ನೀರೇಜನಾಭ' ಈ ಶಬ್ದವನ್ನು 'ಪದ್ಮನಾಭ' ಎಂಬ ಶಬ್ದದ ಇನ್ನೊಂದು ರೂಪ ಎಂದು ಸ್ವೀಕರಿಸಿದರೆ ಎಲ್ಲವೂ ಸರಿಹೋಗುತ್ತದೆ. ಸ್ಥೂಲವಾಗಿ ಕ್ರಿ.ಶ. ೧೨೮೫ರಲ್ಲಿ ನೀರೇಜನಾಭ ಅರ್ಥಾತ್ ಪದ್ಮನಾಭ ತೀರ್ಥರು ಇದ್ದುದು ಖಚಿತವಾಗುತ್ತದೆ. ಶ್ರೀಕೂರ್ಮದ ಶಾಸನದಲ್ಲಿ ನರಹರಿತೀರ್ಥರು ಈ ಕಾಲಕ್ಕೆ ಪೀಠದ ಮೇಲೆ ಇದ್ದುದೂ ಸ್ಪಷ್ಟವೇ ಇರುವುದರಿಂದ (ಕ್ರಿ. ಶ. ೧೨೮೧) ಪದ್ಮನಾಭರು ಅವರಿಗಿಂತ ಮುಂಚೆಯೇ ಪೀಠದ ಮೇಲೆ ಇದ್ದರೆಂದರೆ ತಪ್ಪಾಗುವುದಿಲ್ಲ. ಈ ದಿಶೆಯಲ್ಲಿ ನಮಗೆ ಬೇಲೂರ ಒಂದು ಶಾಸನವು ಕೈದೀವಿಗೆಯಾಗಿ ಬೆಳಕನ್ನು ಚೆಲ್ಲುತ್ತದೆ. ಆ ಶಾಸನದ ಪ್ರಕಾರ ಶಾ.ಶ. ೧೧೯೯, ಈಶ್ವರ ಸಂವತ್ಸರದ ಜ್ಯೇಷ್ಠ ಶು. ೫, ಆದಿತ್ಯವಾರದಂದು (ಕ್ರಿ.ಶ. ೧೨೭೭ರ ಮೇ ೯ರಂದು) ಮಹಾಪಸಾಯಿತ ಗೋಪಾಳದೇವಣ್ಣನ ಬಲುಮನುಷ್ಯ ಬೆಲುಹೂರ ಅಧಿಕಾರಿ ವಿಠಣ್ಣ ಗೋಪಣ್ಣಂಗಳು ಮೊದಲಾದವರು ಕಮಳನಾಭತೀರ್ಥರಿಗೆ ಯತಿಗಳ ಭಿಕ್ಷೆಗೆ ದಾನವನ್ನು ಕೊಟ್ಟಿದ್ದಾರೆ.[2] ಈ ಕಮಳನಾಭತೀರ್ಥರು 'ವಯಿಷ್ಣ'ವರಾಗಿದ್ದುದು ಶಾಸನದಲ್ಲಿ ಸ್ಪಷ್ಟವಿದೆ. ಎಲ್ಲ ಮಠಗಳ ಯತಿಪರಂಪರೆಗಳನ್ನು ಪರಿಶೀಲಿಸಿದರೆ ನಮಗೆ 'ಕಮಳನಾಭತೀರ್ಥ' ಇದು 'ನೀರೇಜನಾಭ' ಶಬ್ದದ ಹಾಗೆ ಪದ್ಮನಾಭತೀರ್ಥರನ್ನು ಸೂಚಿಸುವ ಇನ್ನೊಂದು ಶಬ್ದ, ಅಷ್ಟೇ. ಈ ಅರ್ಥವನ್ನು ಸ್ವೀಕರಿಸಿದರೆ ಶ್ರೀಮನ್ಮಧ್ವಾಚಾರ್ಯರ ಕಾಲಮಾನವೂ 'ಮಹಾಭಾರತತಾತ್ಪರ್ಯನಿರ್ಣಯ' ಗ್ರಂಥದಲ್ಲಿ ಕೊಟ್ಟುದಕ್ಕೆ ಸರಿಹೋಗುತ್ತದೆ. ಅವರು ಕ್ರಿ.ಶ.

---

[1] ರಘೂತ್ತಮತೀರ್ಥರು "ನ್ಯಾಯವಿವರಣ" ಪದ್ಯ—೪

[2] ಎಪಿ.ಕ.ಸಂ. V (ಬಿ.ಎಲ್.ಆರ್.) ಬೇಲೂರು—೫೩

೧೨೭೬ಕ್ಕೂ ಮುಂಚೆ ಇದ್ದರು. ದಿವಂಗತ ಆರ್.ಜಿ. ಭಂಡಾರ್‌ಕರ್ ಅವರ ನಿರ್ಣಯು ಕ್ರಿ.ಶ. ೧೧೯೭–೧೨೭೬ ಅತ್ಯಂತ ಸರಿಹೊಂದುತ್ತದೆ[1].

ಗುಪ್ತಭಕ್ತ ಮುಂಚಣ್ಣನ ವಚನದಿಂದ ಮಧ್ವಾಚಾರ್ಯರ ಪೂರ್ವದಲ್ಲಿಯೆ ಹರಿದಾಸ ಭಕ್ತಿಪಂಥ ಇತ್ತೆನ್ನುವುದು ಸ್ಪಷ್ಟವೇ ಇರುವಾಗ ಅದು ಹೇಗೆ ಇದ್ದಿತು ಎನ್ನುವುದು ಪ್ರಶ್ನೆಯುಪ್ಪು ಉತ್ತರಿಸಲು ಸುಲಭವಾದ ಸಂಗತಿಯುಲ್ಲ. ಅಂತೆಯೆ ಅದರ ಸ್ವರೂಪವನ್ನು ಸಂಶೋಧಿಸಿ ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ.''ವೈಷ್ಣವಗೀತಿಮನೋಹರರು'' ಕ್ರಿ.ಶ. ೧೦೦೭ ರಲ್ಲಿ ಇದ್ದ ಸಂಗತಿಯುನ್ನು ಸಾಕಷ್ಟು ವಿವರವಾಗಿಯೆ ಪ್ರಕಟಪಡಿಸಿದ್ದೇನೆ.[2] ಆ ಕಾಲದಲ್ಲಿ ಕರ್ನಾಟಕ ವಿಠ್ಠಲನ ಭಕ್ತರನ್ನು ''ವಾರಿ'' ''ವಾರಕರಿ'' ಎಂದು ಮುಂತಾಗಿ ಗುರುತಿಸುತ್ತಿದ್ದಂತೆ ನಮಗೆ ತೋರುತ್ತದೆ. ಮಧ್ವಾಚಾರ್ಯರ ಜೀವಮಾನದ ಕಾಲಾವಧಿಯುಲ್ಲಿ ಬರೆಯುಲ್ಪಟ್ಟ ಹುಬ್ಬಳ್ಳಿಯು ಜಂಬುಕೇಶ್ವರ ದೇವಸ್ಥಾನದಲ್ಲಿರುವ ದೇವಗಿರಿಯು ಕನ್ಹರ (ಕೃಷ್ಣ) ದೇವವರ್ಷದ ಮೂರನೆಯು ಕೀಲಕ ಸಂವತ್ಸರದ ಪುಷ್ಯಶುದ್ಧ ಭೃಗುವಾರ ಉತ್ತರಾಯಣಸಂಕ್ರಾಂತಿಯು ತೇದಿಯುಳ್ಳ ಶಾಸನದ ಮುಕ್ತಾಯದಲ್ಲಿ (ಕ್ರಿ.ಶ. ೧೨೪೮ ಡಿಸೆಂಬರ್ ೨೫) ಹೀಗೆ ಬರೆದಿದೆ :

ಶ್ರೀಪಂಡರಂಗೆಯ ಶ್ರೀವಿಠಲದೇವರ ವಾರಿಯು ಶ್ರೀಹರಿದಿ
ನಂಗಳ ಧರ್ಮ್ಮಕ್ಕೆ ಕಲುವರ ಸಿಂಗಗಾವುಂಡನು ಕೊಟ್ಟವೃತ್ತಿವೊಂದು[3]

–ಇಲ್ಲಿ ಬಂದಿರುವ ಸಂಗತಿಯುನ್ನು ದಿವಂಗತ ಪಿ. ಬಿ. ದೇಸಾಯಿ ಅವರು ಆ ಶಾಸನಕ್ಕೆ ಬರೆದ ಟಿಪ್ಪಣಿಯುಲ್ಲಿ ಹೀಗೆ ವಿವರಿಸಿದ್ದಾರೆ :

**A supplementary to the above epigraph records a gift of land by Kaluvara Singigavunda for charities to be maintained on periodical pilgrimages to the god Vithala of Pandarange (i.e. Pandharpur.)**

ಶಾಸನದ ಪ್ರತಿಯೊಂದು ಮಾತನ್ನೂ ಇನಿತು ವಿಶ್ಲೇಷಿಸಿದರೆ ಯಾರಿಗೂ

---

1 ಡಾ. ಬಿ. ಎನ್. ಕೆ. ಶರ್ಮರ ಕಾಲನಿರ್ಣಯ ಸರಿಯಾಗಿಲ್ಲ. ಶ್ರೀಯುತರು ಶ್ರೀಕೂರ್ಮಶಾಸನದ ಕಾಲವನ್ನು ತಿದ್ದಿದ್ದಾರೆ; ಇತರ ಶಾಸನಗಳನ್ನು (ಇಲ್ಲಿ ಸೂಚಿಸಿದವುಗಳನ್ನು) ಗಣನೆಗೆ ತೆಗೆದುಕೊಂಡಿಲ್ಲ.

2 ದಾಸಸಾಹಿತ್ಯದರ್ಶನ (ಸಂ. ಪ್ರೊ. ಎಚ್ಚೆಸ್ಕೆ) ಪು. ೨೨–೨೩ (೧೯೮೪)

3 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ XV, ಶಾಸನ—೧೮೭, ಪು ೨೩೦.

ಶ್ರೀಯುತರ ವಿವರಣೆ ಬಹಳ ಸ್ಥೂಲ ಹಾಗೂ ಸರಿಯಾದ ಅರ್ಥವನ್ನು ಹೊಂದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಪಂಢರಪುರಕ್ಕೆ ಬರುವ ಯಾತ್ರಿಗಳ ಹಾಗೂ ಹರಿದಿನಗಳ ವೆಚ್ಚಕ್ಕೆಂದು ದತ್ತಿಯನ್ನು ಕೊಟ್ಟಿದು ಬೆಣ್ಣೆಯಷ್ಟು ಬೆಳ್ಳಗಿದೆ. ಈ ವಾರಿಗಳ ಸಂಪ್ರದಾಯವೇ ಮಹಾರಾಷ್ಟ್ರದಲ್ಲಿ ''ವಾರಕರೀ ಸಂಪ್ರದಾಯ''. ಮರಾಠೀ ಭಾಷೆಯ ''ಭಾರತೀಯ ಸಂಸ್ಕೃತಿ ಕೋಶ'' ಎಂಬ ವಿಶ್ವಕೋಶದಲ್ಲಿ ''ಮಹಾರಾಷ್ಟ್ರ ವ ಕರ್ನಾಟಕ ಯಾ ಪ್ರದೇಶಾಂ ಮಧ್ಯ ಪ್ರಚಲಿತ ಏಕವೈಷ್ಣವ ಸಂಪ್ರದಾಯ'' ಎಂದೇ ಈ ಪಂಥವನ್ನು ವಿವರಿಸಿದೆ.[1] ಮತ್ತೆ ಮರಾಠೀ ಭಾಷೆಯಲ್ಲಿಯ ''ವಾರಕರೀಸಂಪ್ರದಾಯ'' ಜ್ಞಾನದೇವ (ಮರಣ ಕ್ರಿ.ಶ. ೧೨೯೬) ರಚಿಸಿದ ಅಭಂಗಗಳಲ್ಲೇ ದೊರೆಯುತ್ತದೆ. ಆತನ ಪ್ರಕಾರ ಪಂಢರಪುರದ (ಪಂಡರಂಗಿ) ವಿಠ್ಠಲನನ್ನು ಅಲ್ಲಿಗೆ ತಂದವನು ಪುಂಡಲೀಕ[2]. ಆತನ ಅಭಂಗಗಳಲ್ಲೇ 'ದ್ವೈತಪಂಥ' 'ವೈಷ್ಣವಪಂಥ'ಇವುಗಳ ಉಲ್ಲೇಖವು ದೊರೆಯುತ್ತಿದ್ದು ಅವು ಪಂಡರಂಗಿಯ ಪರಿಸರದಲ್ಲಿ ಹರಿದಾಸಪಂಥ ತುಂಬ ಪ್ರಾಚೀನವೆಂದು ತಿಳಿಸುತ್ತವೆ[3]. ಅಂತೆಯೇ 'ವಾರಕರೀ ಸಂಪ್ರದಾಯ' 'ದಾಸಸಂಪ್ರದಾಯ' ಹಾಗೂ 'ಹರಿದಾಸಪಂಥ' ಇವು ಒಂದೇ ಪಂಥದ ಭಿನ್ನಭಿನ್ನ ಹೆಸರುಗಳು ಎಂದರೆ ತಪ್ಪಾಗದು. ಆಚರಣೆಯಲ್ಲಿ ಅಲ್ಪ ಸ್ವಲ್ಪ ಭೇದಗಳಿವೆ ಎಂಬುದರ ಅರಿವು ನನಗಿದೆ. ಜೀವಜೀವಗಳಿಗೆ ಭೇದವಿರುವುದರಿಂದ ಅದು ಸಹಜ ಸ್ವಾಭಾವಿಕ.

'ವಾರೀ' ಮಾಡುವವರು 'ವಾರಕರೀ' ಎಂದೆನಿಸಿಕೊಳ್ಳುತ್ತಾರೆ

---

[1] ಭಾರತೀಯ ಸಂಸ್ಕೃತಿಕೋಶ, ಎಂಟನೆಯ ಖಂಡ, ಪು. ೬೦೨, ೧೯೭೪

[2] ತೇಂ ಹೇಂ ರೂಪಡೇಂ ರೂಪಸ ವಿಠ್ಠಲ
ಪುಂಡಲಿಕೇಂ ಬಹುಸಾಲ ಪ್ರಾರ್ಥಿಯೇಲೆಂ

ಹೀಗೆ ಗೋಚರಿಸುವ ವಿಠ್ಠಲನ ರೂಪವನ್ನು ಪುಂಡಲೀಕ ಮಹಾಮುನಿಯು ಬಹಳ ವರ್ಷ ಸ್ತುತಿಸಿದನು. ''ಸಾರ್ಥ ಶ್ರೀಜ್ಞಾನದೇವ ಅಭಂಗಗಾಥಾ'' (ಸಂ. ಡಾ, ಪ್ರಹ್ಲಾದ ನರಹರಿ ಜೋಶಿ) ಪು.೧೩೭, ೧೯೬೯

[3] ವೈಷ್ಣವಾಂಚೇ ಜನ್ಮಮೂಳ
ಹರಿಖೇಳತು ಜನ್ಮಕುಳ...

* * *

ರಖುಮಾದೇವಿವರೂ ತೋ
ದ್ವೈತಾದ್ವೈತಾತೀತ ತೋ ಗೇ ಬಾಯಿ

ವಿದ್ವಾಂಸರು ಈ ಶಬ್ದಕ್ಕೆ ಅನೇಕ ವ್ಯುತ್ಪತ್ತಿಗಳನ್ನು ಹೇಳಿದ್ದಾರೆ. 'ವಾರೀ' ಎಂದರೆ 'ಯಾತ್ರೆ'( =ಖೇಪ)ಎಂದೇ ಹೆಚ್ಚಾಗಿ ಸ್ವೀಕರಿಸಲಾಗಿದೆ. ಪ್ರತಿವರ್ಷ ಪ್ರತ್ಯೇಕ ತಿಂಗಳುಗಳಲ್ಲಿ ನಿಯಮಬದ್ಧರಾಗಿ ಪವಿತ್ರಸ್ಥಳಗಳಿಗೆ ಯಾತ್ರಾರ್ಥಿಯಾಗಿ ಹೋಗುವುದನ್ನು 'ವಾರೀ' ಎಂದು ರೂಢಿಯಲ್ಲಿ ಹೇಳುತ್ತಾರೆ. 'ವಾರಕರೀ' ಸಂಬಂಧದಲ್ಲಿ ಪವಿತ್ರಸ್ಥಳವೆಂದರೆ 'ಪಂಢರಪುರ' ನಗರವೇ.ಆಷಾಢ, ಕಾರ್ತಿಕ, ಮಾಘ ಹಾಗೂ ಚೈತ್ರ ಮಾಸಗಳಲ್ಲಿ ಶುದ್ಧ ಹರಿದಿನಗಳಂದು (ಏಕಾದಶೀ ದಿವಸ) ವಿಠ್ಠಲನ ದರ್ಶನಕ್ಕೆ ಹೋಗುವ ಪೃಥೆಯು ವಾರಕರೀ ಸಂಪ್ರದಾಯ. 'ವಿಠ್ಠಲ' ಇವರ ಉಪಾಸ್ಯದೇವತೆ. ಜ್ಞಾನೇಶ್ವರ, ನಾಮದೇವ, ಏಕನಾಥ, ತುಕಾರಾಮ ಇತ್ಯಾದಿ ಸಂತಶ್ರೇಷ್ಠರು ಈ ಪಂಥದಲ್ಲಿ, ಮಹಾರಾಷ್ಟ್ರದಲ್ಲಿ, ಆಗಿಹೋಗಿದ್ದಾರೆ. ವಾರಕರೀ ಹೇಗೆ ಇರುತ್ತಾರೆಂಬ ಬಗ್ಗೆ ನಾಮದೇವ ಮಹಾರಾಜ ಹೀಗೆ ವರ್ಣಿಸಿದ್ದಾರೆ:

> ಭಕ್ತಿಪ್ರೇಮಭಾವ ಭರಲೇಂ ಜ್ಯಾಂಚ್ಯಾ ಅಂಗೀಂ
> ನಾಚತೀ ಹರಿರಂಗೀಂ ನೇಣತಿ ಲಾಜು[1]

'ವಾರಕರೀ ಸಂಪ್ರದಾಯ'ದ ಅಧ್ಯಯನವನ್ನು ಸ್ಥೂಲವಾಗಿ ಐದು ವಿಭಾಗವನ್ನು ಮಾಡಿ ಅಭ್ಯಸಿಸುತ್ತಾರೆ:

೧ ಪುಂಡಲೀಕನಿಂದ ಜ್ಞಾನದೇವರವರೆಗೆ
೨ ಜ್ಞಾನದೇವ ಹಾಗೂ ನಾಮದೇವ
೩ ಭಾನುದಾಸ ಹಾಗೂ ಏಕನಾಥರ ಕಾಲ
೪ ತುಕಾರಾಮನ ಕಾಲ ಮತ್ತು
೫ ತುಕಾರಾಮೋತ್ತರ ಕಾಲ.

ಪುಂಡಲೀಕನಿಂದ ಜ್ಞಾನದೇವರವರೆಗಿನ ಕಾಲಖಂಡದಲ್ಲಿ ವಾರಕರೀ ಸಂಪ್ರದಾಯ ಕರ್ನಾಟಕ ಹಾಗೂ ಮಹಾರಾಷ್ಟ್ರ ಎರಡಕ್ಕೂ ಒಂದೇಯಾಗಿರುತ್ತದೆ. ಆ ಕಾಲಖಂಡದಲ್ಲಿ:

> ಪಂಢರೀಮ್ಹಣಿಜೇ ಭೂವೈಕುಂಠ
> ಬ್ರಹ್ಮತುವ ಉಭೇಂ ಚಿ ದಿಸತಾಹೇ ನೀಟ

---

[1] ಭಕ್ತಿಪ್ರೇಮಭಾವ ಯಾರ ಅಂಗಾಂಗಳಲ್ಲಿ ತುಂಬಿದೆಯೊ ಅವರಿಗೆ ಹರಿಸ್ಮರಣೆಯಲ್ಲಿ ಸರ್ವವೂ ಅತೀತವಾಗಿ, ಅವಿದಿತವಾಗಿ, ನಿಲ್ಲುತ್ತದೆ, ನಾಚಿಕೆ ಎತ್ತಲೋ ಓಡಿ ಹೋಗುತ್ತದೆ, ಹೃದಯ ನರ್ತಿಸುತ್ತದೆ.

ಯಾ ಹರಿದಾಸಾಸೀ ವಾಳುವಂಟ
ಜಾಗರಣಾ ಸೀ ದಿಧಲೇ[1]

ಕಾಯಾವಾಚಾಮನಸಾ ಯಾರು ತಮ್ಮನ್ನು ವಿಠ್ಠಲನಲ್ಲಿ ಉದಾರಮನದಿಂದ ಸಂಪೂರ್ಣ ಒಪ್ಪಿಸಿಕೊಳ್ಳುತ್ತಾರೊ ಅವರೇ ನಿಜವಾದ ವಿಠ್ಠಲನ ಯಾತ್ರಿಕರು ಅರ್ಥಾತ್ 'ವಾರಕರೀ'.ಆ ಪಂಢರಪುರದಲ್ಲಿಯ ವಿಠ್ಠಲ ಕನ್ನಡದ ವಿಠ್ಠಲ.[2] ಕನ್ನಡನಾಡಿನಲ್ಲಿ 'ವಾರಕರೀ' ಇದು ಜನರು ಇಟ್ಟುಕೊಳ್ಳುವ ಒಂದು ಅಭಿಧಾನವೂ ಆಗಿತ್ತು.[3] ಲಕ್ಕುಂಡಿ ಶಾಸನದಲ್ಲಿ (ಕ್ರಿ.ಶ. ೧೦೦೭) ಮತ್ತು ನಾಗಾವಿಶಾಸನದಲ್ಲಿ (ಕ್ರಿ.ಶ. ೧೨೪೪) ಬಂದಿರುವ "ವೈಷ್ಣವಗೀತಿಮನೋಹರರು" ಎಂಬ ಉಲ್ಲೇಖವನ್ನು ಇಲ್ಲಿ ನಾವು ನೆನಪಿಗೆ ತಂದುಕೊಳ್ಳಬೇಕು. ಕಾವೇರಿಯಿಂದ ಗೋದಾವರೀವರೆಗೆ ಹಬ್ಬಿದ ಆ ಕನ್ನಡನಾಡಿನಲ್ಲಿ ಎಂದರೆ ಇಂದಿನ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿ ವಿಠ್ಠಲನ ಸಂತ್ತ ಇತ್ತ ಮಧ್ವಾಚಾರ್ಯ ಅತ್ತ ಜ್ಞಾನದೇವ ಇವರಿಗಿಂತ ಮುಂಚೆಯೆ ಹರಿದಾಸಪಂಥ ಇದ್ದಿತು. ಜ್ಞಾನದೇವನ ಪ್ರಕಾರ ಎಲ್ಲರೂ ಮಾಡಬೇಕಾದ್ದು 'ಸಂತಸಂಗ ಹರಿಭಜನ'.

ಕ್ರಿ. ಶ. ೧೩ನೆಯ ಶತಮಾನದಲ್ಲಿ ಶ್ರೀಮನ್ಮಧ್ವಾಚಾರ್ಯರು, ಶ್ರೀಜ್ಞಾನದೇವ ಶ್ರೀಚಕ್ರಧರ ಮುಂತಾಗಿ ಮೂವರು ಮಹಾನುಭಾವರು ವೈಷ್ಣವಸಂಪ್ರದಾಯದಲ್ಲಿ ಜನ್ಮವೆತ್ತಿದರು.ಮೂವರ ಉಪಾಸ್ಯದೇವತೆ ವಿಷ್ಣು

---

[1] ಪಂಢರಿಪುರವೆಂದರೆ ಭೂವೈಕುಂಠ. ಅಲ್ಲಿ ಬ್ರಹ್ಮ (ವಿಠ್ಠಲ) ಅರ್ಥಾತ್ ಪರಬ್ರಹ್ಮನು ನೀಟ ನಿಂತಿದ್ದು ಪ್ರಕಟವಾಗಿ ಕಂಗೊಳಿಸುತ್ತಾನೆ. ಆತ ಯಾರು ಕೀರ್ತನ-ವೃತ್ತಿಯ ಮೂಲಕ ಜಾಗರಣೆಯನ್ನು ಆಚರಿಸುತ್ತಾರೊ ಅವರಿಗೆ ಬಾಳ ಒಟ್ಟೆಯಾಗಿದ್ದಾನೆ.

[2] ಮೋಘಶ್ಯಾಮ ಘೇಊನಿ ಬುಂಧೀ
ಜಯಶಾತೇಂ ಶ್ರುತಿಪ್ಯೆಂ ವಾನಿತೀ
ಕೀಂ ತೇಂ ಪುರಾಣಾಸೀ ವಾಡೇ
ತೇಂ ಪಂಢರಿಯೇ ಉಭೇಂ ಅಸೆ ಕಾನಡೇಂ ಗೇವಹಾಯೆ

[3] ಅ) S.I.I. Vol, XX ಶಾ. ೩೯, ಕ್ರಿ. ಶ. ೧೦೬೪:
ಶಾಸನಪಂಕ್ತಿ 25 ......ಶ್ರೀಮನ್ಮಹಾಸಾಮನ್ತಂ
26 ವಾರರಸರ್......

ಆ) S.I.I. Vol. XX ಶಾ. ೧೫೨, ಕ್ರಿ.ಶ. ೧೧೭೦:
ಶಾಸನಪಂಕ್ತಿ 10 ......ಶ್ರೀಮನುಮಹಾಮಂಡಲೇಶ್ವರಂ ವಾರರಸ
11 ರುಂ......

ವಾದರೂ ತಂತ್ರ,ತತ್ವಭೇದದಿಂದ ಮೂರು ಪಂಥಗಳಾಗಿ ಅದುವರೆಗಿನ ಒಂದು ವೈಷ್ಣವಪಂಥ ಮೂರು ಟಿಸಿಲಾಗಿ ನಿಂತಿತು. ಮೂವರೂ ತಮ್ಮ ತಮ್ಮ ನಿರೂಪಣೆಗಳಿಗೆ ಅನುಗುಣವಾದ ಚಿಂತನಸಾಹಿತ್ಯವನ್ನು ಸೃಜಿಸಿದರು. ಕ್ರಿ.ಶ. ೧೩ ನೆಯ ಶತಮಾನದವರೆಗಿನ ಹರಿದಾಸಪಂಥದ ಉಲ್ಲೇಖಗಳು ಸಿಕ್ಕುತ್ತವೆ. ಆದರೆ ಆ ಕಾಲದ ಸಾಹಿತ್ಯ ನಮಗೆ ಸಾಕಷ್ಟು ಉಪಲಬ್ಧವಾಗಿಲ್ಲ. ಈ ದಿಶೆಯಲ್ಲಿ ಸಂಶೋಧನೆಯಾಗಬೇಕು. ಆಗ ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿಯ ಹರಿದಾಸಪಂಥದ ಮೇಲೆ ಹೊಸ ಬೆಳಕು ಬೀಳುತ್ತದೆ ಮತ್ತು ಪುರಂದರದಾಸರ ಸಂತ್ರಮುತ್ತಲಿನ ಪ್ರಭಾವಲಯದ ಸ್ಪಷ್ಟ ಪರಿಜ್ಞಾನ ಮೂಡುತ್ತದೆ.

ಜ್ಞಾನದೇವನು ತನ್ನ ಸ್ಫೂರ್ತಿಸ್ಥಾನದ ಪರಂಪರೆಯನ್ನು ಜ್ಞಾನೇಶ್ವರಿಯಲ್ಲಿ (೧೮:೧೭೫೨-೫೯) ಕೊಟ್ಟಿದ್ದಾನೆ ; ಅದು ನಾಥಸಂಪ್ರದಾಯ. ನಾಥಸಂಪ್ರದಾಯ ಕೇವಲ ಯೋಗಮಾರ್ಗಾನುಯಾಯಿ ಸಂಪ್ರದಾಯವಾಗಿತ್ತಲ್ಲದೆ ಭಕ್ತಿಮಾರ್ಗಕ್ಕೆ ಅದರಲ್ಲಿ ಸ್ಥಾನವೇ ಇರಲಿಲ್ಲ. ಇದು ಅನೇಕ ಪಂಡಿತರ ಮತ. ಆದರೆ ನಿವೃತ್ತೀ ಹಾಗೂ ಜ್ಞಾನದೇವ ಇವರ ವಾಙ್ಮಯವನ್ನು ಪರಿಶೀಲಿಸಿದಾಗ ಯೋಗಸಾಧನೆಯ ಜೊತೆಜೊತೆಗೆ ಭಕ್ತಿಸಾಧನೆಗೂ ಮಹತ್ವ ಕೊಟ್ಟಿದ್ದು ಕಂಡುಬರುತ್ತದೆ. ಪ್ರಾಯಃ ಈ ಎರಡನ್ನೂ ಒಂದೆಡೆ ತಂದ ಕಾರಣದಿಂದಲೊ ಏನೊ ಜ್ಞಾನದೇವನ ಸಂಪ್ರದಾಯ 'ನಾಥಸಂಪ್ರದಾಯ' ಎಂದೂ ಕರೆಯಿಸಿಕೊಳ್ಳುತ್ತದೆ. ಜ್ಞಾನದೇವನ ಅಣ್ಣನೂ ಗುರುವೂ ಆಗಿದ್ದ ನಿವೃತ್ತೀನಾಥನ ಅಭಂಗವೊಂದರಲ್ಲಿ ಅವರ ಗುರುಪರಂಪರೆ ಮಚ್ಛೇಂದ್ರನಾಥ ಗೋರಕ್ಷನಾಥ ಹಾಗೂ ಗಹಿನೀನಾಥರಲ್ಲಿ ಎಂಬುದು ಸ್ಪಷ್ಟವಿದೆ. ಆ ಪರಂಪರೆಯಲ್ಲಿ ''ಪ್ರೇಮಮುದ್ರೆ'', ಮಚ್ಛೇಂದ್ರನಾಥನಿಗೂ ಗೋರಕ್ಷನಿಗೂ ಗಹಿನೀನಾಥನಿಗೂ ಅನಂತರ ಆತನಿಂದ ನಿವೃತ್ತೀನಾಥನಿಗೂ ದೊರಕಿದ ಹಾಗೆ ತಿಳಿದುಬರುತ್ತದೆ. ನಿವೃತ್ತೀನಾಥ ಜ್ಞಾನದೇವನಿಗೆ ದೀಕ್ಷೆಕೊಟ್ಟನು. ಭಕ್ತಿ ''ಸಾತ್ವಸ್ಮಿನ್ ಪರಮಪ್ರೇಮರೂಪಾ'' ಎಂಬುದೇ ಈ ಮಾರ್ಗದ ಮೂಲಬೀಜ ಮಂತ್ರ. ಜ್ಞಾನದೇವನು ವಿಠ್ಠಲಭಕ್ತಿ, ವಿಠ್ಠಲನ ಸಾಕ್ಷಾತ್ಕಾರ ಇವೇ ಗುರಿಯಾಗಿ ಜೀವನ ನಡೆಸಿದ. ಸಮನ್ವಯ ಹಾಗೂ ಸರ್ವರಿಗೂ ವಿಠ್ಠಲನನ್ನು ಪಡೆಯುವ ಭಾಗ್ಯವಿದೆಯೆಂದು ತಿಳಿಸಿ ಪರಂಪರೆಯ ಪಾತ್ರದಲ್ಲಿ ಹೊಸ ಆಶಯದ ಭಕ್ತಿಯ ನಿರ್ಝರವನ್ನು ಜ್ಞಾನದೇವನು ಹರಿಸಿದನು. ವಾರಕರೀ ಸಂಪ್ರದಾಯದ ಹೊಸ ಪದ್ಧತಿಗೆ ಅವಶ್ಯವಾದ ತತ್ತ್ವಜ್ಞಾನವನ್ನೂ ಆತ ರಚಿಸಿಕೊಟ್ಟನು. ಆತನ ಕಾರ್ಯ ನಾಲ್ಕು ವಿಧದಲ್ಲಿದೆ :

೧ ಪಂಥಕ್ಕೆ ಬೇಕಾದ ಸುಸಂಗತ ತರ್ಕಬದ್ಧ ತತ್ತ್ವಜ್ಞಾನವನ್ನು ಒದಗಿಸಿದ ;

೨ ಸೂಕ್ಷ್ಮ ನೀತಿಮೀಮಾಂಸೆಯನ್ನು ಒದಗಿಸಿದ ;

೩ ಧಾರ್ಮಿಕ ಅನುಭವದ ಮೌಲ್ಯಮಾಪನವನ್ನು ಮಾಡಿದ ಮತ್ತು

೪ ಲೋಕಜಾಗೃತಿಯನ್ನುಂಟುಮಾಡಿದುದಲ್ಲದೆ ಪಂಥಪ್ರವಾಹಕ್ಕೆ ಸಂಘಟನೆಯನ್ನು ಒದಗಿಸಿದ. ಇದೇ ಕಾಲಕ್ಕೆ ಆತನಿಗೆ 'ನಾಮದೇವ' ಶಿಷ್ಯನಾಗಿ ಸಖನಾಗಿ ದೊರಕಿದ. ಈ ಇಬ್ಬರ ಸಂಗಮದಿಂದ ಪಂಥಪ್ರವಾಹ ಮಹಾಪೂರದ ಸ್ವರೂಪವನ್ನೇ ತಳೆಯಿತು. ನಾಮದೇವನು ಮಹಾರಾಷ್ಟ್ರ, ರಾಜಸ್ಥಾನ, ಗುಜರಾತ್ ಹಾಗೂ ಪಂಜಾಬ ಪರ್ಯಂತ ಆ ಭಕ್ತಿಪ್ರವಾಹದ ಕಾಲುವೆಯ ನೀರನ್ನು ಹರಿಸಿದನು ; ಕೀರ್ತನದ ಮೂಲಕ ಹೊಸ ಪೈರಿನ ಫಸಲನ್ನು ಬೆಳೆದನು. ದೇವರ ದರ್ಬಾರಿನಲ್ಲಿ ಯಾರೂ ಉಚ್ಚರಲ್ಲ, ಯಾರೂ ನೀಚರಲ್ಲ. ಯಾರ ಹೃದಯದಲ್ಲಿ ಭಕ್ತಿ ಪ್ರೇಮ ತುಂಬಿದೆಯೊ ಅವರೆಲ್ಲ ಆ ಪರಮಾತ್ಮನ ಮಕ್ಕಳು – ಅವರಲ್ಲಿ ಭೇದಭಾವವಿಲ್ಲವೆಂದೂ ಆತ ಸಾರಿದ. ಆಗ ಪಂಢರಪುರ ಒಂದು ಸಾರ್ವಜನಿಕ ಕ್ಷೇತ್ರವಾಯಿತು.

ನಾಮದೇವನ ನಿರ್ಯಾಣದನಂತರ (ಕ್ರಿ.ಶ. ೧೩೫೦) ಪೈಠಣದಲ್ಲಿ ಸುಮಾರು ಒಂದು ನೂರು ವರ್ಷದ ಅನಂತರ ಭಾನುದಾಸನು ಜನ್ಮತಳೆದನು. ಪಂಢರಪುರದ ವಾರೀ ಅವರ ಮನೆಯ ಸಂಪ್ರದಾಯದಲ್ಲಿದ್ದಿತು. ಭಾನುದಾಸನ ಪ್ರಪೌತ್ರನೇ ಏಕನಾಥ. ವಿಜಯನಗರದ ಅರಸರ ಕಾಲದಲ್ಲಿ ಪಂಢರಪುರದ ವಿಠ್ಠಲನನ್ನು ವಿಜಯನಗರಕ್ಕೆ ತಂದಂತೆಯೂ ಆ ವಿಠ್ಠಲನನ್ನು ಭಾನುದಾಸ ಪಂಢರಪುರಕ್ಕೆ ಮತ್ತೆ ಒಯ್ದಂತೆಯೂ ಪರಂಪರಾಗತ ಕಥೆಯೊಂದಿದೆ. ಏಕನಾಥನು ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದು ಭಾಗವತ ಮಂದಿರಕ್ಕೆ ಭದ್ರವಾದ ಅಸ್ತಿವಾರವನ್ನು ಹಾಕಿದನು. ಏಕನಾಥನ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ಮುಸಲ್ಮಾನರ ಆಡಳಿತ ಏರ್ಪಟ್ಟಿತ್ತು.ಹಿಂದೂಧರ್ಮಕ್ಕೆ ದುರವಸ್ಥೆ ಒದಗಿತ್ತು. ಹಿಂದೂಗಳ ದೇವಾಲಯಗಳನ್ನು ಕೆಡವಿ ಆ ಸ್ಥಳಗಳಲ್ಲಿ ಮಸೀದಿಗಳನ್ನು ಕಟ್ಟುತ್ತಿದ್ದರು. ತೀರ್ಥಕ್ಷೇತ್ರಗಳನ್ನು ವಿಧ್ವಂಸ ಮಾಡುತ್ತಿದ್ದರು. ಮರಾಠೀ ಭಾಷೆಗೆ ಪ್ರತಿಕೂಲ ಪರಿಸ್ಥಿತಿಯುಂಟಾಗಿತ್ತು. ಇಂತಹ ದುರ್ಭರ ಸಂದರ್ಭದಲ್ಲಿ ಏಕನಾಥನು ವಾರಕರೀ ಸಂಪ್ರದಾಯಕ್ಕೆ ಪುನರುಜ್ಜೀವನ ಕಾರ್ಯವನ್ನು ಮಾಡಿದ. ಜನರ ಮಧ್ಯೆ ಹೋಗಿ, ವಿಸ್ತಾರ ಭೂಮಿ ತಿರುಗಿ, ಜನರಲ್ಲಿ ಸ್ವಾಭಿಮಾನದ ಬೀಜವನ್ನು ಬಿತ್ತಿದ. ಅದರ ಪ್ರಭಾವವೇ ಮುಂದೆ ರಾಮದಾಸರ ಮೂಲಕ ಶಿವಛತ್ರಪತಿಯ ಉದಯ. ಏಕನಾಥನು ಅನೇಕ ಕೃತಿಗಳಿಂದ ಮರಾಠೀವಾಙ್ಮಯವನ್ನು ಶ್ರೀಮಂತಗೊಳಿಸಿದ. ಆತನ ಕೆಲವು

ಮುಖ್ಯ ಕೃತಿಗಳೆಂದರೆ : ಏಕನಾಥೀ ಭಾಗವತ, ಭಾವಾರ್ಥ ರಾಮಾಯಣ, ರುಕ್ಮಿಣೀ ಸ್ವಯಂವರ, ಹಸ್ತಾಮಲಕ, ಶುಕಾಷ್ಟಕ, ಸ್ವಾತ್ಮಸುಖ, ಆನಂದ ಲಹರೀ, ಗೀತಾಸಾರ, ಚತುಃಶ್ಲೋಕೀಭಾಗವತ ಇತ್ಯಾದಿ. ಇವಲ್ಲದೆ ಅನೇಕ ಅಭಂಗಗಳನ್ನೂ ಮತ್ತು ಮುಂಡಿಗೆಗಳನ್ನೂ ಆತ ರಚಿಸಿದ್ದಾನೆ. ಏಕನಾಥ ಸ್ವತಃ ವಾರಕರೀ ಸಂಪ್ರದಾಯದ ಬಾವುಟವನ್ನು ಕಾಶಿಯವರೆಗೂ ಮೆರೆದ. ಕಾಶೀಕ್ಷೇತ್ರದಲ್ಲಿ ಕೀರ್ತನೆಗಳ ಜೊತೆಗೆ ತನ್ನ ಅಗಾಧ ಸಂಸ್ಕೃತ ಪಾಂಡಿತ್ಯವನ್ನೂ ಪ್ರಕಾಶಪಡಿಸಿದ. ಭಕ್ತಿಮಾರ್ಗ, ಅಭಂಗಪದ್ಧತಿ, ಆತನ ಪಾಂಡಿತ್ಯದ ಕಳಸ ವಾಗಿದ್ದುವು. "ಪಂಢರೀವಾರೀ" ಎಂದರೆ ಪಂಢರಪುರಕ್ಷೇತ್ರ ಆತನಿಗೆ ಅತ್ಯಂತ ಪ್ರಿಯವಾದ ಕ್ಷೇತ್ರವಾಗಿತ್ತು. ಒಂದು ಅಭಂಗದಲ್ಲಿ ತನ್ನ ಪ್ರೇಮವನ್ನು ಆತ ಹೀಗೆ ಅಭಿವ್ಯಕ್ತಪಡಿಸಿದ್ದಾನೆ ;

ಕರಾಕರಾ ಲಾಗವಾಕ
ಧರಾ ಪಂಢರೀಚೀ ವಾಟ
ಪುಂಡಲೀಕಾಚೀ ಪೇಠ
ಸೋಪೀ ಆಹೇ ಸರ್ವಾಂಸೀ[1]

ಪುರಂದರದಾಸರ ಆರಾಧ್ಯದೇವತೆಯೂ ಪಂಢರಪುರದ ವಿಠ್ಠಲ. ಅವರು 'ಪುರಂದರಗಡ' ಎಂಬ ಸ್ಥಳದವರು. ಅವರ ಸಾಹಿತ್ಯದ ಅಧ್ಯಯನ ಹಾಗೂ ಮರಾಠೀ ಭಾಷೆಯಲ್ಲಿಯ ವಾರಕರೀ ಸಂಪ್ರದಾಯದ ಅಧ್ಯಯನ ಇವು ನಮಗೆ ಸರಿಯಾಗಿ ಅರ್ಥವಾಗಬೇಕಾದರೆ ತೌಲನಿಕ ಅಧ್ಯಯನ ಅತ್ಯಗತ್ಯ. ಪುರಂದರದಾಸರ ಮೇಲೆ ಜ್ಞಾನದೇವನ ಅಭಂಗಗಳ ಪ್ರಭಾವ ಇದೆ. ಏಕನಾಥ ಅವರ ಸಮಕಾಲೀನ ಮತ್ತು ಅನಂತರದ ತುಕಾರಾಮನ ಮೇಲೂ ಪುರಂದರದಾಸರ ಪ್ರಭಾವವಿದೆ. ಅಚ್ಚರಿಯ ಸಂಗತಿಯೆಂದರೆ ಈ ಮೂವರಿಗೂ ಕನ್ನಡ ಬರುತ್ತಿತ್ತು. ಜ್ಞಾನದೇವನಿಗೆ ವಿಠ್ಠಲ – ಕಾನಡಾ ವಿಠ್ಠಲ ; ಪುರಂದರದಾಸರಿಗೆ ಆತ ಸಂತಜನರೊಡೆಯ ವಿಠ್ಠಲ :

ಕಾನಡಿಯಾ ವಿಠೋಬಾ ಕಾನಡಿಯಾ
ಬಹು ಆವಡಿಸೀ ಜೀವಪಾಸುನಿಯಾ
(ಜ್ಞಾನದೇವ)
ಸಂತಜನರೊಡೆಯ ನಮ್ಮ ಪುರಂದರವಿಠಲನ
ಸಂತೈಸಿ ನೆನೆದು ಸುಖಿಯಾಗೊ ಮನುಜಾ
(ಪುರಂದರದಾಸರು)

---

1 ತೀವ್ರ ತೀವ್ರ ಪಾಠಮುಗಿಸಿ ಪಂಢರಪುರದ ಹಾದಿಯನ್ನು ಹಿಡಿಯಿರಿ ; ಪುಂಡಲೀಕನ ಆ ಪೇಟೆ ಸರ್ವರಿಗೂ ನೆಲದಮರೆಯ ನಿಧಾನವಾಗಿದೆ.

ಈ ಇಬ್ಬರ ಜೀವನ ಕಾಲವನ್ನು ಇಲ್ಲಿ ಜ್ಞಾಪಕಕ್ಕೆ ತಂದುಕೊಳ್ಳಬೇಕು. ಜ್ಞಾನದೇವನ ಕಾಲಕ್ಕೆ ಮರಾಠೀ ಭಾಷೆ ಕನ್ನಡದ ಪರಿಸರದಲ್ಲಿ ಆದೇ ಅರಳುತ್ತಿದ್ದ ಭಾಷೆ. ನಾಡಿನ ಆ ಭಾಗದಲ್ಲಿ ಕನ್ನಡದ ಕಂಪು ಇನ್ನೂ ಪರಿಮಳಿಸುತ್ತಿತ್ತು. ಅದರ ಪರಿಮಳ ಜ್ಞಾನದೇವನ ಹೃದಯುವನ್ನು ಆತನ ಜೀವನದ ಆರಂಭದಿಂದಲೇ ಆಕರ್ಷಿಸಿದೆ. ಯಾವುವು ವಿಠ್ಠಲನನ್ನು ''ಕನ್ನಡದ ವಿಠ್ಠಲ'' ಎಂಬಂತೆ ಮಾಡಿದವೊ ಆ ಕನ್ನಡ ಗೀತೆಗಳನ್ನು ಕಳೆದುಕೊಂಡುದು ಕನ್ನಡದ ಒಂದು ದುರ್ದೈವ. ಕನ್ನಡದಲ್ಲಿ ವಿಠ್ಠಲನ ಸುಂದರ ಸ್ತುತಿಗಳು ಇದ್ದಿಲ್ಲವೆಂದರೆ ಅವನು 'ಕಾನಡಿಯಾವಿಠೋಬಾ' 'ಕಾನಡಾ ಹೋ ವಿಠ್ಠಲು ಕರ್ನಾಟಕು' ಎಂದು ಮುಂತಾಗಿ ಜ್ಞಾನದೇವನಿಂದ ಸ್ತುತಿಸಲ್ಪಡುತ್ತಿರಲಿಲ್ಲ. ಆತ ವಿಠ್ಠಲನನ್ನು 'ಕನ್ನಡ ವಿಠ್ಠಲ', 'ಶೃಂಗಾರಗೋಮಟ ವಿಠೋಬ' ಎಂದು ಹೇಳಿರುವನಷ್ಟೇ ಅಲ್ಲ ಕನ್ನಡದಲ್ಲೇ ಕೀರ್ತನವನ್ನೂ ಬರೆದಿದ್ದಾನೆ :

ಅಕ್ಕಾ ನೀ ಕೇಳೆ ಚಿಕ್ಕನ ಮಾತು
ಕೊರಳ ದನಿಗೆ ಮರುಳಾದೆನೆ ॥ ೧ ॥

ಚೆಲುವಾನೆ ಚೆಲುವಾನೆ ಪಂಢರಿರಾಯಾ
ಎಲ್ಲಿ ದೊರಕನೇ ಬಾರಾನೆ ॥ ೨ ॥

ಪುಂಡಲೀಕನ ಭಕ್ತಿಗೆ ಬಂದಾ
ಬಾಪ ರಖುಮಾದೇವಿವರ ವಿಠ್ಠಲನೆ ॥ ೩ ॥

ಈ ಕೀರ್ತನದ ಮೂರೂ ನುಡಿಗಳಲ್ಲಿ ಮರಾಠೀ ಭಾಷೆಯ ಜಾಯಮಾನಕ್ಕೆ ಹೊಂದಿಕೊಂಡ ಅಂತ್ಯ ಪ್ರಾಸ ಬಂದಿರುವುದು ಗಮನಾರ್ಹ. ಕನ್ನಡಬಾರದ ಮರಾಠೀ ವಿದ್ವಾಂಸರು ಇದರ ಪಾಠವನ್ನು ಸರಿಯಾಗಿ ಕೊಟ್ಟಿಲ್ಲ. ಇದಕ್ಕೆ ಪಾಠಾಂತರಗಳು ಇವೆಯೆಂಬುದನ್ನು ಬಲ್ಲೆ. ಆದರೆ ಇದು ಕನ್ನಡವೆಂದು ದಿವಂಗತ ನಾ. ಶ್ರೀ. ರಾಜಪುರೋಹಿತರು ತೋರಿಸಿದಂದಿನಿಂದ ಅನೇಕರು ಒಪ್ಪಿಕೊಂಡಿದ್ದಾರೆ.

ಕಾಂಟ್ಯಾಚ್ಯಾ ಆಣಿವರ ವಸತಿ ತೀನಗಾಂವ
ದೋನ ಓಸಾಡ, ಏಕ ವಸೇಚಿ ನಾ ॥ ೧ ॥

ವಸೇಚಿನಾ ತೇಥೆ ಆತಿ ತೀನ ಕುಂಬಾರ
ದೋನ ಥೋಟೇ, ಏಕ ಘಡೀಚನಾ ॥ ೨ ॥

... ... ...
... ... ...

ಜ್ಞಾನದೇವ ಮ್ಹಣೆ ಯಾಚಾ ತೋ ಅನುಭವ
ಸದ್ಗುರುವಾಚುನಿ ಕಳೇಚಿನಾ ॥ ೧೧ ॥

ಮುಂಡಿಗೆ ಜಾತಿಗೆ ಸೇರಿದ ಜ್ಞಾನದೇವರ ಈ ಕೀರ್ತನೆಯನ್ನು ಪುರಂದರ ದಾಸರು :

ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ
ಎರಡು ಬರಿದು ಒಂದು ತುಂಬಲಿಲ್ಲ ॥ ೧ ॥
ತುಂಬಲಿಲ್ಲದ ಕೆರೆಗೆ ಬಂದರು ಮೂವರೊಡ್ಡರು
ಇಬ್ಬರು ಕುಂಟರು ಒಬ್ಬಗೆ ಕಾಲೇ ಇಲ್ಲ ॥ ೨ ॥

... ... ...

ಇನ್ನು ಈ ಅರ್ಥಗಳೆಲ್ಲ ಪುರಂದರವಿಠ್ಠಲ ಬಲ್ಲ
ಅನ್ಯರ್ಯಾರೂ ತಿಳಿದವರಿಲ್ಲಾ ॥ ೧೨ ॥
— ಇತ್ಯಾದಿಯಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ಈ ತತ್ವಪದ ಜನರ ನಾಲಗೆಯ ಮೇಲೆ ಅನೇಕ ರೀತಿಯಲ್ಲಿ ಕುಣಿದಾಡಿದೆ. ಜಾನಪದದಲ್ಲಿ ಬೆರೆತೂಹೋಗಿದೆ. ''ಹಳ್ಳದ ದಂಡ್ಯಾಗ ನಿಂತಾವ ಮೂರು ಎಮ್ಮೆಗಳು ಒಂದು ಗೊಡ್ಡ ಎರಡು ಈಲೇಯಿಲ್ಲ'' ಎಂದಾದ್ದನ್ನು ನಾನು ನನ್ನ ಬಾಲ್ಯದಲ್ಲಿ ಕೇಳಿದ್ದೇನೆ. ನಮ್ಮೂರಲ್ಲಿ ಕೋಳ್ಯಾಳ ನಿಂಗಪ್ಪ ಎಂಬುವರು ಹಾಡುತ್ತಿದ್ದರು. ಇಲ್ಲಿನ ನುಡಿಗಳು ಅರ್ಥಕ್ಕೆ ಹೊಂದುವ ರೀತಿಯಲ್ಲಿ ಕೆಲವೊಮ್ಮೆ ಹೇಳುವವನ ಸಾಮರ್ಥ್ಯಕ್ಕೆ ತಕ್ಕಂತೆ ಹೆಚ್ಚು ಕಡಿಮೆ ಆಗುತ್ತಿರುತ್ತದೆ. ಉಪಲಬ್ಧವಿರುವ ಪುರಂದರದಾಸರ ಪದ್ಯಗಳ ಐದಾರು ಆಕರಗಳಲ್ಲಿ ಏರುಪೇರು ಇರುವುದನ್ನೂ ಅಭ್ಯಾಸಿಗಳು ಗಮನಿಸಬಹುದು. ಇದು ಜನಪ್ರಿಯವೂ ಆಯಿತು ಪಾಠ ದೋಷಭರಿತವೂ ಆಯಿತು. ನನ್ನ ಸ್ನೇಹಿತ ಡಾ. ಆರ್. ವ್ಹಿ. ಎಸ್. ಸುಂದರಂ ಅವರು ತೆಲುಗಿನಲ್ಲಿಯೂ ಈ ಪದ್ಯದ ಅನುವಾದಗಳು, ಅನುಕರಣೆಗಳು ಇವೆಯೆಂದು ಹೇಳಿದರು. ಸಂಶೋಧನೆಯಲ್ಲಿ ಈ ವಿಷಯದ ಮೇಲೆ ಬೆಳಕು ಬೀಳಬೇಕಾಗಿದೆ. ತೆಲುಗಿಗೆ ಅದನ್ನು ಯಾರು ಮೊದಲು ಅನುವಾದಿಸಿರುವರೊ ? ಇದು ಆಂಧ್ರದಲ್ಲಿರುವ ಮಂದನಪಲ್ಲಿಯ ಬಳಿಯ ವ್ಯಾಸಸಮುದ್ರಕ್ಕೆ ತಮ್ಮ ಮಕ್ಕಳ ಜೊತೆಗೆ ಅವರು ಪಡೆದ ವೃತ್ತಿಗಳಲ್ಲಿ ಇರಲು ಹೋದ ಪುರಂದರದಾಸರು ಪರಿಸರದ ತೆಲುಗು ಭಾಷೆಯಲ್ಲಿಯೂ ಪದ್ಯ ಅನುವಾದಿಸಿದರೆ ? ಇದು ವಿಚಾರಣೀಯ.

ಪುರಂದರದಾಸರು (ಶಾ. ಶ. ೧೪೦೬–೧೪೮೬) ಮತ್ತು ಏಕನಾಥ

(ಶಾ. ಶ. ೧೪೫೪-೧೫೨೧) ಹಿರಿಕಿರಿಯ ಸಮಕಾಲೀನರು. ಏಕನಾಥರು ಕನ್ನಡ ಭಾಷೆಗೆ "ನಮೋ ಕಾನಡೀಭಾಷಾ" ಎಂದು ನಮಿಸಿದವರು. ಇಬ್ಬರದೂ ಸಮಾನ ಮನೋಧರ್ಮ; ಸಂಸಾರದಲ್ಲಿ ಇದ್ದು ಗೃಹಸ್ಥ ಜೀವನ ಅನುಭವಿಸಿ ಗೆದ್ದವರು. ಒಬ್ಬರು :

ಈಸಬೇಕು ಇದ್ದು ಜಯಿಸಬೇಕು
ಹೇಸಿಕೆ ಸಂಸಾರದಲ್ಲಿ ಲೇಶ ಆಶೆ ಇಡದ ಹಾಗೆ — ಎಂದರೆ

ಇನ್ನೊಬ್ಬರು

ಮಜಮಧ್ಯೇರಂಗಲ ಚಿತ್ತವೃತ್ತಿ
ಯಾ ಲಾಗೀ ವಿಸರೂ ಗೃಹಾಸಕ್ತಿ
ತ್ಯಾಶೀ ಗೃಹಸ್ಥಾಶ್ರಮೀಂಚ ಪಾರಿಖೀಪ್ರಾಪ್ತಿ
ನಿಶ್ಚಯ ಜಾಣ ಉದ್ಧವಾ[1] — ಎಂದಿರುವರು,

ಈ ಇಬ್ಬರು ಎರಡೂ ಭಾಷೆಗಳನ್ನು ಬಲ್ಲವರಾಗಿದ್ದರು. ಪುರಂದರ ದಾಸರು ಮರಾಠಿಯಲ್ಲಿ ಬರೆದರೊ ಇಲ್ಲವೊ ಏಕನಾಥರಂತೂ ಕನ್ನಡದಲ್ಲಿ ಕೆಲ ಅಭಂಗಗಳನ್ನು ಬರೆದುದಾಗಿ ಡಾ. ಪಂಡಿತ ಅವಳೀಕರರು "ಕರ್ನಾಟಕ ಮತ್ತು ಮರಾಠೀಸಾಹಿತ್ಯ" ಗ್ರಂಥದಲ್ಲಿ ಈಗಾಗಲೇ ಬೆಳಕಿಗೆ ತಂದಿದ್ದಾರೆ.

ಏಕನಾಥನ ಅನಂತರ ಅನತಿದೂರದ ಕಾಲದಲ್ಲೇ ತುಕಾರಾಮನು ದೆಹೂ ಗ್ರಾಮದಲ್ಲಿ ಜನಿಸಿದನು. ಕನ್ನಡದಲ್ಲಿ ಹರಿದಾಸಸಾಹಿತ್ಯಕ್ಕೆ ಪುರಂದರದಾಸರು ಕಳಸಪ್ರಾಯರಿದ್ದಂತೆ ಮರಾಠೀ ವಾರಕರೀ ಸಂಪ್ರದಾಯಕ್ಕೆ ತುಕಾರಾಮನು ಕಳಸಪ್ರಾಯನು. ಪುರಂದರದಾಸರೂ ಏಕನಾಥರೂ ಸಮಕಾಲೀನರು. ತುಕಾರಾಮ ಪುರಂದರದಾಸರಿಗಿಂತ ಚಿಕ್ಕವನು. ವಾರಕರೀ ಸಂಪ್ರದಾಯದಲ್ಲಿ ತುಕಾರಾಮನಷ್ಟು ಅಭಂಗಗಳನ್ನು ಬರೆದವರು ಇನ್ನೊಬ್ಬರಿಲ್ಲ. ಪರಮಾರ್ಥವನ್ನು ಬೋಧಿಸಿದಂತೆ ಬಾಳಿಬದುಕಿದವನು ತುಕಾರಾಮ. ಭಕ್ತಿ ಪ್ರೇಮದ ಮುಂದೆ ಯಾರೂ ಅಡ್ಡಬರುವಂತಿದ್ದಿಲ್ಲ. ವಿಠ್ಠಲ, ಪಂಢರಪುರ, ನಾಮಮಹಾತ್ಮ್ಯ, ಕೀರ್ತನರಂಗ, ವಾರೀ, ಭಕ್ತಿರಹಸ್ಯ ಆತ್ಮಸುಖ ಇತ್ಯಾದಿ ವಿಷಯಗಳನ್ನು ಕುರಿತು ತುಕಾರಾಮನು ಸ್ಪಷ್ಟ ಸರಳಶೈಲಿಯಲ್ಲಿ ತೂಕಭರಿತನುಡಿಯಲ್ಲಿ ವಿವರಿಸಿದ್ದಾನೆ.

---

[1] ಆನಂದದಲ್ಲಿ (ಭಕ್ತಿಯ ಆನಂದದಲ್ಲಿ) ಚಿತ್ತವೃತ್ತಿ ನಿಂತಿದೆ ; ಕಾರಣ ಗೃಹಾಸಕ್ತಿ ಕಡಿಮೆ ಆಗಿದೆ ; ಆದರೆ ಹೀಗೆ ಮಾಡಿಸಿದ ಪುಣ್ಯ ಆ ಗೃಹಾಸ್ಥಾಶ್ರಮದ್ದೇ — ಅದೇ ನನ್ನ ಪ್ರಾಪ್ತಿ. ನಿಶ್ಚಯವಾಗಿ ತಿಳಿ ಉದ್ಧವಾ.

ಕಟಿಹಸ್ತನಾದ, ಇಟ್ಟಿಂಗಿಯ ಮೇಲೆ ನಿಂತ, ತುಳಸೀಹಾರ ಧರಿಸಿ, ಕಾಶೀ ಪೀತಾಂಬರ ಉಟ್ಟು, ಮಕರಕುಂಡಲಗಳಿಂದ ಅಲಂಕೃತನಾದ ಕೌಸ್ತುಭಮಣಿ ಕಂಠೀ ಧರಿಸಿದ ವಿಠ್ಠಲನೇ ತುಕಾರಾಮನ ಸರ್ವಸ್ವ–ಅವನ ಶ್ರೀಮುಖ ಸರ್ವ ಸುಖ. ತುಕಾರಾಮನು ಸುಮಾರು ೪೫೦೨ ಕೀರ್ತನೆಗಳನ್ನು ಬರೆದಿರುವನು. ಆದುದರಿಂದ ಓದುಗರು ಅದರ ವ್ಯಾಪ್ತಿಯನ್ನು ಊಹಿಸಿಕೊಳ್ಳಬಹುದು. ಪುರಂದರರೂ ಹೆಚ್ಚಿನ ಸಂಖ್ಯೆಯಲ್ಲಿ ಕೃತಿರಚನೆ ಮಾಡಿದ್ದಾರೆಂಬುದು ಗಮನಾರ್ಹ.

ತುಕಾರಾಮನ ಅನಂತರ ಆ ಮಟ್ಟದ ಇನ್ನೊಬ್ಬ ವ್ಯಕ್ತಿ ವಾರಕರೀ ಸಂಪ್ರದಾಯದಲ್ಲಿ ಇದುವರೆಗೆ ಜನ್ಮತಳೆದಿಲ್ಲ. ಆದರೆ ವಾರಕರೀ ಸಂಪ್ರದಾಯ ಆತನಿಗೇ ಸಮಾಪ್ತಿಯೂ ಆಗಲಿಲ್ಲ. ತುಕಾರಾಮನ ಸ್ನೇಹಿತ ಕಾನ್ಹೋಬಾ, ನೀಳೋಬಾ ಮುಂತಾದವರು ಅಗ್ರ ಪಂಕ್ತಿಯಲ್ಲಿದ್ದಾರೆ. ಆತನ ಅಭಂಗ ಶೈಲಿಯೂ ಪ್ರೌಢ ಹಾಗೂ ರಸಾಲಪ್ರದವಾಗಿದೆ. ಇವರಲ್ಲದೆ ಸುಮಾರು ೨೦೦ ವರ್ಷದ ಅವಧಿಯಲ್ಲಿ ಶಂಕರಸ್ವಾಮಿ ಶಿವೂರ್‌ಕರ್, ಮಲ್ಲಪ್ಪಾ ವಾಸಕರ್ (ವಾರ್‌ಕರ್). ಹೈಬತ್‌ರಾವ್‌ಬಾಬಾ, ವಾಸುದೇವಬಾಬಾ ದೇಹೂರ್‌ಕರ್, ಚಾತುರ್ವರ್ಣ್ಯಸ್ಯ ಮಹಾರಾಜ್, ಸಾಖರೇಮಹಾರಾಜ್, ವಿಷ್ಣುಬುವಾ ಜೋಗ್, ದಾದಾ ಮಹಾರಾಜ್ ಸಾತಾರ್‌ಕರ್, ಕೇಶವರಾವ್ ದೇಶಮುಖ, ಬುಕಟಸ್ವಾಮಿ,ಲೋಹಿಯಾ ಮಹಾರಾಜ್, ಪ್ರಾ. ಶಂ. ವಾ. ದಾಂಡೇಕರ್ ಮುಂತಾಗಿ ಅನೇಕರು ಈ ಸಂಪ್ರದಾಯವನ್ನು ನಡೆಸಿಕೊಂಡು ಬಂದಿದ್ದಾರೆ. ವಿಠಲನಪಾದದಲ್ಲಿ ಹುಟ್ಟಿದ ಹರಿಭಜನಕೀರ್ತನತರಂಗಿಣಿ ಅಲ್ಲಿ ಇಲ್ಲಿ ಇನ್ನೂ ಹರಿಯುತ್ತಲಿದೆ, ಅದು ನಿರಂತರ.

# ಪುರಂದರದಾಸರು–ಕಬೀರ್

–ಲಕ್ಷ್ಮೀನಾರಾಯಣ ಅರೋರಾ

ಪುರಂದರದಾಸರು ಮತ್ತು ಕಬೀರ್ ಇಬ್ಬರೂ ಭಾರತೀಯ ಭಕ್ತಿ ಸಾಹಿತ್ಯದ ಅನರ್ಘ್ಯ ರತ್ನಗಳು. ಇಬ್ಬರೂ ಮಹಾನುಭಾವರು. ಅನುಭಾವಿಗಳು ಮತ್ತು ಸಕಲಭಕ್ತಜನ ಮದ್ಯರು. ಬದುಕಿನ ಮಹತ್ತನ್ನೂ ಆಳವನ್ನೂ ಕಂಡವರು, ಸಂತಶ್ರೇಷ್ಠರು. ಭಾರತೀಯ ಭಕ್ತಿವಾಹಿನಿಯ ಹರಿವಿಗೆ ತಮ್ಮ ತಮ್ಮ ಸಾಹಿತ್ಯಸಿರಿಯಿಂದ ಹೊಸ ತಿರುವನ್ನು ತಂದುಕೊಟ್ಟವರು. ತಮ್ಮ ತಮ್ಮ ಆರಾಧ್ಯದೈವದ ಪಾದಾರವಿಂದಗಳಿಗೆ ಬದುಕಿನ ಸಮಸ್ತವನ್ನೂ ಸಮರ್ಪಿಸಿದ ಈ ಇಬ್ಬರು ಮಹನೀಯರ ಬದುಕು, ಭಕ್ತಿಸಾಧನೆ, ಸಾಹಿತ್ಯರಚನೆ, ದರ್ಶನ ಅನೇಕ ಸಾಮ್ಯಗಳನ್ನು ಹೊಂದಿದೆ. ಭಾರತೀಯ ಭಕ್ತಿಚೇತನ ಯಾವ ದಿಶೆಯಲ್ಲಿ ಪ್ರವೃತ್ತಗೊಂಡು ಪರಮಸಿದ್ಧಿಯನ್ನು ಪಡೆದುಕೊಂಡಿತು ಎಂಬ ವಿಚಾರದ ನಿರ್ವಹಣೆಯಲ್ಲಿ ಔತ್ತರೇಯ ಹಾಗೂ ದಾಕ್ಷಿಣಾತ್ಯ ಭಕ್ತಿಪದ್ಧತಿಗಳಿಗೆ ಈ ಇಬ್ಬರು ಸಮರ್ಥ ಪ್ರತಿನಿಧಿಗಳಂತಿದ್ದಾರೆ ಎಂದರೆ ಅತಿಶಯವೇನಲ್ಲ. ಪ್ರಸಕ್ತ ಲೇಖನದಲ್ಲಿ ಪುರಂದರದಾಸರ ಹಾಗೂ ಕಬೀರದಾಸರ ಬದುಕು, ಸಾಧನೆ, ಭಕ್ತಿಪದ್ಧತಿ, ದರ್ಶನ, ಸಾಹಿತ್ಯಸೃಷ್ಟಿ – ಈ ಅಂಶಗಳ ದೃಷ್ಟಿಯಿಂದ ತೌಲನಿಕವಾಗಿ ಪ್ರಸ್ತಾಪ ಮಾಡುವ ಸ್ಥೂಲಪ್ರಯತ್ನ ನಡೆಸಲಾಗಿದೆ.

ನಮ್ಮ ನಾಡಿನ ಬಹಳಷ್ಟು ಮಂದಿ ಸಂತರು ಹಾಗೂ ಮಹಾತ್ಮರು ತಮ್ಮ ಸ್ವಂತ ಬದುಕಿನ ಬಗೆಗೆ ಹೇಳಿಕೊಳ್ಳುವುದು ಅನಾವಶ್ಯಕ ಇಲ್ಲವೆ ಅನುಚಿತ ಎಂದು ಭಾವಿಸಿದ್ದರೆಂದು ತೋರುತ್ತದೆ. ಹಾಗಾಗಿ ಅವರ ಕೃತಿಗಳಲ್ಲಿ ಅವರ ಬಗೆಗೆ ಇತಿವೃತ್ತಗಳು ಸಿಗುವುದು ಕಷ್ಟವಾಗುತ್ತದೆ. ನಮ್ಮ ಪ್ರಾಚೀನ ಲೇಖಕರ ಸ್ವಂತ ಕೃತಿಗಳಲ್ಲಿ ಅಪರೂಪವಾಗಿ ಇಂಥ ಕೆಲವು ಅಂಶಗಳು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ದೊರೆಯುವುವು. ಕೆಲವೊಮ್ಮೆ ಇತರರು ಬರೆದ ಕೃತಿಗಳಲ್ಲಿ ಅವರ ಬಗೆಗೆ ಅಲ್ಪಸ್ವಲ್ಪ ಮಾಹಿತಿ ಸಿಗುವುದುಂಟು. ಆದರೆ ಇಲ್ಲಿಯೂ ಪ್ರಕ್ಷಿಪ್ತಗಳ ಹಾವಳಿ, ಪ್ರಾಮಾಣಿಕತೆಯ ವಿಷಯದಲ್ಲಿ ಗೊಂದಲ ಕೆಲವೆಡೆಗಳಲ್ಲಿ ಭಾವಾವೇಶ ಮತ್ತು ಭಾವುಕತೆ ನಿಜಾಂಶಕ್ಕೆ ಕಲ್ಪನೆಯ ಮೆರುಗು ಕೊಡುತ್ತದೆ. ಸತ್ಯದ ಮೇಲೆ ನವುರಾದ ತೆರೆ ಎಳೆದು ವಾಸ್ತವತೆಯನ್ನು ಮರೆಮಾಚುತ್ತದೆ. ಮಹಾತ್ಮರೆಂದೆನಿಸಿಕೊಂಡವರ ಸುತ್ತ ಭಾವಾವಿಷ್ಟ ಭಕ್ತವೃಂದ ಒಂದು ಬಗೆಯ ಅಲೌಕಿಕ ಪ್ರಭಾವಳಿಯನ್ನೇ ಸೃಷ್ಟಿಮಾಡಿಬಿಡುತ್ತದೆ. ಇಷ್ಟೆಲ್ಲ

ಮಿತಿಗಳ ನಡುವೆ ಇಂಥ ಮಹಾನುಭಾವರ ಜೀವನ ವಿಚಾರಗಳನ್ನು ಗ್ರಹಿಸ ಬೇಕಾಗುತ್ತದೆ.

ಪುರಂದರದಾಸರ ಬದುಕು ಮತ್ತು ಸಾಧನೆಗಳ ಬಗ್ಗೆ ತಿಳಿಸಿದವರಲ್ಲಿ ವಿಜಯದಾಸರೇ ಪ್ರಮುಖರು ಹಾಗೂ ಮೊದಲಿಗರು. ದಾಸರ ತಂದೆಯವರ ಹೆಸರು ವರದಪ್ಪನಾಯಕರೆಂದೂ, ಅವರು ಚಿನಿವಾರರಾಗಿದ್ದರೆಂದೂ ಪ್ರಸ್ತಾಪಿಸುತ್ತಾರೆ. (ಅನಂತರದಲ್ಲಿ ದಾಸರ ಪೂರ್ವನಾಮ ಶ್ರೀನಿವಾಸನಾಯಕ ಅಥವಾ ಕೃಷ್ಣಪ್ಪನಾಯಕ ಎಂದಿತ್ತು, ಅವರ ಮಡದಿಯ ಹೆಸರು ಸರಸ್ವತಿಬಾಯಿ ಅಥವಾ ಲಕ್ಷ್ಮೀಬಾಯಿ ಎಂದಿತ್ತು ಎಂಬ ವಿಚಾರಗಳು ಜನಶ್ರುತಿಯಲ್ಲಿ ಬೆಳೆದು ಬಂದವೇ ಹೊರತು ವಿಜಯದಾಸರು ಆ ಬಗ್ಗೆ ಏನನ್ನೂ ಉಲ್ಲೇಖಿಸಿಲ್ಲ.) ಪುರಂದರದಾಸರು ಸಾಕ್ಷಾತ್ ನಾರದಮಹರ್ಷಿಗಳ ಅವತಾರವೆಂದೂ ದೇವ ಲೋಕದಲ್ಲಿ ವಿಷ್ಣು ಮತ್ತು ನಾರದರ ನಡುವೆ ನಡೆದ ಸಂಭಾಷಣೆಯೊಂದರ ಫಲವಾಗಿ ಭೂಮಿಯಲ್ಲಿ ಜನ್ಮವೆತ್ತಿ ತ್ರಿಕರಣಪೂರ್ವಕವಾಗಿ ಹರಿದಾಸ ಕೈಂಕರ್ಯವನ್ನು ನೆರವೇರಿಸಿದರೆಂದೂ ವಿಜಯದಾಸರ ಪಾರ್ಥಕಷಟ್ಪದಿಯೊಂದರಿಂದ ವಿದಿತವಾಗುತ್ತದೆ. ವಿಜಯದಾಸರ ಕಾಲಕ್ಕಾಗಲೇ ಪುರಂದರ ದಾಸರ ನಾಲ್ಕು ಮಂದಿ ಮಕ್ಕಳಾದ ವರದಪ್ಪ, ಗುರುಮಧ್ವಪತಿ, ಗುರು ರಾಯ ಹಾಗೂ ಅಭಿನವ ಎಂಬುವರು ಸಹ ದೈವಾಂಶಸಂಭೂತರೆಂಬ ಕಲ್ಪನೆ ಪ್ರಚಲಿತವಾಗಿತ್ತು ಎನ್ನಲಾಗಿದೆ. ಪ್ರಸಿದ್ಧ ಜನಶ್ರುತಿಯೆನಿಸಿರುವ 'ಮೂಗುತಿಯ ಸಂಗತಿ'ಯ ದೆಸೆಯಿಂದಾಗಿ ದಾಸರು ಹರಿದಾಸಕೈಂಕರ್ಯಕ್ಕೆ ತಮ್ಮ ಬದುಕನ್ನು ಮುಡಿಪಾಗಿಟ್ಟರು ಎಂಬ ಅಭಿಪ್ರಾಯವುಂಟು.

ಕಬೀರರ ಬಗೆಗೆ ತಿಳಿದುಬಂದಿರುವ ಇಂಥ ಕೆಲವು ಸಂಗತಿಗಳೆಂದರೆ ಅವರು ಕಾಶಿಯಲ್ಲಿದ್ದ ನೇಯ್ಗೆಯವರ ಕುಟುಂಬವೊಂದಕ್ಕೆ ಸೇರಿದವರಾಗಿದ್ದರು. ಕಾಲದ ದೃಷ್ಟಿಯಿಂದ ಕಬೀರರು ಪುರಂದರರ ಸಮಕಾಲೀನರೇ; ಅವರಿಗಿಂತ ಸ್ವಲ್ಪ ಮೊದಲಿಗರು. ಹುಟ್ಟಿನ, ವರ್ಗದ ಬಗೆಗಿನ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟು ಸ್ಥೂಲವಾಗಿ ಕಬೀರರು ಹದಿನಾಲ್ಕನೆಯ ಶತಮಾನದ ಮೊದಲ ಭಾಗದಲ್ಲೂ (ಸುಮಾರು೧೩೯೮) ಪುರಂದರದಾಸರು ಹದಿನೈದನೆಯ ಶತಮಾನದ ಕೊನೆಯ ಭಾಗದಲ್ಲೂ(ಸುಮಾರು ೧೪೮೪)ಹುಟ್ಟಿದರೆಂದು ಗ್ರಹಿಸಬಹುದಾಗಿದೆ. ಕಬೀರರ ಪೂರ್ವಜೀವನದ ಬಗ್ಗೆ ಸ್ವಲ್ಪ ಹೆಚ್ಚು ವಿವರಗಳು ಸಿಗುತ್ತವೆ. ಕಬೀರರು ಕಾಶಿ,ಮಗಹರ ಹಾಗೂ ಅಜಮಗಡ ಜಿಲ್ಲೆಯ ಬೆಲಹರ ಎಂಬ ಗ್ರಾಮದಲ್ಲಿ ಹುಟ್ಟಿದರೆಂಬ ಬೇರೆ ಬೇರೆ ಅಭಿಪ್ರಾಯಗಳಿವೆ. ಮಗಹರ ಎಂಬುದು ಕಾಶಿಯ ಬಳಿಯಲ್ಲಿದ್ದು ಅಲ್ಲಿಯೇ ಕಬೀರರ ಸಮಾಧಿ

ಯಿದೆ. ಬನಾರಸ್ಸಿನ ಗೆಜೆಟ್ಟಿನಲ್ಲಿ ಅವರು ಬೆಲಹರದಲ್ಲಿ ಹುಟ್ಟಿದರೆಂಬ ಉಲ್ಲೇಖ ದೊರೆಯುತ್ತದೆ.

ಕಬೀರರ ಜಾತಿ ಮತ್ತು ತಂದೆತಾಯಿಗಳ ವಿಚಾರವಾಗಿ ಸಹ ವಿಭಿನ್ನ ಅಭಿಪ್ರಾಯಗಳುಂಟು. ಸ್ವಾಮಿ ರಾಮಾನಂದರು ಒಬ್ಬ ಬ್ರಾಹ್ಮಣ ವಿಧವೆಗೆ ನೀಡಿದ ಆಶೀರ್ವಾದದ ಬಲದಿಂದ ಕಬೀರ್ ಹುಟ್ಟಿದರೆಂದೂ ಲೋಕಾಪವಾದದ ಭಯದಿಂದಾಗಿ ಆಕೆ ಮಗುವನ್ನು ಲಹರತಾಲಾಬ್ ಎಂಬಲ್ಲಿ ಇರಿಸಿ ಬಂದಳೆಂದೂ, ಅನಂತರ ಅದನ್ನು ನೀರೂ ಮತ್ತು ನೀಮಾ ಎಂಬ ಮಗ್ಗದ ಕೆಲಸದ ಮುಸಲ್ಮಾನ ದಂಪತಿಗಳು ತೆಗೆದುಕೊಂಡುಬಂದು ಸಾಕಿಸಲಹಿದರೆಂದೂ ಹೇಳುವುದುಂಟು. ನೀರೂ ಮತ್ತು ನೀಮಾ ಎಂಬ ಈ ಮುಸಲ್ಮಾನ ದಂಪತಿಗಳ ಸ್ವಂತಮಗ ಕಬೀರ್ ಎಂಬುದು ಇನ್ನೊಂದು ಅಭಿಪ್ರಾಯ.

ತಮ್ಮ ರಚನೆಗಳಲ್ಲಿ ಕಬೀರರು ತಮ್ಮನ್ನು 'ಜುಲಾಹಾ' ಮತ್ತು 'ಕೋರಿ' ಎಂದು ಕರೆದುಕೊಂಡಿದ್ದಾರೆ. ಕಾಶಿಯಲ್ಲಿರುವ ಬಹಳ ಮಂದಿ ನೇಕಾರರು ಮುಸಲ್ಮಾನರೇ. ಕೋರಿ ಎಂಬುದು ನೇಕಾರರಲ್ಲೇ ಒಂದು ಪಂಗಡ. ಡಾ. ಹಜಾರಿಪ್ರಸಾದ ದ್ವಿವೇದಿಯವರು ಕಬೀರರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡ 'ಜುಗಿ' ಇಲ್ಲವೆ 'ಜೋಗಿ' ಜಾತಿಗೆ ಸೇರಿದವರೆನ್ನುತ್ತಾರೆ. ಈ ಜೋಗಿ ಎನ್ನುವವರು ನಾಥಪಂಥಿಗಳೆಂದು ಕರೆಸಿಕೊಳ್ಳುತ್ತಿದ್ದ ಮತಾಂತರಗೊಂಡ ಸಂಚಾರಿ ಸಂನ್ಯಾಸಿಗಳ ಹಿಂಬಾಲಕರಾಗಿದ್ದವರು. ಇಸ್ಲಾಂ ಭಾರತದಲ್ಲಿ ಪ್ರಭಾವಗೊಂಡ ಮೇಲೆ ಈ ಮತಾಂತರ ನಡೆಯಿತು ಎನ್ನುತ್ತಾರೆ, ದ್ವಿವೇದಿಯವರು. ಆಗತಾನೆ ಇಸ್ಲಾಮಿಗೆ ಸೇರ್ಪಡೆಯಾದ ನಿಮ್ನಜಾತಿಯೆಂಬುದರ ನಿಮಿತ್ತವಾಗಿ ಇದಕ್ಕೆ ಮೇಲ್ಪಟ್ಟದ ಸ್ಥಾನಮಾನಗಳು ಇರಲಿಲ್ಲವೆನ್ನಲಾಗಿದೆ. ಕಬೀರರಂತೂ ತಾವು 'ಹಿಂದುವೂ ಅಲ್ಲ, ಮುಸಲ್ಮಾನನೂ ಅಲ್ಲ' ಎಂದು ಅನೇಕಬಾರಿ ಹೇಳಿಕೊಂಡಿದ್ದಾರೆ.

ಕಬೀರರಿಗೆ ನಾಮಕರಣ ಮಾಡಬೇಕಾದಾಗ ಒಬ್ಬ ಖಾಜಿ ಕುರಾನನ್ನು ತೆಗೆದು ನೋಡಿದಾಗ ಇದೇ ಪದ ಕಣ್ಣಿಗೆ ಬಿದ್ದಿತಂತೆ. ಇದರೊಟ್ಟಿಗೆ ಸಿಕ್ಕ ಇತರ ಎರಡು ಪದಗಳೂ ಮೇಲ್ಜಾತಿಯವರಿಗೆ ಮೀಸಲಾಗಿದ್ದರಿಂದ ಬೇರೆ ದಾರಿಯಿಲ್ಲದೆ ಕಬೀರ್ ಎಂಬ ಹೆಸರನ್ನೇ ಖಾಜಿ ಸೂಚಿಸಿದರಂತೆ. ಅರಬ್ಬಿಯಲ್ಲಿ 'ಕಬೀರ್' ಎಂಬ ಪದದ ಅರ್ಥ 'ಶ್ರೇಷ್ಠ' ಎಂದು.

ಪುರಂದರದಾಸರಂತೆಯೇ ಕಬೀರರೂ ಸಂಸಾರಿಗಳಾಗಿದ್ದವರು. ಆದರೆ ಅವರ ಕೌಟುಂಬಿಕ ಜೀವನ ಹಿತಕರವಾಗಿತ್ತು ಎನ್ನಿಸುವುದಿಲ್ಲ. ಅವರ ತಂದೆ ಸಹ ಧರ್ಮಾಸಕ್ತರಾಗಿ ಸಂತರಂತೆ ಇದ್ದರು ಹಾಗೂ ಕಬೀರರಿಗೆ ಅವರನ್ನು ಕುರಿತು ವಿಶೇಷ ಆದರಾಭಿಮಾನಗಳಿದ್ದವು ಎಂಬ ಅಭಿಪ್ರಾಯ ಹೊರ

ಬಿದ್ದಿದೆ. ಕಬೀರರ ಹೆಂಡತಿಯ ಹೆಸರು ಲೋಯಿ. ಕಮಾಲ್ ಮತ್ತು ಕಮಾಲಿ ಎಂಬ ಪುತ್ರ ಪುತ್ರಿಯರು ಅವರಿಗೆ ಇದ್ದರೆನ್ನುತ್ತಾರೆ. ಕೆಲವು ಕಾಲ ಕುಟುಂಬದ ನೇಯ್ಗೆ ಉದ್ಯಮವನ್ನು ಕೈಗೊಂಡ ಕಬೀರರು ಕ್ರಮೇಣ ಅದರಿಂದ ವಿಮುಖರಾಗಿ ಪಾರಮಾರ್ಥಿಕ ಚಿಂತನೆಯಲ್ಲಿ ತೊಡಗಿದರೆಂದೂ ಇದು ಅವರ ತಾಯಿಗೆ ಮತ್ತು ಹೆಂಡತಿಗೆ ಸಂತಸ ಇಷ್ಟವಾಗಲಿಲ್ಲವೆಂದೂ ಹೇಳಲಾಗಿದೆ. ಅವರಿಗೆ ರಾಮಜನಿಯಾ ಎಂಬ ಇನ್ನೊಬ್ಬ ಹೆಂಡತಿಯಿದ್ದಳು ಹಾಗೂ ಕಬೀರರ ಧಾರ್ಮಿಕ ಬದುಕಿನ ಬಗೆಗೆ ಅವಳಿಗೆ ಸಹಾನುಭೂತಿಯಿತ್ತೆಂಬ ಮಾತಿದೆ. ಇಷ್ಟೆಲ್ಲ ಅಭಿಪ್ರಾಯಗಳಿದ್ದರೂ ಕಬೀರರ ಅನುಯಾಯಿಗಳೆಂದೆನಿಸಿಕೊಂಡಿರುವ ಕಬೀರಪಂಥೀಯರು ತಮ್ಮ ಗುರುವಿನ ಕೌಟುಂಬಿಕ ಬದುಕಿನ ಬಗೆಗೆ ಇರುವ ಇಂಥ ಇತಿಶ್ರುತಿಗಳನ್ನು ಮಾನ್ಯಮಾಡುವುದಿಲ್ಲ. ಆದರೆ ಪುರಂದರದಾಸ ಮತ್ತು ಕಬೀರದಾಸ ಈ ಇಬ್ಬರ ಕೃತಿಗಳಲ್ಲೂ ಲೌಕಿಕ ಜೀವನದ ಬಗೆಗಿನ ದಟ್ಟ ಅನುಭವ ಸೊಗಸಾಗಿ ಎದ್ದು ಕಾಣುತ್ತದೆ.

ಕಬೀರರ ವಿದ್ಯಾಭ್ಯಾಸ ಮತ್ತು ಗುರುಪರಂಪರೆಗಳ ಬಗ್ಗೆ ಸಹ ಬೇರೆ ಬೇರೆ ಊಹೆಗಳುಂಟು. ಅವರು ಯಾವ ಶಾಲೆಗೂ ಹೋಗಲಿಲ್ಲ, ಕ್ರಮಬದ್ಧವಾದ ಯಾವುದೇ ಬಗೆಯ ಶಿಕ್ಷಣ ಅವರಿಗೆ ದೊರಕಲಿಲ್ಲ ಎನ್ನಲಾಗಿದೆ. ಪುರಂದರರ ಬದುಕಿನಲ್ಲಿ ನಡೆದಿರುವಂತೆ ಕಬೀರರ ಬದುಕಿನಲ್ಲೂ ಯಾವುದಾದರೂ ಮಹತ್ವಪೂರ್ಣವಾದ ಘಟನೆ ಅವರನ್ನು ಅಧ್ಯಾತ್ಮದ ಕಡೆಗೆ ಪ್ರೇರಿಸಿರಬೇಕು. ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಕಬೀರರು ದೇವರನ್ನೇ 'ಗುರು' ಎಂದು ಕರೆದರು. ಆಧ್ಯಾತ್ಮಿಕ ಮತ್ತು ಅನುಭಾವಿಕ ಬದುಕಿನಲ್ಲಿ ಬೇರೆ ಯಾವ ಗುರುವಿನಿಂದಲೂ ಅವರಿಗೆ ಉಪದೇಶ ದೊರೆಯಲಿಲ್ಲ ಎಂದು ತಿಳಿದುಬರುತ್ತದೆ. ಅವರ ಆಧ್ಯಾತ್ಮಿಕ ಚಿಂತನೆಯೆಲ್ಲ ಸ್ವೋಪಜ್ಞವಾದುದು, ಅನುಭಾವವೆಲ್ಲ ಸ್ವಾಯತ್ತವಾದುದು ಎಂಬುದು ವಿದ್ವಾಂಸರ ಅಭಿಮತ. ಮತ್ತೆ ಕೆಲವರು ಷೇಕ್‌ತಖೀ ಎಂಬುವವರು ಕಬೀರರ ಗುರುವಾಗಿದ್ದರೆನ್ನುತ್ತಾರೆ. ಆದರೆ ಈ ಷೇಕ್‌ತಖಿಯೇ ಕಬೀರರ ವಿರುದ್ಧ ಸಿಕಂದರ್ ಲೋದಿಯ ಮುಂದೆ ಚಾಡಿ ಹೇಳಿದರೆಂದು ಜಿ. ಎಚ್. ವೆಸ್ಟ್‌ಕಾಟ್ ತಮ್ಮ ಕೃತಿಯಲ್ಲಿ ಹೇಳಿದ್ದಾರೆ. ಕಬೀರರು ಸೂಫೀ ಸಂಪ್ರದಾಯದ ಪ್ರಭಾವಕ್ಕೆ ಒಳಗಾಗಿದ್ದವರು. ಇಷ್ಟಾದರೂ ಕಬೀರರ ಗುರು ರಾಮಾನಂದರೆಂದೇ ಬಹಳಷ್ಟು ಜನರ ಅಭಿಪ್ರಾಯ. 'ನನ್ನ ಗುರು ವಾರಾಣಾಸಿಯಲ್ಲಿದ್ದಾರೆ' ಎಂದು ಕಬೀರರು ಹೇಳುತ್ತಿದ್ದರೂ ಸ್ಪಷ್ಟವಾಗಿ ಅವರನ್ನು ಎಲ್ಲಿಯೂ ಹೆಸರಿಸಿಲ್ಲ. ಆದರೆ ಕಬೀರರ ಬೋಧನೆಗೂ ರಾಮಾನಂದರ ಬೋಧನೆಗೂ ತುಂಬ ಸಾಮ್ಯ ಉಂಟು. ಪುರಂದರದಾಸರು ವ್ಯಾಸರಾಯರ ಪರಮಶಿಷ್ಯರು. ವಿಜಯನಗರ

ಸಾಮ್ರಾಜ್ಯದ ರಾಜಗುರುಗಳಾಗಿದ್ದ ವ್ಯಾಸರಾಯರ ಆಶ್ರಯದಲ್ಲಿ ಅವರಿಂದ ಹರಿದಾಸ ದೀಕ್ಷೆ ಪಡೆದು ಪುರಂದರರ ಭಕ್ತಿ ಸಾಹಿತ್ಯ ಸೃಷ್ಟಿಯಾಯಿತೆಂಬುದರ ಬಗ್ಗೆ ಅಭಿಪ್ರಾಯಭೇದಗಳಿಲ್ಲ.

ಕಬೀರರ ಸಾಧನಾಮಾರ್ಗದಲ್ಲಿ ಎದುರಾದ ಕಷ್ಟಸಂಖಗಳು ಪುರಂದರ ದಾಸರದಕ್ಕಿಂತ ಪ್ರಬಲವಾಗಿದ್ದವು ಎನ್ನಬಹುದು. ಕಬೀರರ ಕಾಲದಲ್ಲಿ ಉತ್ತರ ಭಾರತದ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳಲ್ಲಿ ಅಲ್ಲೋಲಕಲ್ಲೋಲಗಳು ಉಂಟಾಗುತ್ತಿದ್ದವು. ರಾಜಕೀಯವಾಗಿ ಬಿರುಗಾಳಿಯಂತೆ ಎರಗಿಬಂದ ಮುಸಲ್ಮಾನರ ದಾಳಿ ಭಾರತೀಯ ಸಾಮಾಜಿಕ ಬದುಕಿನಲ್ಲಿ ವಿಪ್ಲವವನ್ನು ಉಂಟುಮಾಡಿತ್ತು. ನಾಥರು, ಸಿದ್ಧರು ಮುಂತಾದವರು ತಮ್ಮ ಸಂಕೀರ್ಣವಾದ ಸಾಧನಾಮಾರ್ಗಗಳಿಂದ ಜನತೆಯಲ್ಲಿ ದಿಗ್ಭ್ರಮೆಯನ್ನುಂಟುಮಾಡುತ್ತಿದ್ದರು. ಮಹಮ್ಮದ್ ಬಿನ್ ತುಗಲಖನಿಂದ (೧೩೧೫–೫೧) ಹಿಡಿದು ಇಬ್ರಾಹೀಂ ಲೋದಿಯ (೧೫೧೮–೧೫೨೬) ವರೆಗೆ ಆಳಿದ ಹದಿನಾರು ಮಂದಿ ಆಡಳಿತಗಾರರು ಜನತೆಯನ್ನು ಯುದ್ಧಭೀತಿಯಲ್ಲೇ ಇಟ್ಟುಕೊಂಡು ಬಂದರು. ಲೋದಿ ವಂಶದವರಂತೂ ಹಿಂದುಗಳನ್ನು ಬಹಳ ಕ್ರೂರವಾಗಿಯೇ ನಡೆಸಿಕೊಂಡರು. ಇಂಥ ಪ್ರತಿಕೂಲ ಪರಿಸ್ಥಿತಿಗಳನ್ನು ಎದುರಿಸುತ್ತಲೇ ಕಬೀರರು ತಮ್ಮ ಸಾಧನಾಮಾರ್ಗದಲ್ಲಿ ಮುನ್ನಡೆಯಬೇಕಾಯಿತು. ಹಾಗಾಗಿಯೇ ಅವರ ಕೆಲವು ರಚನೆಗಳು ಗೂಢವೂ ನಿಷ್ಠುರವೂ ಆಗಿರುವುದು. ಇದಕ್ಕೆ ಪರ್ಯಾಯವಾಗಿ ದಕ್ಷಿಣದಲ್ಲಿ ಪುರಂದರದಾಸರಿಗೆ ಇಷ್ಟು ಪ್ರತಿಕೂಲ ಸಂದರ್ಭಗಳು ಒದಗಿರಲಿಲ್ಲ.

ಕಬೀರರಿಗೆ ತಮ್ಮ ಜೀವಿತಾವಧಿಯಲ್ಲೇ ಸಾಮಾಜಿಕ ಮನ್ನಣೆ ದೊರಕಿತೆಂದು ಹೇಳುವುದು ಕಷ್ಟ. ಏಕೆಂದರೆ ಆದಾಗಲೇ ಇಸ್ಲಾಂ ಸೇರಿದ್ದ ಅವರ ಪಂಗಡ ಸಾಮಾಜಿಕ ದೃಷ್ಟಿಯಿಂದ ಪುರಸ್ಕಾರ ಪಡೆದಿರಲಿಲ್ಲ. ಜನ ಅವರನ್ನು ಅಲಕ್ಷ್ಯ ಮಾಡಿದರು, ಅಪಹಾಸ್ಯ ಮಾಡಿದರು. ಹಿಂದೂಗಳು ಮತ್ತು ಮುಸಲ್ಮಾನರು ಇಬ್ಬರೂ ಅವರನ್ನು ಅನೇಕ ರೀತಿಯಲ್ಲಿ ಹಿಂಸೆಗೆ ಒಳಪಡಿಸಿದರು. ಈ ಎರಡೂ ವರ್ಗಗಳ ಉಪಟಳಕ್ಕೆ ತುತ್ತಾದ ಕಬೀರರನ್ನು ಕೊಲ್ಲಿಸಲು ಚಕ್ರವರ್ತಿ ಸಹ ಬಗೆಬಗೆಯಾಗಿ ಪ್ರಯತ್ನಿಸಿ ವಿಫಲಗೊಂಡನೆಂದು ಹೇಳುತ್ತಾರೆ. ಈ ನಿಟ್ಟಿನಲ್ಲಿ ಪುರಂದರದಾಸರಿಗೆ ತಮ್ಮ ಕಾಲದಲ್ಲಿ ತಕ್ಕಷ್ಟು ಸಾಮಾಜಿಕ ಮನ್ನಣೆ ಮತ್ತು ಪುರಸ್ಕಾರಗಳು ದೊರೆತಿದ್ದವೆಂದು ಅವರ ಕೃತಿಗಳ ಆಧಾರದ ಮೇಲೆ ಧಾರಾಳವಾಗಿ ಹೇಳಬಹುದು.

ಕಬೀರರ ಕೃತಿಗಳ ಆಧಾರದ ಮೇಲೆ ಡಾ. ರಾಮಕುಮಾರ ವರ್ಮಾ ಹೇಳುವಂತೆ ಅವರು ವ್ಯವಹಾರಶೀಲರಾಗಿದ್ದರು. ಅವರ ದೃಷ್ಟಿ ಮತ್ತು

ವಿಚಾರಗಳು ಸ್ಪಷ್ಟವಾಗಿದ್ದವು. ಯಾರದೇ ಭಯವಿಲ್ಲದೆ ದಿಟ್ಟವಾಗಿ ಅವರು ಹೆಜ್ಜೆಯಿಡುತ್ತಿದ್ದರು. ತಮ್ಮ ಧಾರ್ಮಿಕ ನಂಬಿಕೆಗಳಲ್ಲಿ ಯಾವುದೇ ಒಂದು ಧರ್ಮ ಅಥವಾ ಸಂಪ್ರದಾಯಕ್ಕೆ ಔಚಿತ್ಯಕ್ಕಿಂತ ಮಿಗಿಲಾಗಿ ಅವರು ಮಣೆ ಹಾಕುತ್ತಿರಲಿಲ್ಲ. ಯಾರ ಮುಂದೆ ಯಾವಾಗಬೇಕಾದರೂ ತಮ್ಮ ನಿಲುವನ್ನು ಪ್ರಕಟಪಡಿಸುವ, ಸಮರ್ಥಿಸಿಕೊಳ್ಳುವ ಕೆಚ್ಚೆದೆ ಅವರಿಗಿತ್ತು. ತಮ್ಮ ಕಾಲದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ವಿಚಾರಗಳ ಬಗೆಗೆ ಅವರು ತೆರೆದ ಮನಸ್ಸಿನಿಂದ ವಿಮರ್ಶೆ ಮಾಡುತ್ತಿದ್ದರು. ತೀವ್ರ ಸಾಮಾಜಿಕ ಪ್ರತಿಭಟನೆಯ ಉದ್ದೇಶವಿಲ್ಲದ ಕಾರಣ ಪುರಂದರರು ಈ ಬಗೆಯ ನಿಷ್ಠುರ ನಿಲುವು ಹಾಗೂ ಕೆಚ್ಚೆದೆಯನ್ನು ರೂಢಿಸಿಕೊಳ್ಳುವ ಆವಶ್ಯಕತೆಯಿರಲಿಲ್ಲ. ಪುರಂದರದಾಸರು ಅವರ ಕೃತಿಗಳಲ್ಲಿ ಎದ್ದು ಕಾಣುವಂತೆ ತುಂಬ ಸಾತ್ವಿಕರು, ವಿನಯಶೀಲರು, ಸಾಮಾಜಿಕ ಲೋಪದೋಷಗಳ ಬಗೆಗೆ ಕಳಕಳಿಯನ್ನು ಹೊಂದಿರುವವರು, ಸಾಧು ಸ್ವಭಾವದವರು ಹಾಗೂ ಅನಾಚಾರಗಳನ್ನು ಟೀಕಿಸಿದವರು. ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಗಳು ಸಾಧು ಜನರ ವ್ಯಕ್ತಿತ್ವವನ್ನು ಹೇಗೆ ರೂಪುಗೊಳಿಸುತ್ತವೆ ಎಂಬುದಕ್ಕೆ ಈ ಇಬ್ಬರು ಸಂತರು ಅತ್ಯುತ್ತಮ ಉದಾಹರಣೆಗಳಾಗಬಲ್ಲರು.

ಪುರಂದರರು ಮತ್ತು ಕಬೀರರು ಇಬ್ಬರೂ ವ್ಯಾಪಕವಾಗಿ ದೇಶಾಟನೆ ಮಾಡಿದವರು. ಲೋಕಾನುಭವದ ವಿಶ್ವವಿದ್ಯಾಲಯದಲ್ಲಿ ಮಿಂದುಬಂದವರು, ಸ್ನಾತಕರಾದವರು. ಪುರಂದರದಾಸರು ಮೈಸೂರು, ಉಡುಪಿ, ಕೇರಳ, ತಿರುಪತಿ, ತಮಿಳುನಾಡುಗಳು ಸೇರಿದಂತೆ ದಕ್ಷಿಣಭಾರತದಲ್ಲೆಲ್ಲ ಪರ್ಯಟನೆ ಮಾಡಿ ಉತ್ತರದಲ್ಲಿ ಕೇದಾರದವರೆಗೂ ಪ್ರವಾಸ ಮಾಡಿ ಪುನಃ ಹಂಪೆಗೆ ಬಂದರೆನ್ನುತ್ತಾರೆ. ಅಂತೆಯೆ ಕಬೀರರು 'ನಾನು ಅನೇಕ ಬಾರಿ ಕಾಬಾಕ್ಕೂ ಹೋಗಿದ್ದೇನೆ, ಹಜ್ ಯಾತ್ರೆಯನ್ನೂ ಮಾಡಿದ್ದೇನೆ' ಎಂದು ಹೇಳಿಕೊಂಡಿದ್ದಾರೆ. ಇದು ಅವರ ಕೃತಿಯಲ್ಲಿ ಬರುವ ಗೂಢಾರ್ಥದ ಮಾತೋ, ಯಥಾರ್ಥವೋ ಸ್ಪಷ್ಟವಾಗುವುದಿಲ್ಲ. ಅವರು ಗುಜರಾತು, ಒರಿಸ್ಸಾ, ಮಹಾರಾಷ್ಟ್ರ ಮುಂತಾದ ಕಡೆಗಳಿಗೆ ಹೋಗಿದ್ದ ಬಗ್ಗೆ ಪುರಾವೆಗಳು ದೊರೆಯುತ್ತವೆ. ಅಲ್ಲದೆ ಕಬೀರರು ಬಾಗ್‌ದಾದ್, ಸಮರಕಂಡ್, ಬೊಖಾರಾ ಮುಂತಾದ ಕಡೆಗಳಿಗೂ ಹೋಗಿದ್ದರು ಎನ್ನಲಾಗಿದೆ.

ಪುರಂದರದಾಸರು ಸುಮಾರು ಎಂಬತ್ತು ವರ್ಷಗಳ ಕಾಲ ಜೀವಿಸಿದ್ದು ೧೫೬೪ರಲ್ಲಿ ದೈವಾಧೀನರಾದರೆಂದು ಭಾವಿಸಬಹುದಾಗಿದೆ. ಕಬೀರರು ಮೃತರಾದಾಗ (೧೫೧೮) ಒಂದು ಸ್ವಾರಸ್ಯಕರವಾದ ಘಟನೆ ನಡೆಯಿತು ಎನ್ನುತ್ತಾರೆ. ಅವರ ಪಾರ್ಥಿವ ಶರೀರವನ್ನು ಸುಡಬೇಕೆಂದು ಹಿಂದೂಗಳೂ

ಹೂಳಬೇಕೆಂದು ಮುಸಲ್ಮಾನರೂ ಜಗಳ ಕಾದು ಪೈಪೋಟಿ ನಡೆಸಿದರಂತೆ. ಆದರೆ ಕಬೀರರು ತಮ್ಮ ಕೋಣೆಗೆ ಯಾರೂ ಪ್ರವೇಶಿಸದಂತೆ ನಿರ್ಬಂಧಿಸಿ ಕೆಲವು ಕಮಲದ ಹೂವುಗಳನ್ನೂ ಎರಡು ಹೊದಿಕೆಗಳನ್ನೂ ತೆಗೆದುಕೊಂಡು ಹೋಗಿ ಮಲಗಿಬಿಟ್ಟರಂತೆ. ಸ್ವಲ್ಪಹೊತ್ತಿನ ಮೇಲೆ ಸಣ್ಣ ಆಸ್ಫೋಟನ ಧ್ವನಿಯೊಂದು ಹೊರಬಂದಾಗ ಎರಡೂ ಕಡೆಯ ಜನರು ಒಳಗೆ ಹೋಗಿ ನೋಡಲು ಅಲ್ಲಿ ಕೇವಲ ಕಮಲದ ಹೂವುಗಳು ಮಾತ್ರ ದೊರೆತವಂತೆ. ವೀರಸಿಂಹ ಬಘೇಲಾ ಹಾಗೂ ನವಾಬ್ ಬಿಜಲೀಖಾನ್ ಎಂಬ ಅವರ ಶಿಷ್ಯರ ನೇತೃತ್ವದಲ್ಲಿ ಹಿಂದೂಗಳು ತಮ್ಮ ಪಾಲಿನ ಹೂವುಗಳಿಗೆ ದಹನಕ್ರಿಯೆ ನಡೆಸಿದರೆಂದೂ ಮುಸಲ್ಮಾನರು ತಮಗೆ ಬಂದ ಹೂವುಗಳನ್ನು ಸಮಾಧಿ ಮಾಡಿದರೆಂದೂ ಒಂದು ಐತಿಹ್ಯ ಉಂಟು.

ಶ್ರೀಪಾದರಾಜರು, ವ್ಯಾಸರಾಯರೇ ಮೊದಲಾದ ಮಧ್ವಯತಿಪರಂಪರೆಯ ಹಿನ್ನೆಲೆಯಿರುವ ಪುರಂದರದಾಸರ ಕೃತಿಗಳಲ್ಲಿ ಮಾಧ್ವಮತ ತತ್ವಗಳು ಹಾಸುಹೊಕ್ಕಾಗಿವೆ. ತಮಗಿಂತ ಪೂರ್ವಕಾಲದಲ್ಲಿದ್ದ ಸಂತಪರಂಪರೆಯಿಂದ ಕಬೀರರು ಕೆಲವು ಮೂಲಭೂತ ಅಂಶಗಳನ್ನು ಗ್ರಹಿಸಿದ್ದರೂ, ಅವರನ್ನು ಪೂರ್ತಿಯಾಗಿ ಯಾವುದೇ ಒಂದು ಪಂಥಕ್ಕೆ ಸೇರಿಸಲು ಸಾಧ್ಯವಾಗುವುದಿಲ್ಲ. ಅವರ ಆರಾಧ್ಯದೈವ ನಿರ್ಗುಣಬ್ರಹ್ಮ. ಅದ್ವೈತ ಭಾವನೆಯಿಂದ ಪ್ರಭಾವಗೊಂಡಿರುವಂತೆ ಕಂಡುಬಂದರೂ ಕೆಲವೊಮ್ಮೆ ಅದರಿಂದ ಬೇರೆಯಾಗುತ್ತದೆ. ಏಕೆಂದರೆ ಕಬೀರರು ಯಾವುದೇ ಮತಧರ್ಮ ಸಿದ್ಧಾಂತದ ಪ್ರವರ್ತಕರೂ ಅಲ್ಲ, ಆಚಾರ್ಯರೂ ಅಲ್ಲ. ಅಷ್ಟೇಕೆ ಅನುಯಾಯಿಗಳೂ ಅಲ್ಲ. ಅವರ ಬ್ರಹ್ಮಕಲ್ಪನೆಯೆಲ್ಲ ಸ್ವಾನುಭವ ಸಿದ್ಧವಾದದ್ದು, ಸ್ವೋಪಜ್ಞವಾದದ್ದು. ಹಾಗಾಗಿಯೆ ತಮ್ಮ ಸಾಧನಾಪಥದಲ್ಲಿ ಬ್ರಹ್ಮಸ್ವರೂಪವನ್ನು ಮನಗಂಡಂತೆಲ್ಲ ಅವರು ಬಣ್ಣಿಸುತ್ತಾ ಹೋಟರು. ಅವರ ಬಣ್ಣನೆಯು ಸಾರ ಅಷ್ಟು ಸುಲಭವಾಗಿ ಹಿಡಿತಕ್ಕೆ ಸಿಗುವಂತಹದಲ್ಲ. ಡಾ. ರಾಮಕುಮಾರ ವರ್ಮಾರವರ ಮಾತಿನಲ್ಲಿ ಹೇಳುವುದಾದರೆ ಕಬೀರರ ಬ್ರಹ್ಮಭಾವನೆ "ಯಾವುದೇ ತೋಟದಲ್ಲಿ ನೆಟ್ಟು ಅರಳಿಸಲಾದ ಗುಲಾಬಿಯಂತೆ, ಕೇವಲ ಅದರ ಸುವಾಸನೆಯನ್ನು ಮಾತ್ರ ಆಘ್ರಾಣಿಸಬಹುದು. ಅದು ಯಾವುದೇ ಸೊಂಪಾದ ಕಾಡಿನಲ್ಲಿ ಹರಿಯುವ ತೊರೆಯಲ್ಲ ಕೇವಲ ಅದರ ಜುಳುಜುಳುನಾದವನ್ನು ಮಾತ್ರ ಕೇಳಬಹುದು". ದ್ವಿವೇದಿಯವರು ಹೇಳುವಂತೆ "ಕಬೀರದಾಸರ ನಿರ್ಗುಣಬ್ರಹ್ಮದಲ್ಲಿ ಗುಣ ಎಂದರೆ ಸತ್ತ್ವ, ರಜಸ್ ಇತ್ಯಾದಿ ಗುಣಗಳೆಂದಷ್ಟೆ ಅರ್ಥ. ನಿರ್ಗುಣಬ್ರಹ್ಮನೆಂದರೆ ನಿರಾಕಾರ, ಅಸೀಮನಾದವನು ಎಂದಷ್ಟೆ, ಹೊರತು ನಿರ್ವಿಷಯನಲ್ಲ".

ಕಬೀರರ ಮೇಲೆ ವೈಷ್ಣವಧರ್ಮದ ಪ್ರಭಾವ ಕೆಲಮಟ್ಟಿಗೆ ಬಿದ್ದಿ

ರುವುದುಂಟು. ಮಧ್ಯಯುಗದಲ್ಲಿ ರಾಮಾನುಜ, ರಾಮಾನಂದ ಮುಂತಾದ ದಾರ್ಶನಿಕರು ವೈಷ್ಣವಧರ್ಮವನ್ನು ಕರ್ಮಕಾಂಡಗಳ ಮತ್ತು ಬಾಹ್ಯಾಡಂಬರಗಳ ಸೆಳಪಿನಿಂದ ಪಾರುಮಾಡಿದರು. ಸದಾಚಾರಸಂಪನ್ನತೆಯ ಮೇಲೆ ವೈಷ್ಣವಸಂಪ್ರದಾಯ ಕ್ರಮೇಣ ಹೆಚ್ಚು ಒತ್ತನ್ನು ಕೊಟ್ಟಿತು. ಕಬೀರರು ತಮ್ಮ ಮನಸ್ಸಿಗೆ ಒಪ್ಪುವ ರೀತಿಯಲ್ಲಿ ವೈಷ್ಣವಧರ್ಮದ ಇಂಥ ಅಂಶಗಳನ್ನು ಅಳವಡಿಸಿಕೊಂಡರು. ದ್ವೈತವಾದ, ದ್ವೈತಾದ್ವೈತವಾದ, ವಿಶಿಷ್ಟಾದ್ವೈತ ಜೈನಧರ್ಮ,ಬೌದ್ಧಧರ್ಮ, ಯೋಗಸಂಪ್ರದಾಯ, ಕೌಲಸಂಪ್ರದಾಯ, ನಾಥ ಸಂಪ್ರದಾಯ, ಸೂಫೀ ಸಂಪ್ರದಾಯ ಇವೇ ಮುಂತಾದ ಅನೇಕ ಧರ್ಮ ಮಾರ್ಗಗಳ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಭಾವವನ್ನು ಕಬೀರರ ಮೇಲೆ ಕಾಣಬಹುದು. ಬಹುಶ್ರುತರಾದ ಕಬೀರರ ಮೇಲೆ ಬಿದ್ದ ಇಂಥ ಹಲವಾರು ಪ್ರಭಾವಗಳ ಪರಿಣಾಮವಾಗಿ ಅವರ ಬ್ರಹ್ಮ ಕೇವಲ ನಿರ್ಗುಣಸ್ವರೂಪನಾದವನು ಮಾತ್ರವೇ ಅಲ್ಲ ಕೆಲವೆಡೆಗಳಲ್ಲಿ ಸಗುಣ ಸಾಕಾರ ಸ್ವರೂಪಿಯಾಗಿಯೂ ಕಂಡುಬರುತ್ತಾನೆ. ಜನಮಾನಸದಲ್ಲಿ ಆ ವೇಳೆಗೆ ಪ್ರತಿಷ್ಠಾಪಿತಗೊಂಡಿದ್ದ ಸಾಕಾರಮೂರ್ತಿಯನ್ನು ಪೂರ್ತಿಯಾಗಿ ದೂರಮಾಡಲು ಅವರಿಂದ ಸಾಧ್ಯವಾಗಲಿಲ್ಲವೆನಿಸುತ್ತದೆ. ಜನತೆಗೆ ಪಥ್ಯವಾಗುವಂಥ ನಿರೂಪಣೆ ನೀಡುವ ಸದುದ್ದೇಶ ಹಾಗೂ ಗುರು ರಾಮಾನಂದರಿಂದ ದೊರೆತ ಮಧುರಭಕ್ತಿಯ ಪ್ರಭಾವ ಇವುಗಳ ಕಾರಣದಿಂದಾಗಿ ಕಬೀರರ ಬ್ರಹ್ಮ ರಾಮ, ಹರಿ, ಗೋವಿಂದ, ಮುಕುಂದ, ಮುರಾರಿ, ಮಧುಸೂಧನ ಇತ್ಯಾದಿ ಹೆಸರುಗಳಿಂದಲೂ ಕಾಣಿಸಿಕೊಳ್ಳುತ್ತಾನೆ. ವೈಷ್ಣವ ಕಲ್ಪನೆಯಲ್ಲಿ ಬರುವ ಇಂದ್ರಲೋಕ, ವಿಷ್ಣುಲೋಕ ಮುಂತಾದ ಪದಗಳನ್ನು ಸಹ ಕಬೀರರು ಬಳಸಿಕೊಂಡಿದ್ದಾರೆ. ಆದರೆ ಅವರು ಇಂಥ ಪದಗಳನ್ನು ನಿರ್ಗುಣಬ್ರಹ್ಮ, ಶೂನ್ಯತೆ ಇತ್ಯಾದಿ ಭಾವನೆಗಳಿಗೆ ಅನುಕ್ರಮವಾಗಿ ಉಪಯೋಗಿಸಿಕೊಂಡಿದ್ದಾರೆಂಬುದು ಬೇರೆ ಮಾತು. 'ಮೇರೇ ಸಂಗೀ ದೋಹಿಜನಾ, ಏಕ ವೈಷ್ಣವ ಏಕ ರಾಮ್' (ನನ್ನ ಜೊತೆಗಾರರು ಇಬ್ಬರು, ಒಬ್ಬರು ವೈಷ್ಣವರು ಮತ್ತೊಬ್ಬ ರಾಮ) ಎಂದಿದ್ದಾರೆ ಕಬೀರರು. ಒಟ್ಟಿನಲ್ಲಿ ಕಬೀರರ ಕೃತಿಗಳು ವೈಷ್ಣವಧರ್ಮದ ಅನನ್ಯಭಾವ, ಸದಾಚಾರ, ಶೀಲ, ಕ್ಷಮೆ, ದಯೆ, ಔದಾರ್ಯ, ಧೈರ್ಯ, ದೈನ್ಯ ಮುಂತಾದ ಗುಣಗಳಿಂದ ತುಂಬಿವೆ.

ಮುಕ್ತಿಯನ್ನು ಪಡೆಯಲು ಭಕ್ತಿಯೇ ಏಕೈಕ ಮಾರ್ಗವೆಂಬುದು ಕಬೀರರ ಅಭಿಮತ. ಕೇವಲ ಮುಕ್ತಿಯೆ ಅಲ್ಲ, ಪ್ರಪಂಚದಲ್ಲಿ ದುಃಖವನ್ನು ದೂರಮಾಡುವ ಸಾಧನ ಸಹ ಭಕ್ತಿಯೇ ಎಂದು ಅವರ ನಂಬಿಕೆ. ಭಗವಂತನಲ್ಲಿ ಭಕ್ತಿಯನ್ನು ತಳೆಯಬೇಕಾದರೆ ಸತಿ ಮತ್ತು ಶೂರ ಈ ಎರಡು ಆದರ್ಶ

ಗಳನ್ನು ಇಟ್ಟುಕೊಳ್ಳಬೇಕೆನ್ನುತ್ತಾರೆ ಕಬೀರರು. ಸತೀಭಾವವನ್ನು ಪಡೆದುಕೊಂಡ ಭಕ್ತ ತನ್ನ ಹೊಣೆಗಾರಿಕೆಯಿಂದ ಮುಕ್ತಗೊಂಡು ಎಲ್ಲ ಆಗುಹೋಗುಗಳನ್ನೂ ಭಗವಂತನ ಸಮಕ್ಷಮಕ್ಕೆ ಬಿಟ್ಟುಬಿಡುತ್ತಾನೆ. ಅಂತೆಯೆ ಸಾಧನಾ ಮಾರ್ಗದಲ್ಲಿ ಕೆಚ್ಚಿನಿಂದ ಮುನ್ನಡೆಯಲು ಸಾಹಸ ಮತ್ತು ಏಕಾಗ್ರತೆಯ ಆವಶ್ಯಕತೆ ಬಹಳ. ಸಾವನ್ನೂ ನಗುನಗುತ್ತ ಎದೆಗಪ್ಪಿಕೊಳ್ಳುವ ಸ್ಥಿರಚಿತ್ತ ಶೌರ್ಯ ಅದು. ಈ ಎರಡೂ ಆದರ್ಶಗಳು ಕಬೀರರನ್ನು ಅನನ್ಯಭಕ್ತರನ್ನಾಗಿಸಿವೆ. ತಮ್ಮ ಸರ್ವಸ್ವವನ್ನೂ ಆರಾಧ್ಯದೈವಕ್ಕೆ ಅರ್ಪಿಸಿ ತಾವು ಆ ಈಶ್ವರನ ಸೇವಕನೆನ್ನುತ್ತಾರೆ ಕಬೀರರು.

ವಿರಹಭಾವನೆ ಸಹ ಕಬೀರರ ಭಕ್ತಿಮಾರ್ಗದ ಪ್ರಮುಖ ಭಾಗಗಳಲ್ಲೊಂದು. ಅದ್ಭುತ ಸ್ವರೂಪದ ಪ್ರಿಯತಮನನ್ನು ಸೇರಲಾಗದೆ ಆತ್ಮ ಕಂಗಾಲಾಗುತ್ತದೆ, ವಿಲವಿಲನೆ ಒದ್ದಾಡುತ್ತದೆ. ವಿರಹ ಉಕ್ಕುವ ಕಬೀರರ ಈ ಪ್ರೇಮದಲ್ಲಿ ಹಜಾರಿಪ್ರಸಾದ ದ್ವಿವೇದಿಯವರು ಹೇಳುವಂತೆ ''ಮಾದಕತೆ ಇಲ್ಲ, ಒಂದು ಬಗೆಯ ಉನ್ಮಾದ ಉಂಟು. ಕರ್ಕಶತೆ ಇಲ್ಲ, ಕಠೋರತೆ ಉಂಟು. ಸಂಯಮ ವಿಹೀನತೆ ಇಲ್ಲ; ಸ್ವತಂತ್ರಗಾಮಿತ್ವ ಉಂಟು. ಅಂಧಾನುಕರಣೆ ಇಲ್ಲ; ಆತ್ಮವಿಶ್ವಾಸ ಉಂಟು. ಇದು ಹಾರಿಸಿಕೊಂಡುಹೋಗುವಂತಹದಲ್ಲ; ನೆಲಕ್ಕೆ ನಾಟಿಸುವಂತಹುದು. ಇದು ಸರಳತೆಯ ನೆಲೆಗಟ್ಟಿನ ಮೇಲೆ ನಿಂತ ಪ್ರಚಂಡತೆ. ಈ ಉಗ್ರತೆ ನಂಬಿಕೆಯ ಫಲ. ಈ ತೀವ್ರತೆ ಆತ್ಮಾನುಭೂತಿಯ ಒಂದು ಆವರ್ತನೆ''.

ನಿಷ್ಕಾಮಭಾವನೆ ಕಬೀರರ ಭಕ್ತಿಪದ್ಧತಿಯ ಒಂದು ಮಜಲು. ಅವರ ಜ್ಞಾನಧಾರೆ ಪುಸ್ತಕಜ್ಞಾನದ ಆಧಾರದ ಮೇಲೆ ನಿಂತದ್ದಲ್ಲ. ಸಿದ್ಧಪ್ರಸಿದ್ಧವಾದ ಧಾರೆಗಳು ತಿಳಿವಳಿಕೆಯನ್ನು ಜಟಿಲಗೊಳಿಸುತ್ತವೆ, ಗಲಿಬಿಲಿಗೊಂದಲಗಳನ್ನು ಉಂಟುಮಾಡುತ್ತವೆ. ವಿಷಯವಾಸನೆಗಳನ್ನು ದೂರಮಾಡಿ ಭಗವಂತನ ಧ್ಯಾನಮಾಡಲು ತಿಳಿವಳಿಕೆ ನೀಡುವಷ್ಟು ಅದು ಇದ್ದರೆ ಸಾಕು. ಕಬೀರರ ಸಾಧನಾಮಾರ್ಗ ಯಾವುದೇ ಜಾತಿಭೇದವಿಲ್ಲದೆ ಭಕ್ತಿಯನ್ನು ಅವಲಂಬಿಸಿದೆ. ಏಕೆಂದರೆ ಎಲ್ಲರೂ ಹುಟ್ಟಿರುವುದು ಅದೇ ಪಂಚಭೂತಗಳಿಂದ, ಎಲ್ಲರನ್ನೂ ಹುಟ್ಟಿಸಿರುವವನು ಆ ಒಬ್ಬ ಪರಮಾತ್ಮನೇ.

ಪುರಂದರದಾಸರಾಗಲಿ ಅಥವಾ ಕಬೀರದಾಸರಾಗಲಿ ಮೂಲತಃ ಸಾಹಿತಿಗಳು ಕವಿಗಳಲ್ಲ. ಅವರಿಬ್ಬರೂ ಭಕ್ತರು, ಸಾಧಕರು. ತಮ್ಮ ತಮ್ಮ ಆರಾಧ್ಯದೈವಕ್ಕೆ ಸಮಸ್ತವನ್ನೂ ಅರ್ಪಿಸಿಕೊಂಡು ಮುಕ್ತಕಂಠದಿಂದ ಅವರು ಹಾಡಿದ್ದೇ ಸಾಹಿತ್ಯವಾಯಿತು. ವಿವಿಧ ರೂಪಗಳಲ್ಲಿ ಅವರು ಭಗವಂತನನ್ನು, ಅವನ ಲೀಲೆ ಮಾಯೆಗಳನ್ನು ಕಂಡು ಅಭಿವ್ಯಕ್ತಿಸಿದ ಅಂಶಗಳೇ ಅಪಾರ

ಸಾಹಿತ್ಯರಾಶಿಯಾಯಿತು. ಲೋಕದ ಅಂಕುಡೊಂಕುಗಳನ್ನು ಗಮನಿಸಿ ತಿಳಿ ಹಾಸ್ಯಲೇಪನದೊಡನೆ ಅವರು ಮಾಡಿದ ಟೀಕೆಗಳೂ ಇದರಲ್ಲಿ ಸೇರಿಕೊಂಡವು. ಆತ್ಮಸಮರ್ಪಣೆ ಮತ್ತು ಆತ್ಮವಿಶ್ಲೇಷಣೆ ಸಹ ಇದರಲ್ಲಿ ಕೂಡಿಕೊಂಡವು.

ಪುರಂದರರ ಸಾಹಿತ್ಯದಲ್ಲಿ ಹೆಚ್ಚು ಜನಪ್ರಿಯವಾದುವು ಪದಗಳು. ಸುಮಾರು ನೂರಾನಲವತ್ತು ಉಗಾಭೋಗಗಳು ಹಾಗೂ ಅರುವತ್ತರಷ್ಟು ಸುಳಾದಿಗಳು ಇವೆ. ಒಟ್ಟು ಸುಮಾರು ಒಂದು ಸಾವಿರ ಕೃತಿಗಳು ದೊರೆತಿವೆ. ಇವೆಲ್ಲ ಪ್ರಯತ್ನಪೂರ್ವಕವಾಗಿ ರಚನೆಗೊಂಡವಲ್ಲ; ಸಂದರ್ಭಸ್ಫೂರ್ತಿಯಿಂದ, ಭಕ್ತಿಯ ಆವೇಶದಿಂದ, ಮನಸ್ಸಿನ ತಳಮಳದಿಂದ ಹೊಮ್ಮಿ ಬಂದಂಥವು. ಲೋಕದ ರೀತಿನೀತಿಗಳ ಬಗ್ಗೆ ವಿಡಂಬನೆ, ಆದರ್ಶ ಪರಿಕಲ್ಪನೆ ಕೌಟುಂಬಿಕ ಮತ್ತು ಸಾಮಾಜಿಕ ಜೀವನಮೌಲ್ಯಗಳು, ಧರ್ಮದ ವಾಸ್ತವ ನೆಲೆ, ಆಧ್ಯಾತ್ಮಿಕ ಮಹತ್ವ ಇವು ಕೂಡ ಪುರಂದರರ ಕೃತಿಗಳ ವಸ್ತುವಾಗಿವೆ. ಪುರಂದರದಾಸರ ಪದಗಳೆಲ್ಲ ಸುಮಾರು ಮೂವತ್ತು ರಾಗಗಳಲ್ಲಿ ಮೂಡಿ ಬಂದಿವೆಯೆನ್ನುತ್ತಾರೆ. ವಿಶೇಷವಾಗಿ ಛಾಪು ಮತ್ತು ಝಂಪೆ ತಾಳಗಳನ್ನು ಗುರುತಿಸಬಹುದಾಗಿದೆ. ಅವರ ಪದಗಳಲ್ಲಿ ಪಲ್ಲವಿ, ಅನುಪಲ್ಲವಿ, ಮತ್ತು ನುಡಿಗಳೆಂಬ ಮೂರುಭಾಗಗಳಿವೆ.

ಕಬೀರರ ಸಾಹಿತ್ಯರಚನೆಯ ವ್ಯಾಪ್ತಿಯೂ ಸುಲಭವಾಗಿ ಲೆಕ್ಕಕ್ಕೆ ಸಿಗುವುದಿಲ್ಲ. ಸಂತರು ಮತ್ತು ದಾಸರು ಬರೆಯುವುದಕ್ಕಿಂತ ಹೇಳಿದ್ದು, ಇಲ್ಲವೆ ಹಾಡಿದ್ದು ಹೆಚ್ಚಾದುದರಿಂದ ಈ ಬಗೆಯ ಪರಿಸ್ಥಿತಿ ಉಂಟಾಗಿರಬಹುದು. ಕಬೀರರ ರಚನೆಗಳನ್ನು ಸ್ಥೂಲವಾಗಿ ಸಾಖಿ, ಪದಾವಳಿ ಮತ್ತು ರಮೈಣಿ ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಸಾಖಿಗಳು ದಾಸರ ಪದಗಳಂತೆಯೆ ಹೆಚ್ಚು ಸಂಖ್ಯೆಯಲ್ಲಿದ್ದು ಬಹಳಷ್ಟು ಮಟ್ಟಿಗೆ ಎರಡು ಸಾಲುಗಳ ದೋಹಾ ಛಂದಸ್ಸಿನಲ್ಲಿವೆ. ಸಾಖಿಗಳು (ಸಾಕ್ಷಿ) ಪ್ರತ್ಯಕ್ಷ ಘಟನೆಯ ನಿರೂಪಣೆಯಂತಿರುತ್ತವೆ. ಪದಗಳು ದೀರ್ಘವಾಗಿರುತ್ತವೆ ಹಾಗೂ ಸಾಖಿಗಳಂತೆ ಇವುಗಳು ಮಾರ್ಗದರ್ಶನವನ್ನು ಉದ್ದೇಶವಾಗಿ ಹೊಂದಿರುವುದಿಲ್ಲ. ಇವು ಹೆಚ್ಚಾಗಿ ಸ್ವಯಂಜ್ಞಾನದ ಸಾಕ್ಷಾದ್ರೂಪಗಳು. ಭಕ್ತಿಭಾವನೆ ಓತಪ್ರೋತವಾಗಿರುವ ನಿಮಿತ್ತ ಇವುಗಳಲ್ಲಿ ಗೇಯತೆ ಕಂಡುಬರುತ್ತದೆ. ರಮೈಣಿಗಳು ದೋಹಾ–ಚೌಪಾಯಿಗಳಲ್ಲಿದ್ದು ವರ್ಣನಾತ್ಮಕವಾಗಿರುತ್ತವೆ. ಕಬೀರರ ರಚನೆಗಳು 'ಆದಿಗ್ರಂಥ', 'ಕಬೀರ ಗ್ರಂಥಾವಲೀ', 'ಬೀಜಕ' ಇಂಥ ಪರಂಪರಾಗತ ಗ್ರಂಥಗಳಲ್ಲಿ ಸಂಗ್ರಹಗೊಂಡಿವೆ. ಕಬೀರಸಾಹಿತ್ಯದಲ್ಲಿ ವ್ಯಾಪ್ತಿಯ ದೃಷ್ಟಿಯಿಂದ ಸುಮಾರು ಎಂಟುನೂರಕ್ಕೂ ಮಿಗಿಲಾಗಿ ಸಾಖಿಗಳು, ನಾನೂರರಷ್ಟು ಪದಗಳು ಹಾಗೂ ನಲವತ್ತೇಳು ರಮೈಣಿಗಳೂ ಇರುವುದಾಗಿ ತಿಳಿದು

ಬರುತ್ತದೆ. ಪದಗಳು ಭಕ್ತಿ ಮತ್ತು ಜ್ಞಾನದ ಭಂಡಾರವಾಗಿ ಕಂಡುಬಂದರೆ ರಮೈಣಿಗಳು ಭಗವಂತನಿಗೆ ಸಂಬಂಧಪಟ್ಟಂತೆ ಕಬೀರರ ಅನಿಸಿಕೆಗಳು, ಆತ್ಮೋದ್ಧಾರ ಮುಂತಾದ ವಿಚಾರಗಳನ್ನು ಕುರಿತವಾಗಿವೆ. ಪದಗಳು ಮತ್ತು ರಮೈಣಿಗಳು ವಿವಿಧ ರಾಗಗಳಲ್ಲಿ ಗೇಯವಾಗಿದ್ದು ಪುರಂದರದಾಸರ ಸಾಹಿತ್ಯದಂತೆಯೆ ಕಬೀರರ ಸಾಹಿತ್ಯವನ್ನು ಮಧುರವಾಗಿಸಿವೆ. ಕಬೀರರನ್ನು ಶ್ರೇಷ್ಠ ಸಾಹಿತಿಯನ್ನಾಗಿ ಮಾಡಿವೆ.

ಈವರೆಗೆ ಈ ಇಬ್ಬರು ಮಹನೀಯರ ಬದುಕು, ಭಕ್ತಿಪದ್ಧತಿ ಮತ್ತು ಸಾಹಿತ್ಯರಚನೆ ಇವುಗಳ ದೃಷ್ಟಿಯಿಂದ ಅನೇಕ ಸಮಾನ ರೇಖೆಗಳನ್ನು ಕಂಡು ಕೊಂಡಿದ್ದೇವಷ್ಟೆ. ಈಗ ಇಬ್ಬರ ಸಾಹಿತ್ಯದಿಂದ ಅಲ್ಲಲ್ಲಿ ಕೆಲವು ಭಾಗಗಳನ್ನು ಆಯ್ದು ಅಲ್ಲಿ ಕಂಡುಬರುವ ಸಮಾನಚಿಂತನೆ, ವಿಶ್ಲೇಷಣೆ, ಮನೋಧರ್ಮ ಇತ್ಯಾದಿಗಳನ್ನು ನೋಡೋಣ. ಬಹಳಷ್ಟು ವಿಚಾರಗಳಲ್ಲಿ ಇವರಿಬ್ಬರೂ ಒಂದೇ ಬಿಂದುವಿನಲ್ಲಿ ಸಂಧಿಸುತ್ತಾರೆ. ಈ ಕೆಳಕಾಣಿಸಿರುವ ದೃಷ್ಟಿಗಳಿಂದ ಅವುಗಳ ಸ್ಥೂಲ ವಿವೇಚನೆಯನ್ನು ಮಾಡಲು ಪ್ರಯತ್ನಿಸಲಾಗಿದೆ.

(ಅ) ಗುರುವಿನ ಮಹತ್ವ : ಗುರುವಿನ ಬಗ್ಗೆ ಭಕ್ತಿ ಮತ್ತು ಕೃತಜ್ಞತೆ ಪರಂಪರಾಗತವಾಗಿ ಬಂದುದು. ಗುರೂಪದೇಶ ಮತ್ತು ಸಜ್ಜನಸಂಗ ಪುಣ್ಯ ವಶಾತ್ ದೊರಕಿದಾಗ ಪುರಂದರರು :

ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು
ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು

ಎಂದು ಸಂತೋಷಪಟ್ಟರೆ,
ಕಬೀರರು :

ಸತ್‌ಗುರು ಕೀ ಮಹಿಮಾ ಅನಂತ್, ಅನಂತ್‌ಕಿಯೊ ಉಪಗಾರ್
ಲೋಚನ ಅನಂತ ಉಗಾಡಿಯೊ ಅನಂತ್ ದಿಖಾವಣಹಾರ್[1]

ಎಂದಿದ್ದಾರೆ.

(ಆ) ನಾಮಮಹಿಮೆ : ಭಗವಂತ ಹಾಗೂ ಗುರು ಇವರ ನಾಮ ಮಹಿಮೆಯಿಂದಲೇ ಸಾಂಸಾರಿಕ ಕಷ್ಟಗಳೆಂಬ ಸಾಗರವನ್ನು ದಾಟಬಹು ದೆಂಬುದು ಪುರಂದರದಾಸರ ಅಭಿಮತ. ಕೆಲವೊಮ್ಮೆ ಭಗವಂತನಿಗಿಂತ ಅವನ ನಾಮವೇ ಹೆಚ್ಚುಗಾರಿಕೆಯನ್ನು ಪಡೆದುಕೊಳ್ಳುತ್ತದೆ :

---

[1] ಸದ್ಗುರುವಿನ ಮಹಿಮೆ ಅನಂತ, ಅವರಿಂದಾದ ಉಪಕಾರ ಅನಂತ
ಕಣ್ಣೆವೆಗಳ ಬಿಡಿಸಿ, ಜ್ಞಾನದೃಷ್ಟಿಯ ನೀಡಿ, ತೋರಿದರೆನಗೆ ಅನಂತವನೆ

ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರೂ, ಕಲ್ಲುಸಕ್ಕರೆ ಕೊಳ್ಳಿರೋ
ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು, ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ
......ಸಂತತ ಭಕ್ತರ ನಾಲಗೆ ಸವಿಗೊಂಬ
ಕಾಂತ ಪುರಂದರವಿಠಲ ನಾಮವೆಂಬ

ಎಂಬುದಾಗಿ ದೇವರ ಹೆಸರಿನ ಸಿಹಿಯನ್ನುಣಿಸುತ್ತಾರೆ ಪುರಂದರರು. ಇದೇ ನಿಟ್ಟಿನಲ್ಲಿ ಕಬೀರರು :

ಲೂಟಿ ಸಕೈ ತೌಂ ಲೂಟಿಯೌ ರಾಮನಾಮಭಂಡಾರ್
ಕಾಲ ಕಂಠ ತೈಂ ಗಹೈಗಾ, ರೂಂಧೈ ದಸೂಂ ದುವಾರ್[1]

– ಎನ್ನುತ್ತಾರೆ.

(೯) ಬ್ರಹ್ಮಸ್ವರೂಪ : ಪುರಂದರದಾಸರು ವಿಠ್ಠಲನನ್ನು ಪರಿಪರಿಯಾಗಿ ಬಣ್ಣಿಸಿ, ಸ್ತುತಿಸಿ ಆ ಮೂಲಕ ಸಗುಣಬ್ರಹ್ಮದ ಕಲ್ಪನೆಯನ್ನು ಮಾಡಿಕೊಳ್ಳುವರು :

ನಿನ್ನ ಬೊಮ್ಮ ಮೂರುತಿಗೆ ನಮೋನಮೋ
ನಿನ್ನ ರುದ್ರಮೂರುತಿಗೆ ನಮೋನಮೋ
ನಿನ್ನ ಚಂದ್ರಮೂರುತಿಗೆ ನಮೋನಮೋ
ನಿನ್ನ ಸ್ಥಾವರ ಮೂರುತಿಗೆ ನಮೋನಮೋ
ಪುರಂದರವಿಠಲ ನಿನ್ನ ವಿಶ್ವಮೂರುತಿಗೆ ನಮೋನಮೋ

ಹೀಗೆಯೇ ಹರಿಸರ್ವೋತ್ತಮತ್ವವನ್ನು ಪುರಂದರದಾಸರು ಈ ಕೆಳಕಂಡಂತೆ ಸಾರುವರು :

ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು

ಕಬೀರರ ಬ್ರಹ್ಮ ಯಾವುದೇ ಪರಿಧಿ ಅಥವಾ ಎಲ್ಲೆಕಟ್ಟಿಗೆ ಸೇರುವಂತಹವನಲ್ಲ. ಅವನು ದಶರಥಪುತ್ರ ರಾಮನೂ ಅಲ್ಲ, ಯಶೋದಾಪುತ್ರ ಕೃಷ್ಣನೂ ಅಲ್ಲ. ಕಾಲದೇಶ ಮತ್ತು ಸ್ಥಿತಿಗಳಿಗಿಂತ ಹೊರತಾದವನು ಅವನು. ಪ್ರಪಂಚದ ಎಲ್ಲ ಪದಾರ್ಥಗಳು ವಿನಾಶಹೊಂದುತ್ತವೆಯಾದರೂ ಅವನು ಮಾತ್ರ ಅಜರಾಮರ :

---

[1] ರಾಮನಾಮಭಂಡಾರದಿ ತೊಗೋ ನೀ ಮನ ಬೇಕಾದುದೆಲ್ಲವ ಮತ್ತು ನಾಳೆ ಕುತ್ತಿಗೆಯದುಮಿ ಹತ್ತುದಾರಿಗಳ ಕಟ್ಟಿದಾಗ ಮತ್ತೆ ಫಲಿತಫಿಸುವೆಯು

ಶರೀರ ಸರೋವರ ಭೀತರ್ಹೈ ಆಛೈ ಕಮಲ ಅನೂಪ್
ಪರಮ ಜ್ಯೋತಿ ಪುರುಷೋತ್ತಮೋಂ ಜಾಕೈರೇಖ ನ ರೂಪ್[1]
ಲಾಲೀ ಮೇರೀ ಲಾಲ್ ಕೀ ಜಿತ್ ದೇಖೂಂ ತಿತ್ ಲಾಲ್
ಲಾಲೀ ದೇಖನ ಮೈಂ ಗಯೀ, ಮೈಂ ಬೀ ಹೋಗಯೀ ಲಾಲ್[2]

ಇತ್ಯಾದಿಯಾಗಿ ಕಬೀರರ ಆರಾಧ್ಯದೈವದ ಬಣ್ಣನೆ ಬಗೆಬಗೆಯಾಗಿ ಸಂಕೀರ್ಣಮಯವಾಗಿ ಕಂಡುಬರುತ್ತದೆ.

(ಈ) ದಾಸ್ಯಭಾವ : ಪುರಂದರದಾಸರು ಮತ್ತು ಕಬೀರರು ಇಬ್ಬರೂ ತಮ್ಮ ಸ್ವಾಮಿಯ ಬಗ್ಗೆ ಸ್ವಾಮಿ - ಭೃತ್ಯ ಭಾವನೆಯನ್ನು ತಳೆದವರಾಗಿದ್ದಾರೆ. ಪುರಂದರರು :

ದಾಸನ ಮಾಡಿಕೊ ಎನ್ನ – ಇಷ್ಟು
ಘಾಸಿ ಮಾಡುವರೇನೋ ಕರುಣಾಸಂಪನ್ನ

ಎಂಬುದಾಗಿ ಬಿನ್ನವಿಸುತ್ತಾರೆ. ಕಬೀರರು ಸಹ ಇದೇ ರೀತಿಯಲ್ಲಿ ತಮ್ಮ ದಾಸ್ಯಭಕ್ತಿಯನ್ನು ತೋಡಿಕೊಂಡಿದ್ದಾರೆ :

ಕಬೀರ್ ಕೂತಾ ರಾಮಕಾ, ಮುತಿಯಾ ಮೇರಾ ನಾಉಂ
ಗಲೈ ರಾಮಕೀ ಜೇಬಡೀ, ಜಿತ ಖೈಂಚೈ ತಿತ ಜಾಉಂ[3]

(ಉ) ಬಾಹ್ಯಾಡಂಬರಗಳ ಖಂಡನೆ : ಈ ಇಬ್ಬರು ಮಹನೀಯರೂ ಡಂಭಾಚಾರ ಬಾಹ್ಯಾಡಂಬರಗಳನ್ನು ಖಂಡಿಸಿದ್ದಾರೆ. ಅವುಗಳ ವಿಚಾರವಾಗಿ ಲೇವಡಿ ಮಾಡಿದ್ದಾರೆ. ಪುರಂದರದಾಸರ 'ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು' 'ಉದರ ವೈರಾಗ್ಯವಿದು' 'ಮಂಡೂಕ ಕೂಗುವುದು ಮಂತ್ರವೆಂತೆನಬಹುದೆ'

---

[1] ಶರೀರ ಸರೋವರದೊಳಗೆ, ಸೊಗಸಾದ ಕಮಲ ಅದಕೆ ಸಾಟಿಯಿಲ್ಲ
ಪರಮ ಜ್ಯೋತಿ ಪುರುಷೋತ್ತಮನೆ ಅದು, ರೂಪ ಲಕಾರ ಇಲ್ಲವೇನಿಲ್ಲ

[2] ನನ್ನನಿಯನ ಕೆಂಪೆಂದರೆ ಎಲ್ಲೆಲ್ಲಿ ನೋಡಿದರೂ ಕೆಂಪು
ಕೆಂಪನು ನೋಡಲು ನಾ ಹೋದಾಗ ನಾನೇ ಆಗಿಹೋದೆ ಕೆಂಪು

[3] ರಾಮನ ನಾಯಿಯು ನಾನು. ನನ್ನ ಹೆಸರು ಮೋತಿಯಂತ
ಕುತ್ತಿಗೆಯ ಹಗ್ಗ ರಾಮನ ಕೈಲಿ, ಎತ್ತ ಎಳೆದರೆ ಅತ್ತ ಹೋಗುವೆ ನಾನು

ಮುಂತಾದ ಪದಗಳಲ್ಲಿ ವ್ಯಂಗ್ಯ ಮೊನಚಾಗಿರುವುದನ್ನು ನೋಡಬಹುದು. ಇದೇ ರೀತಿಯಲ್ಲಿ ಕಬೀರರ ಕೆಲವು ರಚನೆಗಳನ್ನು ಉದಾಹರಣೆಯಾಗಿ ನೋಡೋಣ :

> ಪೋಥೀ ಪಢ್‌ಪಢ್ ಜಗ ಮುವಾ, ಪಂಡಿತ ಭಯೊ ನ ಕೋಯ್
> ಢಾಈ ಆಖರ್ ಪ್ರೇಮ ಕಾ, ಪಢೈಸೋ ಪಂಡಿತ ಹೋಯ್[1]
>
> ಪಾಹನ ಪೂಜೈಹರಿ ಮಿಲೈ, ತೋ ಮೈಂ ಪೂಜೂಂ ಪಹಾರ್[2]

– ಇತ್ಯಾದಿ

(ಊ) ಆತ್ಮನಿವೇದನೆ : ಪುರಂದರದಾಸರು ಮತ್ತು ಕಬೀರರು ಎಷ್ಟೋ ರಚನೆಗಳಲ್ಲಿ ತಮ್ಮ ಮನದಾಳವನ್ನು ತೋಡಿಕೊಂಡಿದ್ದಾರೆ. ಇಂಥ ಕೆಲವು ಸಂದರ್ಭಗಳನ್ನು ನೋಡಬಹುದು. ಪುರಂದರರು :

> ಆದದ್ದೆಲ್ಲ ಒಳಿತೇ ಆಯಿತು ನಮ್ಮ
> ಶ್ರೀಧರನ ಸೇವೆಯ ಮಾಡಲು
> ಸಾಧನ ಸಂಪತ್ತಾಯಿತು

ಎಂಬುದಾಗಿ ನಡೆದದ್ದನ್ನು ಸಹಜವಾಗಿ ಸ್ವೀಕರಿಸುತ್ತಾರೆ.

> ಹೆಂಡತಿ ಸಂತತಿ ಸಾವಿರವಾಗಲಿ
> ದಂಡಿಗೆ ಬೆತ್ತ ಹಿಡಿಸಿದಳಯ್ಯ

ಎಂಬುದಾಗಿ ಗೋಪಾಳಬುಟ್ಟಿ ಹಿಡಿಸಿದ, ತುಳಸೀಮಾಲೆಯು ಹಾಕಿಸಿದ ಮಡದಿಯು ಬಗ್ಗೆ ದಾಸರು ಕೃತಜ್ಞತೆ ವ್ಯಕ್ತಪಡಿಸಿದ್ದಾರೆ.

ಅಂತೆಯೆ ಕಬೀರರ ಸ್ವಂತ ಬದುಕಿನ ಕೆಲವು ಅಭಿವ್ಯಕ್ತಿಗಳನ್ನು ನೋಡೋಣ :

> ಜನಮ–ಜನಮ ಶಿವಪುರೀ ಗಂವಾಯಾ
> ಮರತೀ ಬಾರ್ ಮಗಹರ್ ಉಠಿ ಧಾಯಾ[3]

---

[1] ಪುಸ್ತಕಗಳ ರಾಶಿರಾಶಿ ಓದಿ ಜಗ ಸತ್ತಿತು, ಪಂಡಿತರಾಗಲಿಲ್ಲ ಯಾರೂ
ಪ್ರೇಮವೆಂಬ ಎರಡಕ್ಷರ ಓದಿದವ, ಪಂಡಿತನೆಂದೆನಿಸಿಕೊಂಡವನಾದ

[2] ಕಲ್ಲು ಪೂಜಿಸಿದರೆ ಹರಿ ಸಿಕ್ಕುವುದಾದರೆ ನಾ ಬೆಟ್ಟವನೇ ಪೂಜಿಸೇನು

[3] ಸಕಲ ಜನುಮವ ಶ್ರಿಪುರಿಯಲ್ಲಿ ಕಳೆದೆ
ಸಾಯುವ ಹೊತ್ತಲ್ಲಿ ಮಗಹರ ಸೇರಿದೆ

ಎಂದು ಕಬೀರರು ಮಗಹರದ ಬಗ್ಗೆ ಹೇಳುತ್ತಾರೆ. ಆಗ ಮಗಹರದಲ್ಲಿ ಸತ್ತರೆ ನರಕಪ್ರಾಪ್ತಿಯಾಗುತ್ತದೆಂಬ ನಂಬಿಕೆಯಿತ್ತು.

ಮುಸಿ ಮುಸಿ ರೋವೈ ಕಬೀರ್ ಕೀ ಮಾಯೀ[1]

ಎಂದು ಒಂದೆಡೆ ಅವರು ತಾಯಿಗೆ ತಮ್ಮ ತಪಃಸಾಧನೆ ಇಷ್ಟವಾಗುತ್ತಿರಲಿಲ್ಲವೆಂದಿದ್ದಾರೆ. ಪುರಂದರರ ಪಾಲಿಗೆ ಮಡದಿ ಮಕ್ಕಳು ಸಹಕಾರಿಗಳಾದರೆ ಕಬೀರರ ತಂದೆಯು ಹೊರತು ಕುಟುಂಬದ ಉಳಿದವರೆಲ್ಲ ಅವರ ಧೋರಣೆಗಳಿಗೆ ವಿರುದ್ಧವಾಗಿದ್ದರು.

ಜರಾ ಜೀವನ ಜೋಬನು ಗಇಯಾ ಕಿಛು ಕೀಯಾ ನ ನೀಕಾ
ಇಹು ಜೀಅರಾ ನಿರಮೋಲ್ ಶೋ ಕವುಡೀ ಲಗಿ ಮೀರಾ[2]

ಎಂಬ ರೀತಿಯಲ್ಲಿ ಕಬೀರರು ತಮ್ಮ ಸಾಧನೆಯ ಬಗ್ಗೆ ಅಸಂತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

ಅನೇಕ ರೀತಿಯಲ್ಲಿ ಸಾಮ್ಯ ಮತ್ತು ಕೆಲವಾರು ಭಿನ್ನತೆಗಳನ್ನು ಹೊಂದಿರುವ ಪುರಂದರದಾಸರ ಹಾಗೂ ಕಬೀರರ ಬದುಕು, ವ್ಯಕ್ತಿತ್ವ, ಸಾಧನೆ ಮತ್ತು ಕೃತಿಗಳು ವಿಶೇಷವಾದ ಹಾಗೂ ಆಳವಾದ ಅಧ್ಯಯನಕ್ಕೆ ವ್ಯಾಪಕವಾದ ಸಾಮಗ್ರಿಗಳನ್ನು ಒದಗಿಸುತ್ತವೆ. ಈ ದಿಶೆಯಲ್ಲಿ ಪ್ರಸಕ್ತ ಲೇಖನ ಒಂದು ಕಿರು ಪ್ರಯತ್ನ ಅಷ್ಟೆ.

---

1 ಮುಸಿಮುಸಿ ಅಳುತ್ತಿದ್ದಳು ಕಬೀರನ ತಾಯಿ

2 ಬಾಲ್ಯ ಯೌವನ ಮುಪ್ಪು ಕಳೆಯಿತೆಲ್ಲ ಏನೂ ಒಳ್ಳೆಯದು ಮಾಡಲಿಲ್ಲ ನಾನು
ಈ ಅಮೂಲ್ಯವಾದ ಬದುಕನು ಮಾರಿಬಿಟ್ಟೆ ಕವಡೆ ಕಾಣಿಗೆ ನಾನು

# ಪುರಂದರದಾಸರು – ಮೀರಾಬಾಯಿ

–ಉಮಾ ಅರೋರಾ

ಭಾರತೀಯ ವಾಙ್ಮಯದಲ್ಲಿ ಭಕ್ತಿರಸಾಮೃತ ಸಿಂಧುವನ್ನು ಹರಿಸಿದ ಭಕ್ತಕವಿವರೇಣ್ಯರಲ್ಲಿ ಉತ್ತರದ ಮೀರಾಬಾಯಿ ಮತ್ತು ದಕ್ಷಿಣದ ಪುರಂದರ ದಾಸರು ಸಾಕಷ್ಟು ಪ್ರಸಿದ್ಧರಾದವರು. ಪುರಂದರದಾಸರು ಮತ್ತು ಮೀರಾ ಬಾಯಿ ಮೂಲತಃ ಭಕ್ತರಾಗಿದ್ದರು ಹಾಗೂ ತಮ್ಮ ಆಳವಾದ ಭಕ್ತಿಯ ಅಭಿವ್ಯಕ್ತಿಯ ಅಂಗವಾಗಿ ಸಾಹಿತ್ಯರಚನೆ ಮಾಡಿದರು. ಭಕ್ತಕವಿಗಳು ಸಾಮಾನ್ಯವಾಗಿ ಎದುರಿಸುತ್ತಿದ್ದ ಕೌಟುಂಬಿಕ ಮತ್ತು ಸಾಮಾಜಿಕ ಸಮಸ್ಯೆ ಗಳನ್ನು ಇವರೂ ಸ್ವಲ್ಪ ವಿಭಿನ್ನತೆಗಳೊಡನೆ ಹೇಗೆ ಎದುರಿಸಿದರೆಂಬುದು ಇವರ ಬದುಕನ್ನು ಸ್ಥೂಲವಾಗಿ ಅವಲೋಕಿಸುವುದರಿಂದ ಸ್ಪಷ್ಟವಾಗುತ್ತದೆ. ಈ ಇಬ್ಬರು ಮಹಾನುಭಾವರ ಬದುಕು, ಕೃತಿಗಳು, ಭಕ್ತಿಪದ್ಧತಿ, ದರ್ಶನ ಮುಂತಾದ ವಿಷಯಗಳನ್ನು ಕುರಿತಂತೆ ಈ ಮುಂದೆ ಸ್ಥೂಲವಾಗಿ ಚರ್ಚಿಸುವ ಪ್ರಯತ್ನ ಮಾಡಿದೆ. ಪುರಂದರದಾಸರ ಬದುಕು, ಭಕ್ತಿ, ದರ್ಶನ ಇತ್ಯಾದಿ ವಿಷಯಗಳ ಬಗ್ಗೆ ಪ್ರಸ್ತುತ ಗ್ರಂಥದಲ್ಲಿ ಸಾಕಷ್ಟು ವಿವರಗಳನ್ನು ಹೇಳಿರುವುದ ರಿಂದ ಪ್ರಾಸಂಗಿಕವಾಗಿ ಮಾತ್ರ ಅವುಗಳನ್ನು ಉದಾಹರಿಸುತ್ತಾ ಮೀರಾ ಬಾಯಿಯ ಬದುಕು, ಭಕ್ತಿ ಮತ್ತು ದರ್ಶನಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ.

ಸಾಮಾನ್ಯವಾಗಿ ಎಲ್ಲ ಪ್ರಾಚೀನ ಕವಿಗಳ ಬಗ್ಗೆ ಇರುವಂತೆಯೇ ಮೀರಾಬಾಯಿಯ ಹುಟ್ಟು ಮತ್ತು ಬದುಕಿನ ವಿಚಾರದಲ್ಲಿ ಭಿನ್ನ ಭಿನ್ನ ಅಭಿ ಪ್ರಾಯಗಳನ್ನು ವಿದ್ವಾಂಸರು ಮುಂದಿಟ್ಟಿದ್ದಾರೆ. ಹೊಸ ಸಂಶೋಧನೆಗಳ ಆಧಾರದ ಮೇಲೆ ಮೀರಾಬಾಯಿ ಮೇಢತಿಯ ರಾಠೋಡ ವಂಶದ ರಾವ್ ದೂದಾನ ಕುಟುಂಬದಲ್ಲಿ ೧೫೦೫ರಲ್ಲಿ ಹುಟ್ಟಿದಳು. ರಾವ್‌ದೂದಾನ ಮೂರ ನೆಯ ಮಗ ರತ್ನಸಿಂಹನ ಮಗಳು ಮೀರಾ. ರಾವ್‌ದೂದಾ, ಆತನ ಮೊದಲ ಮಗ ವೀರಮದೇವ ಹಾಗೂ ವೀರಮದೇವನ ಮಗ ಜಯಮಲ್ಲ ವೈಷ್ಣವ ಭಕ್ತರಾಗಿದ್ದರು. ಮನೆಯಲ್ಲಿ ವೈಷ್ಣವಭಕ್ತಿಯ ವಾತಾವರಣ ಇದ್ದುದರಿಂದ ಎಳೆವಯಸ್ಸಿನ ಮೀರಾಳಲ್ಲಿ ಭಕ್ತಿಭಾವನೆ ಕುಡಿಯೊಡೆಯಲು ಪ್ರೇರಣೆ ದೊರಕಿತು.

ಮೀರಾ ತನ್ನ ತಂದೆತಾಯಿಯರಿಗೆ ಒಬ್ಬಳೇ ಮಗಳು. ಅವಳ ತಂದೆ

ರತ್ನಸಿಂಹನಿಗೆ ಮೀರಾಳ ಅಜ್ಜ ರಾವ್‌ದೂದಾ ಹನ್ನೆರಡು ಹಳ್ಳಿಗಳ ಜಹಗೀರೊಂದನ್ನು ನೀಡಿದ್ದ. ಈ ಹಳ್ಳಿಗಳ ಪೈಕಿ ಕುಡಕಿ ಎಂಬ ಹಳ್ಳಿಯಲ್ಲೇ ಮೀರಾ ಜನಿಸಿದ್ದು. ಎರಡು ವರ್ಷದವಳಾಗಿದ್ದಾಗಲೇ ಅವಳು ತನ್ನ ತಾಯಿಯನ್ನು ಕಳೆದುಕೊಂಡಳು. ರತ್ನಸಿಂಹ ರಾಜಪೂತ ಯೋಧನಾಗಿದ್ದುದರಿಂದ ಹೆಚ್ಚು ಸಮಯವನ್ನು ಯುದ್ಧರಂಗದಲ್ಲಿ ಮತ್ತು ಇತರ ವೀರೋಚಿತ ಚಟುವಟಿಕೆಗಳಲ್ಲಿ ಕಳೆಯುತ್ತಿದ್ದ. ಹೀಗಾಗಿ ಮೀರಾಳಿಗೆ ಎಳೆವಯಸ್ಸಿನಲ್ಲಿ ಅಗತ್ಯವಾದ ಮಾತಾಪಿತೃಪ್ರೇಮ ದೊರಕಲಿಲ್ಲ. ರಾವ್‌ದೂದಾ ಮೊಮ್ಮಗಳನ್ನು ಮೇಢತಾಗೆ ಕರೆಸಿಕೊಂಡು ತಾನೇ ಸಾಕತೊಡಗಿದ. ವಿಷ್ಣುಭಕ್ತನಾಗಿದ್ದ ಅಜ್ಜನ ಆಶ್ರಯದಲ್ಲಿ ಬಾಲಕಿ ಮೀರಾಳ ಗಿರಿಧರಗೋಪಾಲನ ಬಗೆಗಿನ ಪ್ರೇಮ ಭಕ್ತಿಗಳು ವಿಕಾಸಗೊಳ್ಳತೊಡಗಿದವು. ಸುತ್ತಮುತ್ತಲೆಲ್ಲ ಶಸ್ತ್ರಾಸ್ತ್ರಗಳ ನಗಾರಿಗಳ ಜಯಭೇರಿ ಹೊಡೆಯುತ್ತಿದ್ದರೂ ಅಂತಃಪುರದಲ್ಲಿ ಭಕ್ತಿಯ ನಿಚ್ಚಳವಾದ ವಾತಾವರಣವಿತ್ತು. ಅರಮನೆಗೆ ಭೇಟಿಕೊಡುತ್ತಿದ್ದ ಸಿದ್ಧರು ಸನ್ಯಾಸಿಗಳು ಭಕ್ತರು ಇಂಥವರ ಉಪದೇಶಗಳಿಂದ ಚಿಕ್ಕಂದಿನಲ್ಲಿಯೇ ಮೀರಾ ತುಂಬಾ ಪ್ರಭಾವಿತಳಾದಳು. ಸಾಧುಜನರು ಹಾಡುತ್ತಿದ್ದ ಜನಪದ ಭಕ್ತಿಗೀತೆಗಳ ಮಾಧುರ್ಯ ಮೀರಾಳಲ್ಲೂ ಸಂಗೀತದ ಬಗ್ಗೆ ಒಲವನ್ನು ಪುಟಿದೆಬ್ಬಿಸಿತು.

ಮೀರಾ ಯಾವಾಗಲೂ ತನ್ನ ಬಳಿಯಲ್ಲಿ ಗಿರಿಧರಗೋಪಾಲನ ಒಂದು ಮೂರ್ತಿಯನ್ನು ಇಟ್ಟುಕೊಂಡಿರುತ್ತಿದ್ದಳು ಎನ್ನಲಾಗಿದೆ. ಇದು ಅವಳ ಬಳಿ ಹೇಗೆ ಬಂದಿತು ಎನ್ನುವ ವಿಷಯದಲ್ಲಿ ಅನೇಕ ಜನಶ್ರುತಿಗಳುಂಟು. ಎಳೆತನದಿಂದಲೇ ಹೇಗೋ ಏನೋ ಅವಳು ಆ ವಿಗ್ರಹವನ್ನೇ ತನ್ನ ಆರಾಧ್ಯದೈವ ಮತ್ತು ಪತಿ ಎಂದೆಲ್ಲ ಭಾವಿಸಿದ್ದಳು.

ಮೀರಾಳ ವಿವಾಹದ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳುಂಟು. ಕೆಲವರು ರಾಣಾಕುಂಭನ ಜೊತೆ ಅವಳ ಮದುವೆಯಾಗಿತ್ತೆಂದರೆ ಮತ್ತೆ ಕೆಲವರು ಕುಂಭನ ಮಗನ ಜೊತೆ ಅವಳ ವಿವಾಹವಾಗಿತ್ತು ಎಂದು ಭಾವಿಸುತ್ತಾರೆ. ಆದರೆ ವಾಸ್ತವವಾಗಿ ಚಿತ್ತೂರಿನ ರಾಜ ರಾಣಾಸಂಗನ ಮಗ ಭೋಜರಾಜನ ಜೊತೆಯಲ್ಲಿ ಮೀರಾಳ ವಿವಾಹವಾಗಿತ್ತು ಎಂದು ತಿಳಿದು ಬರುತ್ತದೆ. ಅವಳ ವೈವಾಹಿಕ ಜೀವನ ಸುಗಮವಾಗಿರಲಿಲ್ಲ. ಗಿರಿಧರಗೋಪಾಲನಿಗೆ ಅರ್ಪಿತವಾಗಿದ್ದ ತನುಮನಸ್ಸುಗಳು ಲೌಕಿಕ ಪತಿಯ ಕಡೆ ಒಲಿಯಲು ನಿರಾಕರಿಸಿದವು. ಗಂಡನ ಮನೆಯ ಆರಾಧ್ಯದೇವಿಯಾಗಿದ್ದ ಭವಾನಿಗೂ ಮಿಗಿಲಾಗಿ ಗೋಪೀಲೋಲನಾದ ಕೃಷ್ಣ ಅವಳ ಆರಾಧ್ಯದೈವವಾಗಿದ್ದ. ಅದು ರಾಜಮನೆತನದಲ್ಲಿ ಎಲ್ಲರಿಗೂ ಅಸಮಾಧಾನವನ್ನು ಉಂಟು

ಮಾಡಿತ್ತು. ಅವಳ ಮನಸ್ಸನ್ನು ತಿರುಗಿಸಲು ಅವರೆಲ್ಲ ಸಾಮ ದಾನ ಭೇದ ದಂಡ ಇತ್ಯಾದಿ ಹಲವಾರು ಪ್ರಯತ್ನಗಳನ್ನು ಮಾಡಿದರು.

ದುರದೃಷ್ಟವಶಾತ್ ಅವಳ ಪತಿ ಭೋಜರಾಜ ಆಕಸ್ಮಿಕ ಮೃತ್ಯುವಿಗೆ ಈಡಾದಾಗ ಪರಿಸ್ಥಿತಿ ಇನ್ನೂ ವಿಷಮಿಸಿತು. ಅಂದಿನ ಪದ್ಧತಿಯಂತೆ ಸತಿ ಸಹಗಮನ ಮಾಡಲು ಮೀರಾ ನಿರಾಕರಿಸಿದಳು. ಅಜರಾಮರ ಅವಿನಾಶಿಯಾಗಿದ್ದ ಶ್ರೀಹರಿಯನ್ನೇ ಪತಿಯಾಗಿ ಮಾಡಿಕೊಂಡಿದ್ದ ಅವಳು ಹೇಗೆ ತಾನೇ ತನ್ನನ್ನು ವಿಧವೆಯೆಂದು ಒಪ್ಪಿಯಾಳು ? ಕ್ರಮೇಣ ಮೀರಾಳ ವಿಚಿತ್ರ ನಡವಳಿಕೆಯ ಪಿಸುಮಾತುಗಳು ಅರಮನೆಯ ಬಾಗಿಲನ್ನು ದಾಟಿ ಜನಸಾಮಾನ್ಯರ ನಡುವಣ ಚರ್ಚೆಯ ವಿಷಯವಾದಾಗ ಅವಳು ಇನ್ನೂ ವಿವಾದಕ್ಕೆ ಒಳಗಾದಳು. ಆದರೆ ಅವಳ ಮಾವ ತುಂಬ ಉದಾರಮನಸ್ಸಿನವರಾಗಿದ್ದರು. ಸೊಸೆಯ ಭಕ್ತಿಯ ಹಾದಿಗೆ ಅವರ ಪೂರ್ಣ ಉತ್ತೇಜನವಿತ್ತು. ಆದರೆ ರಾಣಾಸಾಂಗಾ ಮತ್ತು ಮೀರಾಳ ತಂದೆ ರಾವ್‌ರತ್ನಸಿಂಹ ಬಾಬರನ ವಿರುದ್ಧ ನಡೆದ ಘೋರಯುದ್ಧದಲ್ಲಿ ಸಾವಿಗೀಡಾದಾಗ ಮೀರಾಳ ಉಭಯ ಆಸರೆಗಳೂ ತಪ್ಪಿಹೋದವು. ಅನಂತರ ಬಂದ ಸಾಂಗಾನ ಉತ್ತರಾಧಿಕಾರಿ ವಿಕ್ರಮಸಿಂಹ ತನ್ನ ಕುತ್ಸಿತ ಮನಸ್ಸಿನ ಸಲಹೆಗಾರರ ಮಾತಿಗೆ ಕಿವಿಗೊಟ್ಟು ಮೀರಾಳಿಗೆ ಘೋರಯಾತನೆಗಳನ್ನು ನೀಡಿದ. ಜನಶ್ರುತಿಯ ಪ್ರಕಾರ ದೇವರ ಚರಣಾಮೃತವೆಂದು ಮೀರಳಿಗೆ ವಿಷ ಕುಡಿಸಲಾಯಿತು. ಸಾಲಿಗ್ರಾಮದ ಪೆಟ್ಟಿಗೆಯೆಂದು ಹೇಳಿ ಅದರಲ್ಲಿ ಹಾವನ್ನಿಟ್ಟು ಅವಳ ಬಳಿಗೆ ಕಳುಹಿಸಲಾಯಿತು. ಆದರೆ ಶ್ರೀಹರಿಯ ದಯೆಯಿಂದ ಮೀರ ಬದುಕುಳಿದಳು.

ಇಂಥ ತೀವ್ರಸ್ವರೂಪದ ಘಟನೆಗಳಾದ ಮೇಲೆ ಮೇಢತಾ ರಾಜ್ಯದ ಅರಸು ವೀರಮದೇವ ತನ್ನ ಸೋದರಬಂಧುವಾಗಿದ್ದ ಮೀರಾಳನ್ನು ತನ್ನಲ್ಲಿಗೇ ಕರೆಸಿಕೊಂಡ. ಈ ಮೊದಲೇ ಪ್ರಸ್ತಾಪಿಸಿರುವಂತೆ ವೀರಮದೇವನ ಮಗ ಜಯಮಲ್ಲ ಸಹ ಕೃಷ್ಣಭಕ್ತನಾಗಿದ್ದುದು ಮೀರಾಳಿಗೆ ಅನುಕೂಲವಾಯಿತು. ವೀರಮದೇವ ರಾಜ್ಯಭ್ರಷ್ಟನಾದಾಗ ಅವನೊಡನೆ ಮೀರಾ ಸಹ ಅಜಮೀರು ಸೇರಿದಳು. ಆದರೆ ಕೆಲಕಾಲದಲ್ಲೇ ಅಜಮೀರ್ ಸಹ ಆಕ್ರಮಣಕ್ಕೊಳಗಾಗಿ ಮೀರ ವೃಂದಾವನದ ಕಡೆಗೆ ಹೊರಟು ಬಂದಳು.

ಮೀರಾಳ ಬದುಕಿನಲ್ಲಿ ವೃಂದಾವನ ಪ್ರವಾಸ ಅಪೂರ್ವ ಅನುಭವಗಳನ್ನು ಒದಗಿಸಿದವು. ಭಕ್ತರ ಮತ್ತು ಸಂತರ ಸಾಹಚರ್ಯ ಅವಳಿಗೆ ನಿತ್ಯವೂ ಒದಗುತ್ತಿತ್ತು. ಅವಳ ಭಕ್ತಿಪ್ರವಾಹಕ್ಕೆ ಒಂದು ನಿರ್ದಿಷ್ಟವಾದ ದಿಕ್ಕು ಮತ್ತು ಸ್ವರೂಪ ದೊರೆತವು. ಅವಳ ಕಲ್ಪನಾಪ್ರಸೂತನಾಗಿದ್ದ ಪ್ರಭುವಿನ ಪ್ರತ್ಯಕ್ಷ ದರ್ಶನ ವೃಂದಾವನದಲ್ಲಿ ದೊರೆಯಿತು. ವೃಂದಾವನದಲ್ಲಿ ಬಹಳ ಕಾಲ

ಮೀರಾಳ ಭಕ್ತಿಗೀತೆಗಳ ಗುಂಜಾರವ ಕೇಳಿಬರುತ್ತಿತ್ತು. ಮೀರಾ ೧೫೫೮ ಮತ್ತು ೧೫೬೩ರ ನಡುವೆ ವೃಂದಾವನದಲ್ಲಿ ಶ್ರೀಹರಿಯ ಪಾದವನ್ನು ಸೇರಿದ ಳೆಂಬುದು ವಿದ್ವಾಂಸರ ಅಭಿಪ್ರಾಯ.

ಪುರಂದರದಾಸರು ಮತ್ತು ಮೀರಾಬಾಯಿ ಇಬ್ಬರ ಬದುಕಿನಲ್ಲೂ ಅನೇಕ ತಿರುವುಗಳು ಕಂಡುಬಂದಿರುವುದು ನಿಜ. ಐತಿಹ್ಯದ ಪ್ರಕಾರ ಪುರಂದ ರರು ಮೊದಲು ಜಿಪುಣ ವ್ಯಾಪಾರಿಯಾಗಿದ್ದು ಇದ್ದಕ್ಕಿದ್ದ ಹಾಗೆಯೇ ಭಗ ವಂತನ ಲೀಲೆಗೆ ಮಾರುಹೋಗಿ ದಾಸರಾದರು. ಆದರೆ ಪರಿಸರ ಹಾಗೂ ಸನ್ನಿವೇಶಗಳ ಕಾರಣದಿಂದಾಗಿ ಎಳತನದಿಂದಲೇ ಮೀರಾಬಾಯಿಯಲ್ಲಿ ಭಕ್ತಿಯ ಉಗಮ ಕಂಡುಬರುತ್ತದೆ. ಮಹಿಳೆಯಾದ ಕಾರಣ ಸಾಮಾಜಿಕವಾದ ಮತ್ತು ಕೌಟುಂಬಿಕವಾದ ಅನೇಕ ಕಷ್ಟನಿಷ್ಠುರಗಳನ್ನು ಪುರಂದರರಿಗಿಂತ ಮಿಗಿಲಾಗಿ ಆಕೆ ಎದುರಿಸಬೇಕಾಯಿತು. ಪುರಂದರರಿಗೆ ವ್ಯಾಸರಾಯರಂಥ ಗುರುವರೇಣ್ಯರು ದೊರೆತರು. ಆದರೆ ಮೀರಾಬಾಯಿಯ ಗುರು ಯಾರೆಂ ಬುದು ಎಲ್ಲೂ ಸ್ಪಷ್ಟವಾಗುವುದಿಲ್ಲ. ಕೆಲವು ಮಂದಿ ವಿದ್ವಾಂಸರು ಕಾಶಿ ಯಲ್ಲಿದ್ದ ರೈದಾಸರು ಅವಳ ಗುರುಗಳಾಗಿದ್ದರೆಂದು ಹೇಳುತ್ತಾರೆ. ಮತ್ತೆ ಕೆಲವರು ವಲ್ಲಭಾಚಾರ್ಯರ ಮಗನಾದ ಗೋಸ್ವಾಮಿ ವಿಟ್ಠಲನಾಥ ಆಕೆಗೆ ವಲ್ಲಭಸಂಪ್ರದಾಯದ ದೀಕ್ಷೆಯನ್ನು ಕೊಟ್ಟಿದ್ದನೆಂದು ಪ್ರತಿಪಾದಿಸುತ್ತಾರೆ. ಮೀರಾ ವೃಂದಾವನದಲ್ಲಿದ್ದಾಗ ವಲ್ಲಭಸಂಪ್ರದಾಯದ ಜೀವಗೋಸ್ವಾಮಿ ಯನ್ನು ಭೇಟಿಯಾಗಿದ್ದಳೆಂದೂ ಆ ನಿಮಿತ್ತವಾಗಿ ಅವಳು ಚೈತನ್ಯರ ಶಿಷ್ಯ ಳಾಗಿದ್ದಳೆಂದೂ ಸಿದ್ಧಮಾಡಲು ಕೆಲವರು ಪ್ರಯತ್ನಿಸಿದ್ದಾರೆ.ಆದರೆ ಮೀರಾಳ ಕೆಲವು ರಚನೆಗಳಲ್ಲಿ ಎದ್ದು ಕಾಣುವಂತೆ ಆಕೆ ತನ್ನ ಕಾಲದ ಅನೇಕ ವಿಚಾರ ಧಾರೆಗಳಿಂದ ಹಾಗೂ ಭಕ್ತಿಪದ್ಧತಿಗಳಿಂದ ಪ್ರಭಾವಗೊಂಡಿದ್ದರೂ ಯಾವುದೇ ಒಂದು ಸಂಪ್ರದಾಯಕ್ಕೆ ಸೇರಿದವಳಾಗಿರಲಿಲ್ಲ. ಹಾಗೆಯೇ ಯಾರೊಬ್ಬರನ್ನೂ ತನ್ನ ಗುರುವಾಗಿ ಸ್ವೀಕರಿಸಿರಲಿಲ್ಲ. ಪುರಂದರರು 'ಹೆಂಡತಿ ಸಂತತಿ ಸಾವಿರವಾಗಲಿ, ದಂಡಿಗೆ ಬೆತ್ತ ಹಿಡಿಸಿದಳಯ್ಯ' ಎಂದು ತಮ್ಮ ಸಾಧನೆಯ ಶ್ರೇಯಸ್ಸಿನ ಒಂದು ಭಾಗವನ್ನು ಮಡದಿಗೆ ನೀಡಿರುವಂತೆ ಮೀರಾ

ಮಾ ರೀ ರೀ ಗಿರಿಧರ ಗೋಪಾಲ ದೂಸರಾ ನ ಕೋಯಿ
ದೂಸರಾ ನ ಕೋಯೋ ಸಾಂಧಾ ಸಕಲ ಲೋಕ ಜೂಯಾಂ[1]

ಎಂಬುದಾಗಿ ಶ್ರೀಕೃಷ್ಣನಿಗೇ ತನ್ನ ಸಾಧನೆಯ ಶ್ರೇಯಸ್ಸನ್ನು ಅರ್ಪಿಸಿದ್ದಾಳೆ.

[1] ನನ್ನ ಗಿರಿಧರಗೋಪಾಲನ ಬಿಟ್ಟರೆ ಬೇರೆ ಯಾರೂ ಇಲ್ಲ
ಬೇರೆ ಯಾರೂ ಇಲ್ಲ ಜಾಲಾಡಿದೆ ನಾ ಜಗದೊಳಗೆಲ್ಲ

ಮೀರಾ ಭಾವುಕಳೂ, ಭಕ್ತಳೂ ಆಗಿದ್ದ ಒಬ್ಬ ಗಾಯಕಿ. ಅವಳು ಯಾವುದೇ ಧಾರ್ಮಿಕ ಇಲ್ಲವೆ ದಾರ್ಶನಿಕ ಸಂಪ್ರದಾಯವನ್ನು ಸ್ಥಾಪಿಸಲು ಹೋದ ಆಚಾರ್ಯಳಾಗಿರಲಿಲ್ಲ. ಅಥವಾ ಕಬೀರರಂತೆ ನಿರ್ಭೀತಿಯಿಂದ ಹೊರಗಡೆ ನಿಂತು ಎಲ್ಲರೆದುರಿಗೆ ಸವಾಲು ಹಾಕುವವಳಾಗಿರಲಿಲ್ಲ. ಹಾಗೆಯೇ ಸೂರದಾಸರಂತೆ ಅವಳು ಒಂದು ಪಂಥಕ್ಕೆ ದೀಕ್ಷಾಬದ್ಧಳಾಗಿರಲಿಲ್ಲ. ಅಥವಾ ತುಳಸೀದಾಸರಂತೆ ದೊಡ್ಡ ಪಂಡಿತಳೆಂದೆನಿಸಿಕೊಂಡಿರಲಿಲ್ಲ. ನಮ್ಮ ಅನೇಕ ದಾಸರಂತೆಯೇ ಅವಳ ಮನಸ್ಸಿನಲ್ಲಿದ್ದ ತೀವ್ರ ಕೃಷ್ಣಭಕ್ತಿಭಾವನೆ ಮತ್ತು ಪ್ರೇಮ ಅಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತಿದ್ದವು. ತನ್ನ ಇಂಥ ಉದ್ಗಾರಗಳನ್ನು ವ್ಯವಸ್ಥಿತರೂಪದಲ್ಲಿ ಬರೆದಿಡುವ ಬಯಕೆಯಾಗಲಿ ಇಲ್ಲವೇ ಆವಶ್ಯಕತೆಯಾಗಲಿ ಅವಳಿಗೆ ಇದ್ದಂತಿಲ್ಲ. ತನ್ನ ಆರಾಧ್ಯದೈವವಾದ ಕೃಷ್ಣನ ಬಗ್ಗೆ ಸಮರ್ಪಣಭಾವದಿಂದ ಅವಳು ಹಾಡಿದ ಪದಗಳು ಜನತೆಯ ಮನಮುಟ್ಟಿ ದೂರ ದೂರದ ವರೆಗೆ ಹರಡಿಹೋದವು. ಆಸಕ್ತ ಜನರು ತಮ್ಮ ಮೂಗಿನ ನೇರಕ್ಕೆ ಅವಳ ಭಕ್ತಿಯನ್ನು ಸಗುಣ ನಿರ್ಗುಣ ಎಂದೆಲ್ಲ ಕರೆದರು ಅಷ್ಟೆ. ಅವಳ ಪದಗಳನ್ನು ಹಾಡುತ್ತಿದ್ದ ಜನರ ಪ್ರಾದೇಶಿಕ ವೈಶಿಷ್ಟ್ಯಗಳು ಮತ್ತು ಸಾಂಸ್ಕೃತಿಕ ಅಂಶಗಳು ಗೀತೆಗಳಲ್ಲಿ ಅನಿವಾರ್ಯವಾಗಿ ಹೊರಹೊಮ್ಮುತ್ತಿದ್ದವು. ಕೆಲವು ಮಂದಿ ಭಕ್ತರು ಅವಳ ಕಾಲದಲ್ಲಿ ಹಾಗೂ ತದನಂತರದಲ್ಲಿ ಪದಗಳನ್ನು ಲಿಪಿಗೆ ಅಳವಡಿಸಿದರು. ಈ ರೀತಿಯಾಗಿ ಇಂದು ನಮಗೆ ದೊರೆತಿರುವ ಮೀರಾ ಪದಗಳಲ್ಲಿ ಎಷ್ಟು ಆಕೆಯ ಸ್ವಂತದ್ದು, ಎಷ್ಟು ಪ್ರಕ್ಷಿಪ್ತ ಎಂದು ಹೇಳುವುದು ಕಷ್ಟ.

ಒಟ್ಟಿನಲ್ಲಿ ಮೀರಾ ಕೃತಿಗಳೆಂದು ಹೇಳಲಾಗುವ ಗ್ರಂಥಗಳ ಸಂಖ್ಯೆ ಹನ್ನೊಂದು. ಇವುಗಳಲ್ಲಿ ಕೆಲವು ಪೂರ್ಣವಾದರೆ ಮತ್ತೆ ಕೆಲವು ಅಪೂರ್ಣ. ಗೀತಗೋವಿಂದ ಟೀಕಾ, ನರಸೀ ಜೀ ಕಾ ಮಾಯುರಾ (ಅಥವಾ ಮಾಹೆರೋ), ರಾಗ್ ಸೋರಠಾ ಕಾ ಪದ್, ಮಲಾರ್ ರಾಗ್, ರಾಗ್ ಗೋವಿಂದ್, ಸತಭಾಮಾನುಂರೂಸಣುಂ, ಮೀರಾ ಕೀ ಗರ್ಬೀ, ರುಕ್ಮಿಣೀ ಮಂಗಲ್, ನರಸೀ ಮೆಹತಾ ನೀ ಹುಂಡೀ, ಚರೀತ್ (ಚರಿತ್ರೆ), ಸ್ಫುಟ್‌ಪದ್. ಆದರೆ ಈ ರಚನೆಗಳಲ್ಲಿ ಬಹುಪಾಲು ಮೀರಾಳವು ಆಗಿರಲಾರವು ಎಂಬುದೇ ಈಚಿನ ಅಭಿಪ್ರಾಯ. ಏಕೆಂದರೆ ಮೀರಾ ಪಟ್ಟಾಗಿಕುಳಿತುಕೊಂಡು ಗ್ರಂಥಗಳನ್ನು ಬರೆದ ಅಥವಾ ಬರೆಯಿಸಿದ ದಾಖಲೆಗಳು ಇಲ್ಲ. ವಾಸ್ತವವಾಗಿ ಅವಳ ರಚನೆಗಳೆಂದರೆ ಬಿಡಿಪದಗಳೇ. ರಾಜಸ್ಥಾನ, ಗುಜರಾತ್ ಮತ್ತು ಉತ್ತರಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ದೊರೆತಿರುವ ಆಕೆಯ 'ಪದ' ಗಳೇ ಮೀರಾಕೃತಿಗಳೆನ್ನಬಹುದು, ಈ ವರೆಗೆ ಮೀರಾಕೃತಿಗಳ ಸಂಗ್ರಹವೆಂದು ಹೇಳಲಾದ ಸುಮಾರು ಮೂವತ್ತಕ್ಕೂ

ಹೆಚ್ಚು ಗ್ರಂಥಗಳು ಬೆಳಕಿಗೆ ಬಂದಿವೆ. ಮೀರಾಳ ಒಟ್ಟು ಪದಗಳ ಸಂಖ್ಯೆ ಸುಮಾರು ಸಾವಿರದ ಮುನ್ನೂರರ ಆಜುಬಾಜಿನಲ್ಲಿದೆ. ಪುರಂದರದಾಸರ ರಚನೆಗಳ ಸಂಬಂಧವಾಗಿಯೂ ಇಂಥವೇ ಮಾತುಗಳನ್ನು ಕೇಳುತ್ತೇವೆ. ದಾಸರು ತಮ್ಮ ಲೌಕಿಕ, ದಾರ್ಶನಿಕ ಚಿಂತನೆಗಳನ್ನು ಹಾಗೂ ಹರಿಭಕ್ತಿಭಾವನೆಯನ್ನು ತಮ್ಮ ಪದಗಳ ಮೂಲಕವಾಗಿಯೇ ಹೊರಗೆಡವಿರುವುದನ್ನು ಕಾಣಬಹುದು.

ಮೀರಾಬಾಯಿಯ ಭಕ್ತಿಯನ್ನು ಮಧುರಭಕ್ತಿ ಎನ್ನಬಹುದು. ನಾರದರು ತಮ್ಮ ಭಕ್ತಿಸೂತ್ರದಲ್ಲಿ "ಯಥಾ ವ್ರಜ ಗೋಪಿಕಾನಾಂ" ಎಂದು ಉದಾಹರಿಸಿ ಪ್ರೇಮಭಕ್ತಿಯ ಸ್ವರೂಪ ಗೋಪಿಯರ ಕೃಷ್ಣಪ್ರೇಮದಂತಿರಬೇಕು ಎಂದಿದ್ದಾರೆ. ಮೀರಾ ಈ ಪ್ರೇಮಭಕ್ತಿಗೆ ಜೀವಂತ ಉದಾಹರಣೆ.

ಪ್ರೇಮ ಭಗತಿ ರೀ ಪೈಂಡಾ ಮ್ಹಾರೋ
ಔರ್ ನ ಜಾಣೋ ರೀತ್[1]

ಎಂಬುದಾಗಿ ಪ್ರೇಮಭಕ್ತಿಯೊಂದನ್ನು ತನ್ನ ಪಂಥವೆಂದು ಆಕೆ ಹೇಳಿದ್ದಾಳೆ. 'ಗಗನ ಮಂಡಲ್ ಮೇ ಸೇಜ್ ಪಿಯಾಕಿ ಕೇಹಿ ವಿಧಾ ಮಿಲಣಾ ಹೋಯ್'[2] ಎಂಬುದು ಮೀರಾಳ ಅಳಲು. 'ಮ್ಹಾರೋ ತೋ ಗಿರಿಧರಗೋಪಾಲ ದೂಸರಾ ನಾ ಕೋಯಿ'[3] ಎಂದು ಆ ದೈವಕ್ಕೆ ತನ್ನ ನಿಷ್ಠೆಯನ್ನು ಸಾರುತ್ತಾಳೆ. ಸೂರದಾಸರಿಗೆ ಕೃಷ್ಣ ಹಾಗೂ ತುಳಸೀದಾಸರಿಗೆ ರಾಮ ಇರುವಂತೆ ತನ್ನ ಪಾಲಿಗೆ 'ಗಿರಿಧರನಾಗರಪ್ರಭು' ಎಂದು ಆಕೆ ಹೇಳಿಕೊಂಡಿದ್ದಾಳೆ. ಮೀರಾಳ ಆರಾಧ್ಯ ದೈವ ಎಂದರೆ ಶ್ರೀಕೃಷ್ಣನ ಸಗುಣ ಸಾಕಾರವಾದ ಅವತಾರ ರೂಪವೇ :

ಮೇರೋ ಮನ್ ಬಸಿಗೋ ಗಿರಿಧರ ಲಾಲ್‌ಸೋ
ಮೋರ್ ಮುಕುಟ ಪೀತಾಂಬರೋ ಗಲ ಬೈಜಂತಿ ಮಾಲ್
ಗೌವನ್ ಕೆ ಸಂಗ್ ಡೋಲತ್ ಹೋ ಜಸುಮತಿ ಕೋ ಲಾಲ್[4]

ಭಗವಂತನನ್ನು ಕುರಿತಂತೆ ಮೀರಾ ಅನೇಕ ಬಗೆಯ ವರ್ಣನೆಗಳನ್ನು ಮಾಡಿದ್ದಾಳೆ. ತನಗೆ ಯಾವ ಸಮಯದಲ್ಲಿ ಯಾವ ರೂಪದಲ್ಲಿ ಅವನನ್ನು ಕಲ್ಪಿಸಿಕೊಳ್ಳಲು ಸಾಧ್ಯವಿತ್ತೋ ಆ ರೂಪದಲ್ಲೆಲ್ಲಾ ಅವನನ್ನು ಬಣ್ಣಿಸಿದ್ದಾಳೆ.

---

1 ಪ್ರೇಮಭಕುತಿಯೇ ನನ್ನ ಮನದಳಲು ಬೇರೆ ರೀತಿಯನರಿಯೆ
2 ಗಗನ ಮಂಡಲದಲ್ಲಿ ಶಯನನವನು; ಅವನನ್ನು ನಾನು ಹೇಗೆ ಸೇರಲಿ
3 ಗಿರಿಧರಗೋಪಾಲನ ಬಿಟ್ಟರೆ ನನಗಿನ್ನಾರಿಲ್ಲ
4 ಎನ್ನ ಮನದಲಿ ನೆಲಸು ಹೇ ಗಿರಿಧರಲಾಲ
ಶಿರದಲಿ ಕಿರೀಟ ಪೀತಾಂಬರಧಾರಿ ಕೊರಳಲಿ ವೈಜಯಂತೀ ಮಾಲೆ
ಹಸುಗಳ ಜೊತೆಯಲಿ ಹಾಡುತ ಕುಣಿಯುವ ಯಶೋದೆ ನಂದನ

ಭಗವತ್ ಸಂಬಂಧವಾದ ಅವಳ ವಿರಹವೇದನೆ ಹಾಗೂ ಆತ್ಮೋತ್ಸರ್ಗ ಭಾವನೆ ಅಚಲವಾದವು.

ಪುರಂದರದಾಸರ ಹಾಗೂ ಮೀರಾಬಾಯಿಯ ಭಕ್ತಿಪದ್ಧತಿಗಳಿಗೆ ಇರುವ ಪ್ರಮುಖವಾದ ಹೋಲಿಕೆ ಮತ್ತು ವ್ಯತ್ಯಾಸಗಳೆಂದರೆ: ದಾಸರು ಸಹ ಮೀರಾಳಂತೆಯೇ ಸಗುಣರೂಪವಾಗಿಯೇ ಶ್ರೀಹರಿಯನ್ನು ಸ್ತುತಿಸಿರುವುದು. ಉದಾ :

ಕಾಶಿ ಪೀತಾಂಬರ ಕೈಯಲ್ಲಿ ಕೊಳಲು ಪೂಸಿದ ಶ್ರೀಗಂಧ ಮೈಯೊಳಗಮ್ಮಾ
ಲೇಸಾಗಿ ತುಳಸಿಮಾಲೆಯ ಹಾಕಿದ ವಾಸುದೇವ ಬಂದ ಕಾಣಿರೇನೆ

ಮೀರಾಬಾಯಿಯ ಪ್ರೇಮಭಕ್ತಿ ವಾಸ್ತವವಾಗಿ ತನ್ನ ಇಷ್ಟದೇವನೊಡನೆ ದಾಂಪತ್ಯಭಾವವನ್ನು ಕಲ್ಪಿಸಿಕೊಳ್ಳುತ್ತದೆ. ಅವಳ ಮನಸ್ಸಿನಲ್ಲಿದ್ದ ಗಿರಿಧರ ಗೋಪಾಲನ ಬಗೆಗಿನ ಅಗಾಧಪ್ರೇಮ ಉದಾತ್ತತೆಯನ್ನು ಗಳಿಸಿಕೊಳ್ಳುತ್ತದೆ. ಹಾಗಾಗಿ ಮೀರಾಳ ಪದಗಳಲ್ಲೆಲ್ಲ ಶ್ರೀಕೃಷ್ಣನ ರೂಪ ಮಾಧುರ್ಯಗಳ ವರ್ಣನೆ, ವಿರಹಕಾತುರತೆ ಎದ್ದು ಕಾಣುತ್ತದೆ :

ಹರಿ ಬಿನ್ ಕ್ಯೂಂ ಜೀವೂಂ ರೀ ಮಾಯ್
ಮೀನ್ ಜಲ್ ಬಿಛುಡಿಯಾ ನಾ ಜೀವಾಂ, ತಲಫ್ ತಲಫ್ ಮರಿ ಜಾಯ್[1]

ಎಂದು ಮುಂತಾಗಿ ತನ್ನ ಹೃದಯದ ಅಳಲನ್ನು ತೋಡಿಕೊಳ್ಳುತ್ತಾಳೆ. ಭಕ್ತಿಯ ವಿವಿಧ ಪ್ರಕಾರಗಳಾದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ವಂದನ, ದಾಸ್ಯ ಇವೆಲ್ಲ ಮೀರಾ ಪದಗಳಲ್ಲಿ ವಿಪುಲವಾಗಿ ಕಂಡುಬರುತ್ತವೆ.

ಇದಕ್ಕೆ ಪ್ರತಿಯಾಗಿ ಪುರಂದರದಾಸರ ಭಕ್ತಿಪದ್ಧತಿ ಶ್ರೀಹರಿಯನ್ನು ಪ್ರಮುಖವಾಗಿ ದಾಸ್ಯಭಾವದಿಂದ ಆರಾಧಿಸುವುದು.'ಈ ಪರಿಯ ಸೊಬಗಾವ ದೇವರಲಿ ಕಾಣೆ', 'ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ', 'ಶರಣು ಶರಣು ನಿನಗೆಂಬೆನೋ ವಿಠಲ', 'ನೀನೇ ಅನಾಥಬಂಧು ಕಾರುಣ್ಯಸಿಂಧು', 'ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ'ಮುಂತಾದ ಪದಗಳನ್ನು ಈ ನಿಟ್ಟಿನಲ್ಲಿ ಉದಾಹರಿಸಬಹುದು. ಆದರೆ ಮೀರಾಳಂತೆ ಪುರಂದರದಾಸರಲ್ಲಿಯೂ ಮಧುರ ಭಕ್ತಿಯ ಆವಿರ್ಭಾವವನ್ನು ವಿಶೇಷವಾಗಿ ಗಮನಿಸಬಹುದು. ಅವರ ''ಮುತ್ತೈದೆಯಾಗಿರಬೇಕು ಮುದದಿ ಹತ್ತುನೂರು ನಾಮದೊಡೆಯ ಹರಿ ನಮ್ಮ ಪತಿ

---

1 ಹರಿಯಿಂದ ನಾ ದೂರಾದರೆ ನಾನೇಕೆ ತಾವೇ ಬದುಕಲಿ
ನೀರಿಂದ ಹೊರಗೆಳೆದ ಮೀನಿನಂತೆ ಒದ್ದಾಡಿ ಒದ್ದಾಡಿ ಸಾಯುವೆ

ಯೆಂದು''—ಎನ್ನುವ ಕೀರ್ತನೆ ಅವರ ಮಧುರಭಕ್ತಿಯ ಅಭಿವ್ಯಕ್ತಿಗೆ ಅತ್ಯುತ್ತಮ ಉದಾಹರಣೆ. ಮತ್ತು ಶ್ರವಣಾದಿ ಭಕ್ತಿವೈವಿಧ್ಯ ಪುರಂದರರ ಕೃತಿಗಳಲ್ಲೂ ಹಾಸುಹೊಕ್ಕಾಗಿದೆ.

ಮೀರಾ ಪದಗಳಲ್ಲಿ ರಹಸ್ಯಭಾವನೆ ಹಾಗೂ ವಿಶಿಷ್ಟವಾದ ದಾರ್ಶನಿಕ ಅಭಿವ್ಯಕ್ತಿಗಳನ್ನು ಗುರುತಿಸಬಹುದಾಗಿದೆ. ಅವಳ ಬ್ರಹ್ಮಕಲ್ಪನೆ ಸಗುಣಸಾಕಾರ ಶ್ರೀಕೃಷ್ಣನ ರೂಪದಲ್ಲಿ ಮೂಡಿಬಂದಿದೆ. ಎಳೆತನದಿಂದಲೇ ಪೂರ್ವರಾಗದ ರೂಪದಲ್ಲಿ ಅವಳ ಅಭಿಲಾಷೆ ಸೊಗಸಾಗಿ ವ್ಯಕ್ತಗೊಂಡಿದೆ. ಜೀವ ಮತ್ತು ಬ್ರಹ್ಮಗಳನ್ನು ಮೀರ ಅಭೇದವಾಗಿ ಕಂಡಿದ್ದಾಳೆ :

ತುಮ್ ಬಿಚ್ ಹಮ್ ಬಿಚ್ ಅಂತರ್ ನಾಹೀ
ಜೈಸೇ ಸೂರಜ್ ಘಾಮಾ[1]

ಎಂದಿದ್ದಾಳೆ ಮೀರಾ. ಬ್ರಹ್ಮದ ಸರ್ವವ್ಯಾಪಕತೆ, ಸರ್ವಶಕ್ತತೆ, ಅನಶ್ವರತೆ ಹಾಗೂ ರಹಸ್ಯಮಯತೆಯನ್ನು ಮೀರಾ ತನ್ನ ಅನೇಕ ಪದಗಳಲ್ಲಿ ಹೊರಗೆಡವಿದ್ದಾಳೆ. ರಹಸ್ಯಭಾವನೆಯ ಮತ್ತೊಂದು ರೂಪವಾಗಿ ಪ್ರಿಯತಮನೊಡನೆ ಜೊತೆಗೂಡುವ ಸಲುವಾಗಿ ಜೀವದ ಹಾತೊರೆಯುವಿಕೆಯನ್ನು ಸಹ ಮೀರಾಳ ಪದಗಳಲ್ಲಿ ಕಾಣಬಹುದು. ಈ ದರ್ಶನಾಕಾಂಕ್ಷೆಯಲ್ಲೇ ಆಕೆಯ ಆತ್ಮಜ್ಞಾನದ ಸ್ವರೂಪವೂ ಕಂಡುಬರುತ್ತದೆ :

ಪ್ಯಾರೇ ದರ್ಶನ್ ದೀಜೋ ಆಯ್, ತುಮ್‌ಬಿನ್ ರಹ್ಯೋ ನಜಾಯ್
ಜಲ ಬಿನ್ ಕಮಲ, ಚಂದ ಬಿನ್ ರಜನೀ,ಐಸೇ ತುಮ್ ದೇಖ್ಯಾ ಬಿನ ರಜನಿ[2]

ತನ್ನ ಪ್ರಿಯತಮನೊಡನೆ ಏಕೀಭವಗೊಳ್ಳುವ ಹಂತದ ಮೂಲಕ ಮೀರಾ ದರ್ಶನದ ಪರಾಕಾಷ್ಠೆ ಸಿದ್ಧಿಯನ್ನು ಪಡೆದಿದೆ.ಸಾಧನಾ ಮಾರ್ಗದಲ್ಲಿರುವ ಜೀವ ವಿಭಿನ್ನ ಸಾಧನಾ ಪ್ರಕಾರಗಳ ಮೂಲಕ ಬ್ರಹ್ಮದೊಡನೆ ಸಂಬಂಧವನ್ನೇರ್ಪಡಿಸಿಕೊಂಡಾಗ ಎಲ್ಲ ಚಿತ್ತವೃತ್ತಿಗಳೂ ಲೌಕಿಕ ವಿಷಯಗಳಿಂದ ಹಿಂದೆ ಸರಿದು ಅಲೌಕಿಕವಾದ ದಿವ್ಯಪ್ರಭೆಯುಳ್ಳ ಲೋಕವೊಂದನ್ನು ಸೇರಿದ ಹಾಗಾಗುತ್ತದೆ. ಅಂತಹ ಎಡೆಯಲ್ಲಿ ಜೀವಾತ್ಮ ಅನಂತ ಸುಖವನ್ನು ಅನುಭವಿಸುತ್ತದೆ. ಮಿಲನಾನಂದದ ಈ ಅನುಭವ ಮೀರಾಳ ಪದಗಳಲ್ಲಿ ಹೇಗೆ ಕಾಣುತ್ತದೆಂಬುದಕ್ಕೆ ಒಂದು ಉದಾಹರಣೆ ಹೀಗಿದೆ :

---

1 ನಿನ್ನ ಮತ್ತು ನನ್ನ ನಡುವೆ ಯಾವುದೇ ಅಂತರವಿಲ್ಲ
ಸೂರ್ಯ ಮತ್ತು ಕಿರಣಗಳಂತೆ

2 ದರುಶನವ ಕೊಡು ಬಾ ಎಲೆ ದೊರೆಯೆ ನೀನಿಲ್ಲದಿರಲಾರೆ
ನೀರಿಲ್ಲದ ಕಮಲ, ಚಂದಿರನಿಲ್ಲದ ರಾತ್ರಿ ನಿನ್ನ ಕಾಣದ ನನ್ನಿನಿಯೆ

ಮ್ಹಾ ಗಿರಿಧರ ರಂಗ್ ರಾತೀ ಸೈಯಾ ಮ್ಹಾ
ಪಂಚರಂಗ್ ಚೋಲಾ ಪಹರ್ಯಾ ಸಖೀ ಮ್ಹಾ ಝಿರಮಿಟ್ ಖೇಲಣ್ ಜಾತೀ
ವ್ಹಾ ಝಿರಮಿಟ್ ಮಾ ಮಿಲ್ಯೋ ಸಾವರೋ, ದೇಖ್ಯಾ ತಣ್ ಮಣ್ ರಾತೀ
ಜಿಣರೋ ಪಿಯಾ ಪರದೇಸ್ ಬಸ್ಯಾರೀ ಲಿಖ್ ಲಿಖ್ ಭೇಜ್ಯಾ ಪಾತೀ
ಮ್ಹಾರಾ ಪಿಯಾ ಮ್ಹಾರೇ ಹೀಯಡೇ ಬಸತಾ ಣಾ ಆವಾಂ ಣಾ ಜಾತೀ
ಮೀರಾ ಕೇ ಪ್ರಭು ಗಿರಿಧರನಾಗರ್ ಮಗ್ ಜೋವಾ ದಿಣ್ ರಾತೀ[1]

ಪುರಂದರದಾಸರ ಬ್ರಹ್ಮಕಲ್ಪನೆಯೂ ಸಗುಣ ಸಾಕಾರವಾಗಿಯೇ ಮೂಡಿಬಂದಿದ್ದರೂ ಅವರು ಯಾವ ಹಂತದಲ್ಲೂ ಭಗವಂತನೊಡನೆ ಅಭೇದವನ್ನು ಗುರುತಿಸಿಕೊಳ್ಳುವುದಿಲ್ಲ. ಭೇದತತ್ವ ಅವರ ದರ್ಶನದ ಮೂಲಭೂತ ನಿಲುವು. 'ದ್ವೈತ ತತ್ವದ' ಉಪಾಸಕರವರು. ಕೃಷ್ಣನನ್ನು ಕಣ್ಣಾರ ಕಂಡು 'ಕಣ್ಣಾರೆ ಕಂಡೆ ಅಚ್ಯುತನ' ಎಂದು ಧನ್ಯರಾಗಿದ್ದಾರೆ. ಇದೇ ಅವರ ದರ್ಶನದ, ಆನಂದಾನುಭವದ ಅಂತಿಮ ಘಟ್ಟ; ಮುಂದೆ ಮುಕ್ತಿಯು ನಿಲುವು.

ತಮ್ಮ ತಮ್ಮ ಸಾಧನಾ ಮಾರ್ಗಗಳಲ್ಲಿ ಪುರಂದರದಾಸರು ಮತ್ತು ಮೀರಾಬಾಯಿ ವೈಯಕ್ತಿಕವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ ಅನೇಕ ಕಷ್ಟನಷ್ಟಗಳನ್ನು ಅನುಭವಿಸಿ ಚಿನ್ನಕ್ಕೆ ಪುಟವಿಟ್ಟಂತೆ ಕೃತಾರ್ಥರಾದವರು. ಪುರಂದರದಾಸರಿಗೆ ಹೋಲಿಸಿದರೆ ಮೀರಾಳ ಸಾಧನಾ ಮಾರ್ಗದಲ್ಲಿ ಅನೇಕ ಮಿತಿಗಳಿದ್ದವು. ಮೀರಾಳ ಕೃಷ್ಣಭಕ್ತಿ ಏಕಮುಖವಾಗಿತ್ತು. ಅವಳಿಗೆ ತನ್ನ ಪರಿಸರವೆಲ್ಲ ಕೃಷ್ಣಮಯವೇ ಆಗಿತ್ತು. ಆದರೆ ದಾಸರು ಸಂಚಾರಿಗಳು. ದೇಶಗಳನ್ನು ಸುತ್ತಿ ಜನಮಾನಸದ ನಾಡಿಯನ್ನು ಹಿಡಿದು ನೋಡಿದವರು. ವೈವಿಧ್ಯಮಯವಾದ ಜೀವನಾನುಭವ ಅವರಿಗಿತ್ತು. ಲೋಕಜ್ಞಾನ ಸತ್ಸಂಗ ಶಾಸ್ತ್ರಜ್ಞಾನ ಇವು ಮುಪ್ಪುರಿಗೊಂಡು ದಾಸರ ದರ್ಶನವನ್ನು ಲೋಕೋತ್ತರವನ್ನಾಗಿ ಮಾಡಿದವು. ಇಡೀ ಜೀವನದ ಸಾರವನ್ನು ದಾಸರು ತಮ್ಮ ಅನುಭವದ ಮೂಸೆಯಲ್ಲಿ ಪರೀಕ್ಷಿಸಿ ಪಾಕಮಾಡಿ ಸಹೃದಯ ಜನರಿಗೆ ಉಣ

---

1 ಗಿರಿಧರನ ಬಣ್ಣದೊಳೊಂದಾದೆ ಸಖಿ ನಾ ಬಣ್ಣದೊಳೊಂದಾದೆ
ಐದು ಬಣ್ಣಗಳ ರವಿಕೆಯ ತೊಟ್ಟು ಜೂಟಾಟವ ಆಡಲು ನಾ ಹೋದೆ
ಜೂಟಾಟದಿ ಬಚ್ಚಿಟ್ಟುಕೊಂಡು ಕೂಳಿತಾಗ ದೊರೆತ ನನ್ನಿನಿಯನ
ನೋಡಿ ನಾ ತನುಮನದಲಿ ಮತ್ತಳಾದೆ
ಪ್ರಿಯತಮ ಬೇರೆಡೆ ಹೋದಲ್ಲಿ ಬರೆವಳು ಇನಿಯೆ ಸಂದೇಶವ
ನನ್ನೊಡೆಯ ನನ್ನೆದೆಯಲ್ಲಿ ಅಡಗಿರುವಾಗ ಯಾರಿಗೆ ನಾ ಬರೆಯಲಿ
ಮೀರಳ ಪ್ರಭು ಗಿರಿಧರನಾಗರ ನಾ ನಿನ್ನ ದಾರಿಯ ಕಾಯುವೆ ಹಗಲಿರುಳು

ಬಡಿಸಿದರು. ಹಾಗಾಗಿ ದಾಸರನ್ನು ಮತ್ತು ಮೀರಾಳನ್ನು ಇಂಥ ಇತಿಮಿತಿಗಳ ಕಾರಣದಿಂದಾಗಿ, ಎಲ್ಲ ದೃಷ್ಟಿಯಲ್ಲೂ ಹೋಲಿಕೆ ಮಾಡಲುಸಾಧ್ಯವಾಗುವುದಿಲ್ಲ.

ಮೀರಾಬಾಯಿಯನ್ನು ಗುಜರಾತಿನ ನರಸಿಂಹಮೆಹತಾ, ಹಿಂದಿಯ ಸೂರದಾಸ ಮತ್ತು ಕಬೀರದಾಸ, ಮರಾಠಿಯ ನಾಮದೇವ ಮುಂತಾದವರೊಡನೆ ಹೋಲಿಸಬಹುದಾದರೂ ತಮಿಳಿನ ಗೋದಾ ಹಾಗೂ ಕನ್ನಡದ ಅಕ್ಕಮಹಾದೇವಿಯರೊಡನೆ ತೌಲನಿಕ ಅಧ್ಯಯನ ತುಂಬ ಉಚಿತವೆನಿಸುವುದು. ಏಕೆಂದರೆ ಈ ಎಲ್ಲ ಮಹಿಳೆಯರು ಬದುಕಿನ ಹಲವಾರು ಘಟ್ಟಗಳಲ್ಲಿ ಸಮಾನ ಅನುಭವಿಗಳು.

ಪುರಂದರ ಹಾಗೂ ಮೀರಾ ಇಬ್ಬರ ಗಂತವ್ಯಗಳು ಒಂದೇ–ಭಗವತ್ಸಾಧನೆ – ಆಗಿರುವುದರಿಂದ ಕೆಲವಾರು ಸಮಾನಾಂಶಗಳು ಕಂಡುಬರುತ್ತವೆಂಬುದನ್ನು ನೋಡಿದೆವು. ದಾಸರ ದರ್ಶನ ರೂಪುಗೊಳ್ಳುವುದರಲ್ಲಿ ನಮ್ಮ ಪರಂಪರಾಗತ ಜ್ಞಾನ ಮತ್ತು ಶಾಸ್ತ್ರಾರ್ಥಗಳು ಲೋಕಾನುಭವದ ಜೊತೆ ಕೂಡಿಕೊಂಡು ಕಾರಣೀಭೂತವಾದುವಾದರೆ ಮೀರಾಳ ಮೇಲೆ ಉತ್ತರ ಭಾರತದ ಅನೇಕ ಮಂದಿ ಸಂತರ ಸೂಫಿಗಳ ಪ್ರಭಾವ ಸಾಕಷ್ಟು ಬಿದ್ದಿತ್ತು. ಎಳೆತನದಿಂದ ಬೆಳೆದ ತೀವ್ರ ಕೃಷ್ಣಪ್ರೇಮ ಬದುಕಿನ ಕಹಿಘಟನೆಗಳು ವಿಷಮತೆಗಳು ಆಕೆಯನ್ನು ಸಾಧನೆಯ ತುತ್ತತುದಿಗೆ ತಲುಪಿಸಿದವು. ಒಟ್ಟಿನಲ್ಲಿ ಹೇಳಬಹುದಾದರೆ ದಾಸರ ಮತ್ತು ಮೀರಾಬಾಯಿಯ ಭಕ್ತಿಸಾಧನೆ ಭಾರತೀಯ ಭಕ್ತಿಮಾರ್ಗದಲ್ಲಿ ಕಂಡುಬರುವ ಎರಡು ಅಮೋಘವಾದ ಮತ್ತು ಅಸದೃಶವಾದ ಮೈಲಿಗಲ್ಲುಗಳು ಎನ್ನಬಹುದು.

# ಪುರಂದರದಾಸರು – ಸೂರದಾಸರು

ಎ. ಎಂ. ರಾಮಚಂದ್ರ

ಭಾರತ ಸಾಧುಸಂತರ ನಾಡು; ಭಕ್ತಶಿರೋಮಣಿಗಳ ಸಿರಿಬೀಡು. ಆ ಭಕ್ತಶಿರೋಮಣಿಗಳು ವಿಭಿನ್ನ ಪ್ರಾಂತ್ಯಕ್ಕೆ ಸೇರಿದ್ದರೂ ವಿಭಿನ್ನ ಭಾಷಿಗಳಾಗಿದ್ದರೂ ಅವರ ವಿಚಾರಲಹರಿ ಒಂದು ಪ್ರಾಂತ್ಯಕ್ಕೆ ಒಂದು ರಾಷ್ಟ್ರಕ್ಕೆ ಒಂದು ಜನಾಂಗಕ್ಕೆ ಒಂದು ಕಾಲಕ್ಕೆ ಮಾತ್ರ ಸೀಮಿತವಾಗಿರದೆ, ಕಾಲಾತೀತವಾಗಿ ಇಡೀ ವಿಶ್ವದ ಜನತೆಗೆ ಉಪಾದೇಯವಾಗಿರುತ್ತದೆ. ಅಂತಹ ಭಕ್ತರ ಪರಂಪರೆಯಲ್ಲಿ ಬಾಳಿಬೆಳಗಿದ ಪುರಂದರದಾಸರು ಮತ್ತು ಸೂರದಾಸರು ಚಿರಸ್ಮರಣೀಯರು. ಅವರು ಬೋಧಿಸಿದ ತತ್ತ್ವಗಳು ಸರ್ವರಿಗೂ ಗ್ರಾಹ್ಯ, ಸ್ಮರಣೀಯ ಹಾಗೂ ಅನುಕರಣೀಯ.

ಪುರಂದರದಾಸರು ಮತ್ತು ಸೂರದಾಸರು ಸಮಕಾಲೀನರು. ಸೂರದಾಸರು ಹಿಂದಿ ಸಾಹಿತ್ಯಾಕಾಶದಲ್ಲಿ ಸೂರ್ಯನೆಂದು ಕೀರ್ತಿ ಪಡೆದಿದ್ದರೆ, ಪುರಂದರದಾಸರೇ ಕನ್ನಡ ಹರಿದಾಸಸಾಹಿತ್ಯಾಕಾಶದ ಸೂರ್ಯ. ಸೂರದಾಸರು ಬಾಳಿಬದುಕಿದ ಕಾಲ ಹಿಂದಿ ಸಾಹಿತ್ಯದ ಸುವರ್ಣ ಯುಗ; ಪುರಂದರದಾಸರು ಬಾಳಿ ಬದುಕಿದ ಕಾಲ ಹರಿದಾಸಸಾಹಿತ್ಯದ ಸುವರ್ಣಯುಗ. ಸೂರದಾಸರು ಸಂಗೀತಶಾಸ್ತ್ರದಲ್ಲಿ ನಿಷ್ಣಾತರು. ಅನೇಕ ಹೊಸ ಹೊಸ ರಾಗಗಳನ್ನು ಸೃಷ್ಟಿಸಿದ್ದಾರೆ. ಪುರಂದರದಾಸರೂ ಅನೇಕ ರಾಗಗಳಲ್ಲಿ ಕೃತಿಗಳನ್ನು ಮಾಡಿ ''ಕರ್ನಾಟಕಸಂಗೀತಪಿತಾಮಹ'' ಎಂಬ ಬಿರುದಿಗೆ ಪಾತ್ರರಾಗಿದ್ದಾರೆ. ಅವರೀರ್ವರೂ ಉತ್ತಮ ವಾಗ್ಗೇಯಕಾರರು. ಸೂರದಾಸರ ಗುರುಗಳ ಮಗ ಗೋಸ್ವಾಮಿ ವಿಟ್ಠಲನಾಥರು ಸೂರದಾಸರನ್ನು 'ಪುಷ್ಟಿಮಾರ್ಗದ ಹಡಗು' ಎಂದು ಹೊಗಳಿದ್ದರೆ ವ್ಯಾಸರಾಯರು ಪುರಂದರರನ್ನು ''ದಾಸರೆಂದರೆ ಪುರಂದರದಾಸರಯ್ಯ'' ಎಂದು ಹೊಗಳಿದ್ದಾರೆ. ಶಿಷ್ಯರು ಗುರುಗಳನ್ನು ಹೊಗಳುವುದು ಲೋಕರೂಢಿ. ಆದರೆ ಇಲ್ಲಿ ಶಿಷ್ಯರ ಸಿದ್ಧಿಯನ್ನು ಮೆಚ್ಚಿಕೊಂಡು ಗುರುಗಳೇ ಶಿಷ್ಯರನ್ನು ಮುಕ್ತಕಂಠದಿಂದ ಹೊಗಳಿರುವುದು ಗಮನಾರ್ಹ ಸಂಗತಿ ಹಾಗೂ ಸೂರದಾಸರ ಮತ್ತು ಪುರಂದರದಾಸರ ಹಿರಿಮೆ–ಗರಿಮೆಗಳಿಗೆ ಜ್ವಲಂತ ಸಾಕ್ಷಿ.

ಸೂರದಾಸರ ಕೀರ್ತನೆಗಳು ಹಿಂದಿ ಸಾಹಿತ್ಯಕ್ಕೆ ಅಮರತ್ವವನ್ನು ವೈವಿಧ್ಯವನ್ನು ವೈಶಾಲ್ಯವನ್ನು ವೈಶಿಷ್ಟ್ಯವನ್ನು ಒದಗಿಸಿರುವಂತೆ ಪುರಂದರ

ದಾಸರ ಕೀರ್ತನೆಗಳೂ ಕನ್ನಡಸಾಹಿತ್ಯಕ್ಕೆ ತಮ್ಮ ಅಪೂರ್ವ ಕೊಡುಗೆಯನ್ನು ನೀಡಿವೆ. ಸೂರದಾಸರು ಮತ್ತು ಪುರಂದರದಾಸರು ಸಗುಣೋಪಾಸಕರು. ಅವರ ಆರಾಧ್ಯದೈವ ಶ್ರೀಹರಿ. ಹರಿಯ ಮಹಿಮೆಯ ಗುಣಗಾನ ಅವರ ಕಾವ್ಯದ ಕೇಂದ್ರಬಿಂದು. ದೇವ–ಮಾನವ ಹಾಗೂ ಮಾನವ–ಸಮಾಜ ಸಂಬಂಧ ಅವರ ವರ್ಣನೆಯ ವಿಷಯ. ಅವರು ಪ್ರಥಮತಃ ಭಕ್ತರು. ಅವರ ಹೆಸರಿನಲ್ಲಿ ಸೇರಿರುವ ದಾಸ ಎಂಬುದು ಈ ಭಕ್ತರ ಭಕ್ತಿಸಾಧನೆಯನ್ನು ಸೂಚಿಸುತ್ತದೆ. ಅವರ ಭಕ್ತಿಸಾಧನೆಯಲ್ಲಿ ಶಾಂತ ದಾಸ್ಯ ಸಖ್ಯ ಮಧುರ ಮತ್ತು ವಾತ್ಸಲ್ಯ ಭಾವಗಳ ಮನೋಜ್ಞ ನಿರೂಪಣೆ ಇದೆ. ಇಬ್ಬರಲ್ಲೂ ನವವಿಧ ಭಕ್ತಿಯ ವರ್ಣನೆಯಿದೆ. ಇವರು ಚಿತ್ರಿಸಿರುವ ಬಾಲಕೃಷ್ಣನ ವಿವಿಧ ಲೀಲೆಗಳು 'ಭಾಗವತ'ದ ಆಧಾರದ ಮೇಲೆ ಚಿತ್ರಿತವಾಗಿದ್ದರೂ ಭಾಗವತದ ಅನುವಾದವಲ್ಲ. ಅವರು ವರ್ಣಿಸಿರುವ ಬಾಲಕೃಷ್ಣನ ಲೀಲೆಗಳಲ್ಲಿ ಸ್ವೋಪಜ್ಞತೆ ಇದೆ ; ಸಹಜತೆ ಇದೆ.

ಬಾಲಕೃಷ್ಣನ ಅಸಾಧಾರಣ ಚೆಲುವು, ಬಾಲಕೃಷ್ಣ ತೊಟ್ಟಿಲಲ್ಲಿ ಮಲಗಿ ನಿದ್ದೆ ಬಂದವನಂತೆ ನಟಿಸುವುದು, ಅಂಬೆಗಾಲಿಡುವುದು,ಹೊಸ್ತಿಲನ್ನು ದಾಟಲು ಪ್ರಯತ್ನಿಸುವುದು,ನಡೆಯಲು ಪ್ರಯತ್ನಿಸಿ ತೊಡರಿ ಬೀಳುವುದು, ಯಶೋದೆ ಬಾಲಕೃಷ್ಣನಿಗೆ ನಡಿಗೆ ಕಲಿಸುವುದು, ನಡಿಗೆ ಕಲಿತ ಮೇಲೆ ಕೃಷ್ಣ ಅಕ್ಕಪಕ್ಕದ ಮನೆಗಳಿಗೆ ಓಡಿಹೋಗುವುದು, ಕೃಷ್ಣನಿಗಾಗಿ ಯಶೋದೆ ಹುಡುಕಾಡುವುದು. ನನ್ನ ಮುದ್ದು ಕಂದನನ್ನು ಕಂಡಿರಾ ಎಂದು ಎದುರಿಗೆ ಸಿಕ್ಕಿದ ಗೋಪಿಯರನ್ನು ಯಶೋದೆ ವಿಚಾರಿಸುವುದು, ಅವರಿವರ ಮನೆಯಲ್ಲಿ ಕೃಷ್ಣ ಹಾಲು ಮೊಸರು ಬೆಣ್ಣೆ ಕದಿಯುವುದು, ಅವರ ಮಡಿಕೆ ಕುಡಿಕೆಗಳನ್ನು ಒಡೆದು ಹಾಕುವುದು,ಕೃಷ್ಣನ ಕಾಟ ತಡೆಯಲಾರದೆ ಗೋಪಿಯರು ಯಶೋದೆಯ ಬಳಿ ದೂರುವುದು, ತಾಯಿ ಮಗನ ಪಕ್ಷ ವಹಿಸಿ ಮಾತನಾಡುವುದು, ಯಶೋದೆ ಮಗನಿಗೆ ಬುದ್ಧಿವಾದ ಹೇಳುವುದು, ಕೃಷ್ಣ ತಾನು ನಿರಾಪರಾಧಿ ಎಂದು ಸಮರ್ಥಿಸಿಕೊಳ್ಳುವುದು, ಕೃಷ್ಣ ಮಣ್ಣು ತಿಂದನೆಂದು ಗೋಪಿಯರು ಚಾಡಿ ಹೇಳುವುದು, ಯಶೋದೆ ಮಗನನ್ನು ಗದರಿಸಿ ಬಾಯಿ ತೆರೆಯಲು ಹೇಳಿದಾಗ ಬಾಯಲ್ಲೇ ವಿಶ್ವರೂಪವನ್ನು ತೋರಿಸುವುದು, ಬಲರಾಮ ಮತ್ತು ಸಂಗಡಿಗರೊಡನೆ ಆಟವಾಡಲು ಹೋಗುವುದಿಲ್ಲ; ಅವರು ನನ್ನನ್ನು ಛೇಡಿಸುತ್ತಾರೆ ಎಂದು ಕೃಷ್ಣ ಯಶೋದೆ ಬಳಿ ದೂರುವುದು,ಕೆಲವು ವೇಳೆ ಕೃಷ್ಣ ಹಾಲು ಕುಡಿಯೆಂದೇ ಹಟಮಾಡುವುದು, ನಿನ್ನ ಜುಟ್ಟು ಬೇಗ ಬೆಳೆಯುತ್ತೆ ಎಂದು ಪುಸಲಾಯಿಸಿ ಯಶೋದೆ ಅವನಿಗೆ ಹಾಲು ಕುಡಿಸುವುದು,ಮತ್ತೆ ಕೆಲವು ವೇಳೆ ಗುಮ್ಮ ಬರುತ್ತದೆಂದು ಹೆದರಿಸಿ ಹಾಲು ಕುಡಿಸುವುದು, ಹಾಲು ಕರೆಯುವುದನ್ನು

ಕಲಿಸು ಎಂದು ನಂದನಲ್ಲಿಗೆ ಹೋಗಿ ಕೃಷ್ಣ ಹಟ ಮಾಡುವುದು, ಹಾಲು ಕರೆಯಲು ಸಿದ್ಧನಾಗಿ ಪಾತ್ರೆ ಹಿಡಿದು ನಿಲ್ಲುವುದು, ಕಾಳಿಂಗಮರ್ದನ, ಮುರಲಿ ಮಹಿಮೆ – ಮುಂತಾದ ನೂರಾರು ಚಿತ್ರಗಳನ್ನು ಸೂರದಾಸರು ಮತ್ತು ಪುರಂದರದಾಸರು ರಮ್ಯೋಜ್ವಲವಾಗಿ ಕಟ್ಟಿಕೊಡುತ್ತಾರೆ. ಗುಣದ ದೃಷ್ಟಿಯಿಂದ ಒಂದೇ ಆದರೂ ಸಂಖ್ಯಾ ದೃಷ್ಟಿಯಿಂದ ಸೂರದಾಸರು ವರ್ಣಿಸಿರುವ ಕೃಷ್ಣನ ಲೀಲೆಗಳು ಅಪರಿಮಿತ. ಈ ಇಬ್ಬರ ವರ್ಣನೆಗಳಲ್ಲಿಯ ಕೆಲವು ಭಾವ ಸಾಮ್ಯಗಳನ್ನು ಒಂದೆರಡು ಉದಾಹರಣೆಗಳಿಂದ ಪರಿಶೀಲಿಸಬಹುದು.

ಸೂರದಾಸರು ಮತ್ತು ಪುರಂದರದಾಸರು ವರ್ಣಿಸಿರುವ ಬಾಲಕೃಷ್ಣನ ಸೌಂದರ್ಯ ಯಶೋದೆ ಮತ್ತು ನಂದರನ್ನೇ ಅಲ್ಲದೆ ಸಮಸ್ತ ಗೋಪಿ–ಗೋಪಾಲರನ್ನೂ ಆಕರ್ಷಿಸಿದೆ. ಸೂರದಾಸರು ಬಗೆಬಗೆಯಾಗಿ ಬಾಲಕೃಷ್ಣನ ಸೌಂದರ್ಯವನ್ನು ವರ್ಣಿಸಿ ಕೊನೆಗೆ ಆ ಸೌಂದರ್ಯ ವರ್ಣಿಸಲಸದಳವೆಂದು ತಮ್ಮ ಅಸಾಮರ್ಥ್ಯವನ್ನು ಒಪ್ಪಿಕೊಂಡಿದ್ದಾರೆ :

ಕಹಾ ಲೌಂ ಬರನೌಂ ಸುಂದರತಾಈ
ಖೇಲತ ಕುಂವರ ಕನಕ ಅಂಗನ ಮೇಂ ನೈನ ನಿರಖಿ ಛಬಿ ಪಾಈ
ಕುಲಹಿ ಲಸತಿ ಸಿರಶ್ಯಾಮ ಸುಂದರಕೈ,ಬಹುವಿಧಿ ಸುರಂಗ ಬನಾಈ
ಮಾನೌ, ನವಘನ ಊಪರ್ ರಾಜತ, ಮಘವಾ ಧನುಷ ಚಢಾಈ
ಅತಿ ಸುದೇಶ, ಮೃದುಹರತ ಚಿಕುರ ಮನ, ಮೋಹನ ಮುಖ ಬಗರಾಈ
ಮಾನೌ, ಪ್ರಗಟ ಕಂಜಪರ್, ಮಂಜುಲ ಅಲಿ ಅವಲಿ ಘಿರಿ ಆಈ
ನೀಲ ಸೇತ ಅರು ಪೀತ ಲಾಲ ಮನಿ ಲಟಕನಭಾಲ, ರುಲಾಈ
ಸನಿ, ಗುರು, ಅಸುರ, ದೇವಗುರುಮಿಲಿ, ಮನುಭೌಮಸಹಿತ ಸಮುದಾಈ
ದೂಧ್–ದಂತ ದುತಿ ಕಹಿ ನ ಜಾತಿ, ಕಛು ಅದ್ಭುತ ಉಪಮಾಪಾಈ
ಕಿಲಕತ ಹಂಸತ ದುರತಿ ಪ್ರಗಟತಿ, ಮನುಘನ ಮೇಂ ಬಿಜ್ಜು ಛಟಾಈ[1]

---

[1] ಬಾಲಕೃಷ್ಣನ ಸೌಂದರ್ಯವನ್ನು ಎಷ್ಟೆಂದು ಬಣ್ಣಿಸಲಿ. ನಂದನ ಸುವರ್ಣಮಯ ಅಂಗಳದಲ್ಲಿ ಆಟವಾಡುತ್ತಿರುವ ಕಂದ ಕೃಷ್ಣನನ್ನು ನೋಡಿ ಕಣ್ಣುಗಳು ತಣಿದುವು. ವಿವಿಧ ಬಣ್ಣಗಳಿಂದ ಮಾಡಿರುವ ಟೋಪಿ ಮಳೆಮೋಡಗಳ ಮೇಲೆ ಮೈದೋರುವ ಕಾಮನ ಬಿಲ್ಲಿನಂತೆ ಕೃಷ್ಣನ ತಲೆಯ ಮೇಲೆ ಶೋಭಾಯಮಾನವಾಗಿದೆ. ಬಾಲಕೃಷ್ಣನ ಹಣೆಯ ಮೇಲೆ ಹರಡಿಕೊಂಡಿರುವ ಕೋಮಲ ಕೂದಲು ಕಮಲದ ಮೇಲೆ ಮುತ್ತಿಕೊಂಡಿರುವ ಭ್ರಮರಗಳ ಸಮೂಹದಂತೆ ದರ್ಶಕರ ಮನಸ್ಸನ್ನು ಅನಾಯಾಸವಾಗಿ ಆಕರ್ಷಿಸುತ್ತವೆ. ನೀಲಮಣಿ ಶ್ವೇತಮಣಿ ಹಳದಿಮಣಿ ಮತ್ತು ಕೆಂಪುಮಣಿಗಳಿಂದ ಪೋಣಿಸಿದ ಮಣಿಸರ ಮಂಗಳಗ್ರಹದ ಜೊತೆಗೆ ಶನಿ, ಶುಕ್ರ ಮತ್ತು ಗುರು ಗ್ರಹಗಳು

ಪುರಂದರದಾಸರ ಬಾಲಕೃಷ್ಣನ ಚೆಲುವು ಕೋಟಿಸೂರ್ಯಪ್ರಕಾಶದಂತೆ. 'ಕಿರೀಟ ಕುಂಡಲ ಬಾವುಲಿ ಪೊಳೆಯು ಲಲಾಟದಿ, ಮಣಿಹಾರ ಶ್ರೀವತ್ಸಾದಿ ಮಣಿಮಯ ಕಿರೀಟ'ದಿಂದ ಅವನು ಶೋಭಿತನಾಗಿದ್ದಾನೆ.

ಯಶೋದೆ ಕೃಷ್ಣನನ್ನು ಮಲಗಿಸಲು ಪ್ರಯತ್ನಿಸುತ್ತಾಳೆ. ತೊಟ್ಟಿಲಲ್ಲಿ ಮಲಗಿಸಿ ನಿದ್ದೆ ಮಾಡಲೆಂದು ತೂಗುತ್ತಾಳೆ, ಜೋಗುಳ ಹಾಡುತ್ತಾಳೆ. ಮಲಗಿಕೋ ಎಂದು ಹೇಳಿ ಅಕ್ಕರೆಯಿಂದ ಮುದ್ದಿಡುತ್ತಾಳೆ. ತೂಗುವುದನ್ನು ನಿಲ್ಲಿಸಿ ತಟ್ಟುತ್ತಾಳೆ. ಶ್ರೀಕೃಷ್ಣನಿಗೆ ನಿದ್ದೆ ಬರಿಸುವಂತೆ ನಿದ್ರಾದೇವಿಗೆ ಆಮಂತ್ರಣ ನೀಡುತ್ತಾಳೆ. ಕೃಷ್ಣ ನಿದ್ದೆ ಬಂದವನಂತೆ ನಟಿಸುತ್ತಾನೆ. ತೂಗುವುದನ್ನು ನಿಲ್ಲಿಸಿದರೆ ತಟ್ಟನೆ ಚೀರಿ ಎದ್ದು ಕುಳಿತುಕೊಳ್ಳುತ್ತಾನೆ. ಕೃಷ್ಣನ ಈ ಲೀಲೆಯನ್ನು ನೋಡಿ ಯಶೋದೆಯ ಮಾತೃವಾತ್ಸಲ್ಯ ಕೋಡಿವರಿದಿದೆ. ಈ ಪ್ರಸಂಗವನ್ನು ಸೂರದಾಸರು ಸ್ವಾಭಾವಿಕವಾಗಿ, ಮನೋವೈಜ್ಞಾನಿಕವಾಗಿ ಹಾಗೂ ರಸವತ್ತಾಗಿ ಚಿತ್ರಿಸಿದ್ದಾರೆ :

ಜಸೋದಾ ಹರಿ ಪಾಲನೈ ಝುಲಾವೈ
ಹಲರಾವೈ, ದುಲರಾವೈ, ಮಲ್ಹಾವೈ ಜೋಇ ಸೋಇ ಕಛು ಗಾವೈ
ಮೇರೇ ಲಾಲ ಕೋ ಆಉ ನಿದರಿಯಾ, ಕಾಹೆ ನ ಆನಿ ಸು ಆವೈ
ತೂ ಕಾಹೇ ನಬೇಗಿ ಸೋಂ ಆವತಿ, ತೋಕೋಂ ಕಾನ್ಹ ಬುಲಾವೈ
ಕಬಹುಂ ಪಲಕ ಹರಿ ಮೂಂದಿ ಲೇತಹೈಂ. ಕಬಹುಂ ಅಧರ ಫರಕಾವೈ
ಸೋವತ ಜಾನಿ ಮೌನಹ್ವೈ, ರಹಿ ರಹಿ, ಕರಿ ಕರಿ, ಸೈನ ಬತಾವೈ
ಇಹಿ ಅಂತರ ಅಕುಲಾಇ ಉಠೇಹರಿ, ಜಸುಮತಿ ಮಧುರೈ ಗಾವೈ
ಜೋ ಸುಖ ಸೂರ್ ಅಮರ ಮುನಿ ದುರ್ಲಭ ಸೋ ನಂದಭಾಮಿನಿ ಪಾವೈ

ಪುರಂದರದಾಸರ ಯಶೋದೆ ಕೃಷ್ಣನನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುತ್ತಾ ಜೋಗುಳ ಹಾಡುತ್ತಿದ್ದಾಳೆ :

ಜೋ ಜೋ ಶ್ರೀಕೃಷ್ಣ ಪರಮಾನಂದ ಜೋ ಜೋ ಗೋಪಿಯ ಕಂದ–
ಮುಕುಂದ

---

ಕೂಡಿ ಬಾಲಕೃಷ್ಣನ ಹಣೆಯ ಮೇಲೆ ಶೋಭಿಸುತ್ತಿರುವಂತೆ ಕಾಣುತ್ತವೆ. (ಜ್ಯೋತಿಷ್ಯದ ಪ್ರಕಾರ ಶನಿಯ ಬಣ್ಣ ನೀಲಿ, ಶುಕ್ರನ ಬಣ್ಣ ಶ್ವೇತ, ಗುರುಗ್ರಹದ ಬಣ್ಣ ಹಳದಿ ಮತ್ತು ಮಂಗಳ ಗ್ರಹದ ಬಣ್ಣ ಕೆಂಪು ಎಂದು ಪರಿಗಣಿಸಲಾಗಿದೆ.) ಹಾಲುಹಲ್ಲುಗಳ ಸೌಂದರ್ಯವನ್ನು ಬಣ್ಣಿಸಲಸದಳ. ಕೇಕೆ ಹಾಕುವಾಗ, ನಗುವಾಗ ಹಲ್ಲುಗಳ ಕಾಂತಿ ಮೋಡಗಳ ಮಧ್ಯೆ ಮಿಂಚು ಕಾಣಿಸಿಕೊಂಡಂತೆ ಜ್ಯೋತಿರ್ಮಯವಾಗಿ ಕಾಣುತ್ತದೆ.

ಮನೆಯ ಕೆಲಸವಾರು ಮಾಡುವರಯ್ಯ
ಮನಕೆ ಸುಖನಿದ್ರೆಯ ತಂದುಕೋ ಬೇಗ
ಫಣಿಶಯನನೆ ನಿನ್ನ ಪಾಡಿ ತೂಗುವೆನು
ಪಾಲಗಡಲೊಳು ಪವಡಿಸಿದವನೆ,ಒಂದಾಲದೆಲೆಯ ಮೇಲೆ ಮಲಗಿದ ಶಿಶುವೆ
ಶ್ರೀಲತಾಂಗಿಯಳ ಚಿತ್ತದೊಲ್ಲಭನೆ ಬಾಲ ನಿನ್ನನು ಪಾಡಿ ತೂಗುವೆನಯ್ಯ.

ಪುರಂದರದಾಸರ ಯಶೋದೆ ತನ್ನ ಮಗನ ಅಲೌಕಿಕ ಗುಣಗಾನದಲ್ಲಿ ತೊಡಗಿದ್ದಾಳೆ. ಆದರೆ ಸೂರದಾಸರು ಮಕ್ಕಳು ತೊಟ್ಟಿಲಿನಲ್ಲಿ ಮಲಗಿ ನಿದ್ದೆ ಹೋಗುವಾಗ ಮಾಡುವ ಸಹಜಕ್ರಿಯೆಗಳನ್ನು ಚಿತ್ರಿಸಿ ಅದರಲ್ಲಿ ಕೃಷ್ಣನ ಬಾಲಲೀಲೆಯನ್ನು ಅನಾವರಣಗೊಳಿಸಿದ್ದಾರೆ.

ಕೃಷ್ಣ–ಬಲರಾಮರು ಎಷ್ಟೇ ಅನ್ಯೋನ್ಯವಾಗಿದ್ದರೂ ಪರಸ್ಪರ ಜಗಳವಾಡುತ್ತಿದ್ದ ಪ್ರಸಂಗಗಳೂ ಉಂಟು. ಒಮ್ಮೆ ಆಟದ ಸಮಯದಲ್ಲಿ ಬಲರಾಮ ಸಂಗಡಿಗರೊಡಗೂಡಿ ಕೃಷ್ಣನ ಹುಟ್ಟಿನ ಗುಟ್ಟನ್ನು ರಟ್ಟುಮಾಡುತ್ತಾನೆ. ಇದರಿಂದ ಸಿಟ್ಟಾದ ಕೃಷ್ಣ ತಾಯಿಯ ಸಮ್ಮುಖದಲ್ಲಿ ವರದಿ ಒಪ್ಪಿಸುತ್ತಾನೆ. ಸೂರದಾಸರು ಆ ವರದಿಯನ್ನು ಹೀಗೆ ನಿರೂಪಿಸಿದ್ದಾರೆ:

ಮೈಯಾ ಮೋಹಿ ದಾವೂ ಬಹುತ ಖಿಝಾಯೋ
ಮೋ ಸೋಂ ಕಹತ ಮೋಲ್‌ಕೌಂ ಲೀನೋ ತೂ ಜಸುಮತಿ ಕಬ ಜಾಯೋ
ಕಹಾ ಕಹೌಂ ಯಹಿ ರಿಸಕೇಮಾರ್ರೈಂ ಖೇಲನ ಹೌಂ ನಹಿಂ ಜಾತು
ಪುನಿ ಪುನಿ ಕಹತ, ಕೌನ್‌ಹೈ ಮಾತಾ, ಕೋ ಹೈ ತುಮರೋ ತಾತು?
ಗೋರೆ ನಂದ, ಯಶೋದಾ ಗೋರಿ, ತುಮ್ ಕತ ಸ್ಯಾಮ ಸರೀರ?[1]

ಇದೇ ಭಾವವನ್ನೊಳಗೊಂಡ ಪುರಂದರದಾಸರ ಕೀರ್ತನೆ ಹೀಗಿದೆ :

---

1 ಅಮ್ಮಾ ಬಲರಾಮ ನನ್ನನ್ನು ಬಹಳವಾಗಿ ಚುಡಾಯಿಸುತ್ತಾನೆ. ನಿನ್ನನ್ನು ಹಣ ಕೊಟ್ಟು ಖರೀದಿಸಲಾಗಿದೆ. ನಿನ್ನನ್ನು ಯಾವಾಗ ಯಶೋದೆ ಹೆತ್ತಳು ಹೇಳು ಎಂದು ನನ್ನನ್ನು ಕೇಳುತ್ತಾನೆ. ಅಮ್ಮಾ ಎಷ್ಟೆಂದು ಹೇಳಲಿ. ನನಗಂತೂ ತುಂಬಾ ಸಿಟ್ಟುಬಂದಿದೆ. ಆದುದರಿಂದ ನಾನು ಅವರೊಡನೆ ಆಡಲು ಹೋಗುವುದಿಲ್ಲ. ನಿನ್ನ ತಾಯಿ ತಂದೆ ಯಾರು ಗೊತ್ತೆ ? ಎಂದು ಪದೇ ಪದೇ ಪ್ರಶ್ನಿಸುತ್ತಾನೆ. ನಂದ ಬೆಳ್ಳಗಿದ್ದಾನೆ. ಯಶೋದೆ ಬೆಳ್ಳಗಿದ್ದಾಳೆ. ನೀನು ಅವರ ಮಗನೇ ಆದರೆ ನೀನೇಕೆ ಕಪ್ಪಾಗಿರುವೆ ? ಎನ್ನುತ್ತಾನೆ.

ಆಡಹೋದಲ್ಲಿ ಮಕ್ಕಳು ಆಡಿಕೊಂಬುವರು ನೋಡಮ್ಮ
ನೋಡಿ ನೋಡಿ ಎನ್ನ ಮುಖವ ಕಣ್ಣು ಮಿಟುಕುವರಮ್ಮ
ದೇವಕಿ ಹೆತ್ತಳಂತೆ ವಸುದೇವನೆಂಬುವ ಪಿತನಂತೆ
ಕಾವಲಲಿ ಹುಟ್ಟಿದೆನಂತೆ ಮಾವಗಂಜಿಲ್ಲಿ ತಂದರಂತೆ
ನೀ ನನ್ನ ಹಡೆದಿಲ್ಲವಂತೆ ನಾ ನಿನ್ನ ಮಗನಲ್ಲವಂತೆ

ಸೂರದಾಸರು ಮತ್ತು ಪುರಂದರದಾಸರು ಭಿನ್ನಭಾಷಿಗಳಾದರೂ ಇಲ್ಲಿ ಭಾವ ಏಕರೀತಿಯಾಗಿ ಹರಿದಿದೆ.

ಕೃಷ್ಣನ ಅದ್ಭುತ ಬಾಲಲೀಲೆಗಳಲ್ಲಿ ಕಾಳಿಂಗಮರ್ದನ ಒಂದು. ಕಾಳಿಂಗನ ಹೆಡೆಯ ಮೇಲೆ ನಿಂತು ಕೃಷ್ಣ ನಿರ್ಭಯದಿಂದ ಕುಣಿದಾಡುವ ನೃತ್ಯ ರೋಮಾಂಚಕ ದೃಶ್ಯವಾಗಿ ಪರಿಣಮಿಸಿದೆ. ಕಾಳಿಂಗನ ಹೆಡೆಯ ಮೇಲೆ ಪುಟ್ಟ ಪಾದವನ್ನಿಟ್ಟ ದಿಟ್ಟ ಪೋರ ಕೃಷ್ಣನ ನೃತ್ಯವನ್ನು ಸೂರದಾಸರು ವರ್ಣಿಸಿರುವ ರೀತಿ ರಮ್ಯಾದ್ಭುತವಾಗಿದೆ :

ಫನ ಫನ ಪ್ರತಿ ನಿರತತ ನಂದ—ನಂದನ
ಮಾನೌಗಿರಿ ಪರ್ ಮೋರ ಆನಂದಿತ, ದೇಖತ ಬ್ರಜ ಜನಮೋಹತ
ಅಂಬರಪಥಕೇ ಅಮರ ಲಲನಾಸಂಗ, ಜೈ ಜೈ ಧುನಿ ತಿಹುಂಲೋಕ
ಸೂರಶ್ಯಾಮ ಕಾಲಿ ಪರ ನಿರತತ ಆವತ ಬ್ರಜ ಲೋಕ[1]

ಇದೇ ಭಾವವನ್ನೊಳಗೊಂಡ ಪುರಂದರದಾಸರ ಕೀರ್ತನೆ ಹೀಗಿದೆ :

ಆಡಿದನೋ ರಂಗ ಅದ್ಭುತದಲಿ
ಕಾಳಿಂಗನ ಫಣೆಯಲಿ
ಫಣವ ಮೆಟ್ಟಿ ಬಾಲವ ಕೈಯಲ್ಲಿ ಪಿಡಿದು
ಥಳಥಳಿಸುವ ನಾಟ್ಯವನಾಡೆ
ಅಂಬುರುಹೋದ್ಭವ ಅಖಿಳಸುರರು ಕೂಡಿ
ಅಂಬರದಲಿ ನಿಂತು ಅವರು ಸ್ತುತಿಸೆ

---

[1] ಶ್ರೀ ಕೃಷ್ಣನು ಕಾಳಿಂಗನ ಪ್ರತಿಯೊಂದು ಹೆಡೆಯ ಮೇಲೂ ನೃತ್ಯಮಾಡುತ್ತಾನೆ, ಪರ್ವತದ ಮೇಲೆ ಆನಂದದಿಂದ ನವಿಲು ನರ್ತಿಸುವಂತೆ ಶ್ರೀಕೃಷ್ಣನು ಕಾಳಿಂಗನ ಹೆಡೆಯ ಮೇಲೆ ಆನಂದದಿಂದ ನರ್ತಿಸುತ್ತಿದ್ದಾನೆ. ಕೃಷ್ಣನ ಸಾಹಸ ಕಂಡು ಬ್ರಜವಾಸಿಗಳು ಬೆರಗಾಗಿದ್ದಾರೆ. ಈ ದೃಶ್ಯವನ್ನು ನೋಡಲು ಆಕಾಶದಲ್ಲಿ ದೇವತೆಗಳು ತಮ್ಮ ರಮಣಿಯರೊಂದಿಗೆ ನೆರೆದಿದ್ದಾರೆ. ಮೂರು ಲೋಕಗಳಲ್ಲಿಯೂ ಜಯಕಾರದ ಧ್ವನಿ ಮೊಳಗುತ್ತಿದೆ.

ಕೃಷ್ಣನ ಮುರಲೀ ಮಹಿಮೆ ಅಪಾರವಾದುದು ಮತ್ತು ಅಪೂರ್ವವಾದುದು. ಅದರ ನಾದಲಹರಿ ಮಧುರವಾದುದು ; ಮೋಹಕವಾದುದು ; ವ್ಯೋಮನ ಮರೆಸುವಂಥದು ; ಮರುಳುಮಾಡುವಂಥದು. ಸೂರದಾಸರು ಅದರ ವ್ಯಾಪಕ ಪ್ರಭಾವವನ್ನು ಹೀಗೆ ವರ್ಣಿಸುತ್ತಾರೆ :

ಮೇರೇ ಸಾಂವರೇ ಜಬ್ ಮುರಲಿ ಅಧರ ಧರಿ
ಸುನಿ ಮುನಿ ಸಿದ್ಧ ಸಮಾಧಿ ಟರಿ
ಸುನಿಥಕೇ ದೇವ ವಿಮಾನ ಸುರವಧು ಚಿತ್ರಸಮಾನ
ಗ್ರಹ ನಬತ್, ತಜತ್, ನರಾಸ ಪಾಹಿಬಂದೇ ಧುನಿ ಪಾಸ
ಸುನಿ ಆನಂದ ಉಮಂಗ ಭರೇ ಜಲಥಲ ಕೇ ಅಚಲ ಟರೇ
ಚರಾಚರಗತಿ ವಿಪರೀತ ಸುನಿ ವೇನು ಕಲ್ಪಿತ ಗೀತ
ಬಛವಾ, ನ ಪೀವೈ ಛೀರ್[1]

ಇದೇ ರೀತಿಯ ಭಾವನೆಗಳನ್ನೊಳಗೊಂಡ ಪುರಂದರದಾಸರ ಕೀರ್ತನೆಯನ್ನು ಹೋಲಿಸಿ ನೋಡಬಹುದು :

ರಂಗ ಕೊಳಲನೂದಲಾಗಿ
ಮಂಗಳಮಯವಾಯ್ತು ಧರೆ
ಕಂಗಳು ಚೈತನ್ಯ ಮರೆತು
ಅಂಗಪರವಶವಾದುವು
ತೀಡಿದ ಮಾರುತ ಮಂದಗತಿಗೈಯೆ ಬಾಡಿದ ಬರಲು
ಫಲಗೊಂಚಲು ಬಿಡೆ
ಪಾಡಲೊಲ್ಲವಳಿಕುಲಗಳು ಬಾಡಿದ ಮಾಮರ ಚಿಗುರೊಡೆಯೆ
ತಳದುದಕ ಉಕ್ಕೇರಿ ಬಂದುವು ತುಳುಕಿ ಚೆಲ್ಲಾಡಿದಳು ಯಮುನೆ

ಸೂರದಾಸರು ಮತ್ತು ಪುರಂದರದಾಸರ ಮುರಳೀಗಾನದ ವರ್ಣನೆಯನ್ನು ನೋಡಿದರೆ ಒಬ್ಬರು ಮತ್ತೊಬ್ಬರ ಭಾವ ಹಾಗೂ ಉಕ್ತಿಗಳನ್ನು ಯಥಾವತ್ತಾಗಿ ಅನುವಾದ ಮಾಡಿದಂತಿದೆ. ಪುರಂದರದಾಸರು ವರ್ಣಿಸಿರುವ ಬಾಲ

---

[1] ಶ್ರೀಕೃಷ್ಣ ಕೊಳಲನೂದಿದಾಗ ಆ ನಾದಕ್ಕೆ ಮಾರುಹೋದ ಸಿದ್ಧರ ಮತ್ತು ಮುನಿಗಳ ಸಮಾಧಿ ಭಂಗವಾಯಿತು. ಈ ನಾದವನ್ನು ಕೇಳಿ ದೇವವಿಮಾನ ಚಲಿಸಲಿಲ್ಲ. ಸುರವಧುಗಳು ಚಿತ್ರದಂತೆ ನಿಂತಲ್ಲೇ ನಿಂತರು. ಗ್ರಹನಕ್ಷತ್ರಗಳು ರಾಶಿಬಿಟ್ಟು ಅಲುಗಾಡಲಿಲ್ಲ, ಜಡಪದಾರ್ಥಗಳಲ್ಲಿ ಚೇತನ ಮೂಡಿತು. ಸೃಷ್ಟಿಯ ಗತಿ ಪರಸ್ಪರ ವಿರುದ್ಧವಾಗಿ ಪರಿಣಮಿಸಿತು. ಕರುಗಳು ಹಾಲು ಕುಡಿಯುವುದನ್ನು ನಿಲ್ಲಿಸಿದುವು.

ಲೀಲೆಗಳನ್ನು ಸೂರದಾಸರು ವರ್ಣಿಸಿರುವ ಬಾಲಲೀಲೆಗಳಿಗೆ ಹೋಲಿಸಿ ನೋಡಿದರೆ ಪುರಂದರದಾಸರು ಬಾಲಲೀಲೆಯ ತಮ್ಮ ಪ್ರತಿಯೊಂದು ಕೀರ್ತನೆಯಲ್ಲಿಯೂ ಶ್ರೀಕೃಷ್ಣನ ಲೌಕಿಕ ಹಾಗೂ ಅಲೌಕಿಕ ಗುಣಗಳನ್ನು ಸಮನ್ವಯಗೊಳಿಸಿದ್ದಾರೆ. ಸೂರದಾಸರು ಬಹುಮಟ್ಟಿಗೆ ಬಾಲಲೀಲೆಗಳ ವರ್ಣನೆಯಲ್ಲಿ ಲೌಕಿಕ ದೃಷ್ಟಿಯನ್ನೇ ಇರಿಸಿಕೊಂಡು ವಿವರಿಸಿರುವುದರಿಂದ ಅವರ ಕೀರ್ತನೆಗಳಲ್ಲಿ ಬಾಲ್ಯದ ನೈಜ ನಿರೂಪಣೆ ಇದೆ.

ಸೂರದಾಸರು ತಮ್ಮನ್ನು ಹರಿಯ ಸೇವಕ ಎಂದು ಕರೆದುಕೊಂಡು ಆತ ನನ್ನ ಸ್ವಾಮಿ ಎಂದು ಸಾರಿ ದಾಸ್ಯಭಕ್ತಿಯನ್ನು ಮೆರೆದಿದ್ದಾರೆ:

ದೀನನಾಥ ಹಮಾರೇ ಠಾಕೂರ್
ಸಾಂಚೇ ಪ್ರೀತಿ ನಿಬಾಹಕ್
ಜೈಸೇ ರಾಖಹು ತೈಸೇ ರಹೌಂ[1]

ಪುರಂದರದಾಸರ "ದಾಸನ ಮಾಡಿಕೋ ಎನ್ನ ಸ್ವಾಮಿ ಸಾಸಿರನಾಮದ ವೆಂಕಟರಮಣ" ಮುಂತಾದ ಕೀರ್ತನೆಗಳಲ್ಲಿ ದಾಸ್ಯಭಾವ ದಟ್ಟವಾಗಿ ಮೂಡಿಬಂದಿದೆ.

ಸಖ್ಯಭಾವಕ್ಕೆ ಉತ್ತಮ ಉದಾಹರಣೆ ಕೃಷ್ಣಾರ್ಜುನರ ಸಂಬಂಧ. ಭಗವಂತನಿಗೆ ಭಕ್ತ ಹೇಗೆ ಅಧೀನನೋ ಹಾಗೆಯೇ ಭಗವಂತನೂ ಭಕ್ತರ ಅಧೀನನೆಂಬ ಭಾವವನ್ನು ಸೂರದಾಸರು ಹೀಗೆ ನಿರೂಪಿಸಿದ್ದಾರೆ:

ಹಮ್ ಭಕ್ತನಕೇ ಭಕ್ತ ಹಮಾರೇ
ಸುನ್ ಅರ್ಜುನ ಪರಿತಿಗ್ಯ ಮೇರೀ, ಯಹ ವ್ರತ ಟರತ ನ ಟಾರೇ
ಭಕ್ತ ಕೈ ಕಾಜ ಲಾಜ ಹಿಯಧರಿಕೈ, ಪಾಉಂ ಪಯಾದೆ ಧಾಊಂ
ದೇಖೀ ವಿಚಾರಿ ಭಕ್ತಹಿತಕಾರನ, ಹಾಂಕತ ಹೌಂ ರಥ ತೇರೋಂ[2]

---

1 ದೀನನಾಥ ನನ್ನ ಸ್ವಾಮಿ. ಆತನ ಸೇವೆ ನನ್ನ ಗುರಿ. ಆತನ ಅಪೇಕ್ಷೆಯಂತೆ ನಾನಿರುವೆ.

2 ಶ್ರೀಕೃಷ್ಣ ಅರ್ಜುನನಿಗೆ ಹೀಗೆ ಹೇಳುತ್ತಾನೆ : ನಾನು ಭಕ್ತರ ಭಕ್ತ. ಇದು ನನ್ನ ಪ್ರತಿಜ್ಞೆ. ಈ ವ್ರತ ಎಂದಿಗೂ ಭಂಗವಾಗುವುದಿಲ್ಲ. ಭಕ್ತನ ಕಾರ್ಯ ಹಾಗೂ ಮರ್ಯಾದೆಗಳನ್ನು ಮನಗಂಡು ಅವನಿಗೆ ಸಹಾಯ ಮಾಡಲು ಬರಿಗಾಲಿನಲ್ಲೇ ಹೋಗುತ್ತೇನೆ. ಭಕ್ತನ ಹಿತ ಸಾಧಿಸಲೋಸುಗ ನಾನು ನಿನ್ನ ರಥವನ್ನು ನಡೆಸುತ್ತಿದ್ದೇನೆ.

ಇದೇ ಭಾವ ಪುರಂದರದಾಸರಲ್ಲಿ ಹೀಗಿದೆ :

ಹೂವ ತರುವರ ಮನೆಗೆ ಹುಲ್ಲ ತರುವ......ಇವಗಿಲ್ಲ ಗರುವ
ಪಾಂಡವರ ಮನೆಯಲ್ಲಿ ಕುದುರೆಗಳ ತಾ ತೊಳೆದು ಪುಂಡರೀಕಾಕ್ಷನೇ
ಹುಲ್ಲ ತಂದು ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು

ಮಧುರಭಾವಕ್ಕೆ ಅತ್ಯಂತ ಹಿತವಾದ ಉದಾಹರಣೆ ಗೋಪಿಯರ ಮತ್ತು ಕೃಷ್ಣನ ಸಂಬಂಧ. ಭ್ರಮರಗೀತೆ ಇದಕ್ಕೆ ಒಂದು ಭವ್ಯ ನಿದರ್ಶನ. ಕೃಷ್ಣನನ್ನು ಅಗಲಿ ಗೋಪಿಯರು ಇರಲಾರರು. ಶ್ರೀಕೃಷ್ಣನ ಮಥುರಾಗಮನದ ಸುದ್ದಿಯನ್ನು ಕೇಳಿ ಉದ್ವಿಗ್ನರಾದ ಗೋಪಿಯರು ಬಾಡಿದ ಹೂಗಳಂತೆ ಕಾಂತಿಹೀನರಾದರೆಂಬುದನ್ನು ಮತ್ತು ಅವರ ಹೃದಯಾಂತರಾಳದ ಅಳಲನ್ನು ಸೂರದಾಸರು :

ಸಬ್ ಮುರಝಾನಿರಿ ಚಲಬೇ ಕಿ ಸುನತ ಭನಕ
ಗೋಪೀ ಗ್ವಾಲ ನೈನಜಲಧಾರತ ಗೋಕುಲ ಹ್ವೈ ರಹ್ಯೌ ಮೂಂದ್
ಚನಕ[1]

ಎಂದು ಮನಂತಾಗಿ ವರ್ಣಿಸಿದ್ದಾರೆ. ಪುರಂದರದಾಸರ ಕೀರ್ತನೆಗಳಲ್ಲೂ ಮಧುರಭಾವ ಹಾಸುಹೊಕ್ಕಾಗಿದೆ :

ಹೋಗುವುದುಚಿತವೆ ಮಾಧವ ಮಧುರೆಗೆ
ಬಾಗುವೆ ಎಲೆ ನಿನಗೆ
ನಾಗಶಯನ ನಿನ್ನಗಲಿ ಒಂದು ಕ್ಷಣ
ಹೇಗೆ ಸೈರಿಸುವೆವೋ ಆಗಮನುತ ಕೃಷ್ಣ

ಸೂರದಾಸರ ಹಾಗೂ ಪುರಂದರದಾಸರ ವಾತ್ಸಲ್ಯಭಾವದ ಕೃತಿಗಳನ್ನು ಹಿಂದೆಯೇ ಸಾಕಷ್ಟು ಸಂಖ್ಯೆಯಲ್ಲಿ ನೋಡಿದ್ದೇವೆ.

ಸೂರದಾಸರು ಮತ್ತು ಪುರಂದರದಾಸರು ವರ್ಣಿಸಿರುವ ನವವಿಧ ಭಕ್ತಿಗಳಲ್ಲೂ ಬಹುಮಟ್ಟಿಗೆ ಭಾವಸಾಮ್ಯವನ್ನು ಕಾಣಬಹುದು. ಸೂರದಾಸರು ಶ್ರವಣ ಭಕ್ತಿಯನ್ನು ಹೀಗೆ ವರ್ಣಿಸಿದ್ದಾರೆ :

---

[1] ಶ್ರೀಕೃಷ್ಣನ ಮಥುರಾಗಮನದ ಸುದ್ದಿಯನ್ನು ಕೇಳಿ ಗೋಪಿಯರೆಲ್ಲರೂ ಬಾಡಿ ಹೋದರು. ಗೋಪಿ ಮತ್ತು ಗೋಪಾಲರ ಕಣ್ಣುಗಳಲ್ಲಿ ಕಣ್ಣೀರು ಕೋಡಿಯಾಗಿ ಹರಿಯ ತೊಡಗಿತು. ಕೃಷ್ಣನ ನಿರ್ಗಮನವನ್ನು ನೋಡಲಾರದೆ ಮುಚ್ಚಿದ ಕಣ್ಣನ್ನು ಮುಚ್ಚೇ ಇದ್ದರು.

ಜೋ ಹರಿ ಲೀಲಾಸುನೈ ಸುನಾವೈ
ಸೋ ಹರಿ ಭಕ್ತಿ ಪಾಈ ಸುಖ ಪಾವೈ
ಕಹೇ ಸುನೇ ಸೋ ತರೈ ಭವಪಾರ್[1]

ಪುರಂದರದಾಸರಲ್ಲೂ ಇದೇ ಭಾವವನ್ನು ನೋಡಬಹುದು :

ಶ್ರವಣದಿಂದ ಹೋಯಿತು ಬ್ರಹ್ಮಹತ್ಯೆ ಪಾಪ
ಎಲ್ಲಿ ಹರಿಕಥಾ ಪ್ರಸಂಗವೋ ಅಲ್ಲಿ ತ್ರಿವೇಣೀ ಸಂಗಮ

ಭಗವಂತನ ನಾಮಸ್ಮರಣೆ ಮಾಡುತ್ತ ಅವನ ಕೃಪೆಗೆ ಪಾತ್ರರಾಗುವುದು ಸರ್ವರಿಗೂ ಸುಲಭ. ನಾಮಸ್ಮರಣೆಯನ್ನು ನಿತ್ಯಜೀವನದಲ್ಲೇ, ಕರ್ತವ್ಯನಿರತರಾಗಿರುವಾಗಲೇ ಮಾಡಬಹುದು. ಇದಕ್ಕೆ ನಿಗದಿಯಾದ ವೇಳೆಯೂ ಇಲ್ಲ ; ನಿಯಮ ಪಾಲನೆಯೂ ಇಲ್ಲ. ಸೂರದಾಸರು ಮತ್ತು ಪುರಂದರದಾಸರಿಬ್ಬರೂ 'ನಾಮಸ್ಮರಣೆ'ಯಿಂದಾಗುವ ಪರಮ ಪ್ರಯೋಜನವನ್ನು ವಾಲ್ಮೀಕಿ ಪ್ರಹ್ಲಾದ ಅಜಾಮಿಳ ಮುಂತಾದವರ ನಿದರ್ಶನಗಳ ಮೂಲಕ ವಿವರಿಸಿದ್ದಾರೆ. ಭವರೋಗ ಪೀಡಿತರಾದವರಿಗೆ 'ನಾಮಸ್ಮರಣೆ' ಹೇಗೆ ಸಿದ್ಧೌಷಧವಾಗಬಲ್ಲುದೆಂಬುದನ್ನು ಸೂರದಾಸರು ಹೀಗೆ ವರ್ಣಿಸಿದ್ದಾರೆ :

ಹರಿ ಹರಿ ಹರಿ ಸುಮಿರೋ ಸಬ್ ಕೋಈ ಹರಿ ಸುಮಿರನ ಸಬ್ ಸುಖ ಹೋಈ
ಹರಿಸಮಾನ ದ್ವಿತೀಯಾ ನಹೀಂ ಕೋಈ ಬಿನಹರಿ ಸುಮಿರನ ಮುಕ್ತಿ ನ ಹೋಈ[2]

ಪುರಂದರದಾಸರು ಇದೇ ಭಾವವನ್ನು ಯಥಾವತ್ತಾಗಿ ಹೇಳಿದ್ದಾರೆ :

ಹರಿಸ್ಮರಣೆ ಮಾಡೋ ನಿರಂತರ ಪರಗತಿಗೆ ಇದು ನಿರ್ಧಾರ

ಯಾವುದೇ ಸಾಧನೆಯಲ್ಲಿ ಸಿದ್ಧಿ ಪಡೆಯಬೇಕಾದರೆ ಬಲ್ಲವರಿಂದ ಮಾರ್ಗದರ್ಶನ ಅತ್ಯಗತ್ಯ. ಆ ಯೋಗ್ಯ ವ್ಯಕ್ತಿಯೇ ಗುರು. ಭಾರತೀಯ ಪರಂಪರೆಯಲ್ಲಿ ಗುರುವಿಗೆ ಮಹತ್ತರವಾದ ಸ್ಥಾನವಿದೆ. ತ್ರಿಮೂರ್ತಿಗಳಿಗಿಂತಲೂ

---

[1] ಹರಿಲೀಲೆಯನ್ನು ಕೇಳುವ ಶ್ರೋತೃಗಳು ಹರಿಭಕ್ತಿಯನ್ನು ಪಡೆದು ನಿತ್ಯಸುಖಿಗಳಾಗುವರು. ಈ ಭವಸಾಗರದಿಂದ ಪಾರಾಗುವರು.

[2] ಎಲ್ಲರೂ ಹರಿಸ್ಮರಣೆ ಮಾಡಿರಿ, ಹರಿಸ್ಮರಣೆಯಿಂದ ಎಲ್ಲ ಸುಖಗಳೂ ಲಭ್ಯ, ಹರಿಗೆ ಸಮಾನರಾದವರು ಯಾರೂ ಇಲ್ಲ, ಹರಿಸ್ಮರಣೆ ಮಾಡದಿದ್ದರೆ, ಮುಕ್ತಿದೊರೆಯದು.

ಮಿಗಿಲಾದ ಪರಬ್ರಹ್ಮನ ಪದವಿ ನೀಡಿದ್ದಾರೆ. ಭವಸಾಗರದಿಂದ ಪಾರಾಗಲು ಗುರು ಒಂದು ಹಡಗು ಇದ್ದಂತೆ. ಭವರೋಗದಿಂದ ಮುಕ್ತರಾಗಲು ಗುರು ಒಬ್ಬ ವೈದ್ಯನಿದ್ದಂತೆ. ಅಜ್ಞಾನರೂಪಿ ಅಂಧಕಾರದಿಂದ ಪಾರಾಗಲು ಗುರು ಜ್ಞಾನಜ್ಯೋತಿ ಇದ್ದಂತೆ ; ಅಷ್ಟೇ ಏಕೆ ಗುರು ಸಾಕ್ಷಾತ್ ಶ್ರೀಹರಿಯಿದ್ದಂತೆ :

> ಹರಿ ಗುರು ಏಕರೂಪ ನೃಪಜಾನಿ ಯಾ ಮೇಂ ಕಛ್ ಸಂದೇಹ ನ ಆನಿ
> ಗುರುಪ್ರಸನ್ನ ಹರಿಪ್ರಸನ್ನ ಹೋಇ, ಗುರು ಕೈ ದುಃಖಿತ ದುಃಖಿತ ಹರಿ
> ಹೋಇ[1]

ಪುರಂದರದಾಸರು 'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' – ಎಂದು ಘಂಟಾಘೋಷವಾಗಿ ಸಾರಿಬಿಟ್ಟಿದ್ದಾರೆ.

ಭಕ್ತ ಭಗವಂತನ ಕೃಪೆಗೆ ಪಾತ್ರನಾಗಬೇಕಾದರೆ ಮೊತ್ತಮೊದಲನೆಯದಾಗಿ ಅಹಂಕಾರಮುಕ್ತನಾಗಿರಬೇಕು ; ತನ್ನ ಮಿತಿಯನ್ನು ಅರಿಯಬೇಕು. ಆತ್ಮಶೋಧನೆ ಮಾಡಿಕೊಳ್ಳಬೇಕು. ಈ ಹಂತ ದಾಟಿದವರಿಗೆ ಮಾತ್ರ ಭಗವಂತನ ಕೃಪೆ ಸಾಧ್ಯ. ಸೂರದಾಸರು ತಮ್ಮ ಅವಗುಣಗಳನ್ನು ಹರಿಯಲ್ಲಿ ಹೀಗೆ ನಿವೇದಿಸಿಕೊಂಡಿದ್ದಾರೆ :

> ಪ್ರಭು ಮೇರೆ ಅವಗುನ ಚಿತ್ತ ನ ಧರೋ
> ಸಮದರಶಿ ಹೈನಾಮ ತಿಹಾರೋ, ಚಾಹೇತೋ ಪಾರ್ ಕರೋ
> ಪಾರಸ ಗುಣ ಅವಗುಣ ನಹಿಂ ಚಿತವೈಂ ಕಂಚನ ಕರತ ಖರೋ[2]

ಪುರಂದರದಾಸರು "ತಪ್ಪು ಸಾಸಿರ ಒಪ್ಪಿಕೊಳ್ಳಯ್ಯೊ ಕೃಪಾಳು ಮುಪ್ಪುರವನಳಿದಂಥ ಸುರೇಂದ್ರವಂದ್ಯ" ಎಂದು ಮೊರೆಯಿಡುತ್ತಾರೆ.

ಸೂರದಾಸರು ಪುಷ್ಟಿಮಾರ್ಗದ ವಲ್ಲಭಾಚಾರ್ಯರ ಅನುಯಾಯಿಗಳು, ಶುದ್ಧಾದ್ವೈತವಾದಿಗಳು. ಪುರಂದರದಾಸರು ಮಧ್ವಾಚಾರ್ಯರ ಅನುಯಾಯಿಗಳು, ದ್ವೈತವಾದಿಗಳು. ಇಬ್ಬರೂ ಹರಿಯ ಪಾರಮ್ಯವನ್ನು ಪ್ರತಿಪಾದಿಸಿದ್ದಾರೆ. ಅವರ ಪ್ರಕಾರ ಹರಿಯೇ ಪರಬ್ರಹ್ಮ. ಆತ ಸಚ್ಚಿದಾನಂದ

---

[1] ಹರಿ ಮತ್ತು ಗುರು ಒಂದೇ ಎಂದು ಭಾವಿಸಿ. ಇದರಲ್ಲಿ ಕಿಂಚಿತ್ ಸಂಶಯ ಬೇಡ. ಗುರು ಪ್ರಸನ್ನನಾದರೆ ಹರಿಯೂ ಪ್ರಸನ್ನ. ಗುರು ದುಃಖಿಯಾದರೆ ಹರಿಯೂ ದುಃಖಿಯಾಗುತ್ತಾನೆ.

[2] ಹೇ ಪ್ರಭು ನನ್ನ ಅವಗುಣಗಳ ಕಡೆ ನಿನ್ನ ಗಮನ ಹರಿಯದಿರಲಿ. ನೀನು ಸಮದರ್ಶಿ. ನನ್ನನ್ನು ಪಾರುಮಾಡು. ಸ್ಪರ್ಶಮಣಿಯಂತೆ ನನ್ನನ್ನು ಪರಿಶುದ್ಧ ಬಂಗಾರವನ್ನಾಗಿ ಮಾಡು.

ಸ್ವರೂಪ. ಇಬ್ಬರೂ ತ್ರಿವಿಧ ಜೀವರುಗಳ ವರ್ಣನೆ ಮಾಡಿದ್ದರೂ ವಿವರಣೆ ಭಿನ್ನವಾಗಿದೆ. ಸೂರದಾಸರ ಪ್ರಕಾರ ಜಗತ್ತು ಬ್ರಹ್ಮನ ಯೋಗಮಾಯೆಯಿಂದ ನಿರ್ಮಿತವಾದರೆ ಪುರಂದರದಾಸರ ಪ್ರಕಾರ ಭಗವಂತನೇ ಜಗತ್ತನ್ನು ಸೃಷ್ಟಿಸಿದ್ದಾನೆ. ಹೀಗೆ ಸೂರದಾಸರು ಮತ್ತು ಪುರಂದರದಾಸರ ಅಧ್ಯಾತ್ಮ ದರ್ಶನದಲ್ಲಿ ಹಲವೆಡೆ ಭಿನ್ನತೆ ಕಂಡುಬರುತ್ತದೆ. ಅಂತರಂಗ–ಬಹಿರಂಗಶುದ್ಧಿ ಇರುವವರು ಯಾವುದೇ ಜಾತಿಯವರಾದರೂ ಹರಿಭಜನೆ ಮಾಡಲು ಅರ್ಹರು ಎಂಬುದು ಅವರಿಬ್ಬರ ಮತ. ಭಗವದವತಾರ ಲೀಲೆಗಳ ವರ್ಣನೆ ಇಬ್ಬರಲ್ಲೂ ಬರುತ್ತದಾದರೂ ಸೂರದಾಸರು 'ನಿರ್ಗುಣ'ದ ಮತ್ತು ಯೋಗಮಾರ್ಗದ ಖಂಡನೆ ಮಾಡಿದ್ದಾರೆ. ಅವರು ನಂಬಿದ ತತ್ತ್ವಗಳಿಗನುಗುಣವಾಗಿ ಅವರಿಬ್ಬರ ಭಾವನೆ ನಂಬಿಕೆಗಳು ರೂಪುಗೊಂಡಿವೆ. ಸೂರದಾಸರು ಮತ್ತು ಪುರಂದರ ದಾಸರು ಮಾನವನ ಕಲ್ಯಾಣಕ್ಕಾಗಿ ದುಡಿದ ಮಹನೀಯರು. ಅವರ ಕೀರ್ತನೆಗಳು ಮಾನವನ ಅಂತರಂಗ ಮತ್ತು ಬಹಿರಂಗವನ್ನು ಶುದ್ಧಗೊಳಿಸಿ ಅವನ ಬಾಳು ಸಾರ್ಥಕವಾಗಲು ಸಹಾಯಕವಾಗಿವೆ. ಸಮಾಜದ ಮೇಲ್ಮೆಗಾಗಿ ಹಾಗೂ ಸಮಾಜದ ನಿರ್ಮಲೀಕರಣಕ್ಕಾಗಿ ಸೂರದಾಸರು ಮತ್ತು ಪುರಂದರ ದಾಸರು ಕೈಂಕರ್ಯ ಕೈಗೊಂಡಿದ್ದಾರೆ.

ಸೂರದಾಸರ ಮತ್ತು ಪುರಂದರದಾಸರ ಸಾಮಾಜಿಕಪ್ರಜ್ಞೆ ಹಾಗೂ ಸಮಾಜವಿಮರ್ಶೆ ಬಗ್ಗೆ ತೌಲನಿಕವಾಗಿ ಪರಿಶೀಲಿಸಿದರೆ ಪುರಂದರದಾಸರಲ್ಲಿ ಕಂಡುಬರುವ ದಟ್ಟವಾದ ಸಾಮಾಜಿಕ ಪ್ರಜ್ಞೆ, ಸಮಗ್ರ ಸಮಾಜದ ಚಿತ್ರಣ ಹಾಗೂ ಸಮಾಜ ವಿಮರ್ಶೆ ಸೂರದಾಸರಲ್ಲಿ ಕಂಡುಬರುವುದಿಲ್ಲ. ಅವರ ಭಕ್ತಿಯ ಭಾವಾವೇಶದಲ್ಲಿ ಸಾಮಾಜಿಕಪ್ರಜ್ಞೆ ಪ್ರಾಸಂಗಿಕವಾಗಿ ಮೂಡಿ ಬಂದಿದೆ. ಆದರೆ ಅವರು ಸಮಕಾಲೀನ ಸಮಾಜದ ಸಾಂಸ್ಕೃತಿಕ ಮೌಲ್ಯಗಳನ್ನು ಸಮಗ್ರವಾಗಿ ಚಿತ್ರಿಸಿದ್ದಾರೆ. ಬ್ರಜಪ್ರಾಂತ್ಯದ ಧಾರ್ಮಿಕ ಸಂಪ್ರದಾಯಗಳು, ಸಂಸ್ಕಾರಗಳು, ಅಲ್ಲಿ ಬಳಸುತ್ತಿದ್ದ ಅಲಂಕರಣ ಸಾಮಗ್ರಿಗಳು, ಮನೋರಂಜನೆಯ ಸಾಧನಗಳು, ಅಲ್ಲಿಯ ಜನರ ಉಡುಗೆ–ತೊಡುಗೆ, ಜನರ ನಡವಳಿಕೆ, ಉದ್ಯೋಗ ಉತ್ಸವಗಳು, ಹಬ್ಬಹರಿದಿನಗಳು, ಶಕುನಗಳು, ಜ್ಯೋತಿಷ, ಮಾಟ–ಮಂತ್ರ, ಅಂಧವಿಶ್ವಾಸ, ಮೂಢನಂಬಿಕೆಗಳು, ಪೂಜಾ ಪದ್ಧತಿ, ವಾಸ್ತುಕಲೆ,ಚಿತ್ರಕಲೆ, ಮೂರ್ತಿಕಲೆ, ಲೋಕನೃತ್ಯ ಇವೇ ಮುಂತಾದ ನೂರಾರು ಚಿತ್ರಗಳನ್ನು ಸೂರದಾಸರು ಸಮಗ್ರವಾಗಿ ಚಿತ್ರಿಸಿದ್ದಾರೆ. ಇಷ್ಟೊಂದು ಸಾಂಸ್ಕೃತಿಕ ವೈಭವದ ಬಿಡಿ ಬಿಡಿಯಾದ ಚಿತ್ರಣ ಪುರಂದರದಾಸರಲ್ಲಿ ಕಂಡುಬರುವುದಿಲ್ಲ. ಆದರೆ ಪುರಂದರದಾಸರು ಸಮಾಜವನ್ನು ವಿವಿಧ ದೃಷ್ಟಿಕೋನಗಳಿಂದ ನೋಡಿ ವಿಮರ್ಶೆ ಮಾಡಿದ್ದಾರೆ.' ಸಮಾಜದಲ್ಲಿ

ಬೇರೂರಿದ್ದ ಅಧರ್ಮ ಅನ್ಯಾಯ ಅನಾಚಾರ ಅತ್ಯಾಚಾರಗಳನ್ನು ತೀವ್ರವಾಗಿ ಖಂಡಿಸಿ, ಸರ್ವರೂ ಸದಾಚಾರ ಸಂಪನ್ನರಾಗಬೇಕೆಂದು ಆಶಿಸಿದ್ದಾರೆ. ಈ ರೀತಿಯ ವಿಮರ್ಶೆ ಸೂರದಾಸರಲ್ಲಿಲ್ಲ. ಸೂರದಾಸರು ಮತ್ತು ಪುರಂದರದಾಸರ ಸಮಾಜದರ್ಶನದಲ್ಲಿ ಕೆಲವೆಡೆ ಮಾತ್ರ ಸಾಮ್ಯ ಕಂಡು ಬರುತ್ತದೆ.

ಜಾತೀಯತೆ ಭಾರತಕ್ಕೆ ಒಂದು ಅಭಿಶಾಪ. ಅದು ಮಾನವ ನಿರ್ಮಿತವೇ ಹೊರತು ದೇವನಿರ್ಮಿತವಲ್ಲ. ಜಾತೀಯತೆಯ ಬಗ್ಗೆ ಸೂರದಾಸರು ಹೀಗೆ ಹೇಳಿದ್ದಾರೆ :

ಜಾತಿ–ಪಾಂತಿ ಕೋಉ ಪೂಛತ ನಹಿಂ
ಶ್ರೀಪತಿ ಕೇ ದರ್ಬಾರ್[1]

ಪುರಂದರದಾಸರು ಜಾತೀಯತೆಯನ್ನು ಖಂಡಿಸಿದ್ದಾರೆ. ಆಚಾರವೇ ಗುಣ ; ಅನಾಚಾರವೇ ಹೊಲೆತನ ಎಂದು ಸಾರಿದ್ದಾರೆ. ಕೇವಲ ಹುಟ್ಟಿನಿಂದ ಹೊಲೆತನ ಬರುವಂಥದಲ್ಲ. ಸೂರದಾಸರು ಸಮಾಜದಲ್ಲಿ ಬೇರೂರಿದ್ದ ಬಾಹ್ಯಾಡಂಬರಗಳನ್ನೂ ಮೂಢನಂಬಿಕೆಗಳನ್ನೂ ಹೀಗೆ ಖಂಡಿಸುತ್ತಾರೆ :

ಜೋ, ಸುಖ ಹೋತ ಗೋಪಾಲ ಹಿಂ ಗಾಯೆ
ಸೋಂ ನಹಿಂ ಹೋತ ಜಪ-ತಪ ಕೆ ಕೀನ್ಹೆ
ಕೋಟಿಕ ತೀರಥ ನ್ಹಾಯೆ[2]

ಪುರಂದರದಾಸರೂ ಇಂತಹ ಬಾಹ್ಯಾಡಂಬರಗಳನ್ನು ಮೂಢನಂಬಿಕೆಗಳನ್ನು ಖಂಡಿಸಿದ್ದಾರೆ. ಕಪಟ ಜಪವನ್ನು 'ಬಕಧ್ಯಾನ' ಎಂದಿದ್ದಾರೆ:

ಉದಯ ಕಾಲದಲೆದ್ದು ಗಡಗಡ ನಡುಗುತ
ನದಿಯಲಿ ಮಿಂದೆನೆಂದು ಹಿಗ್ಗುತಲಿ
ಮದಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲಿದ್ದವರಿಗಾಶ್ಚರ್ಯವ ತೋರುವುದು– ಇತ್ಯಾದಿ.

ಸತ್ಕರ್ಮ ಸ್ವರ್ಗಕ್ಕೆ ದಾರಿ ; ಮಾನವನ ಜೀವನದ ಜೀವಾಳ. ಕರ್ಮಕ್ಕೆ ತಕ್ಕ ಫಲ ಎಂಬುದನ್ನು ಸೂರದಾಸರು ಹೀಗೆ ವರ್ಣಿಸಿದ್ದಾರೆ :

---

[1] ಶ್ರೀಪತಿಯ ದರ್ಬಾರಿನಲ್ಲಿ ಜಾತೀಯತೆ ಇಲ್ಲವೇ ಇಲ್ಲ.

[2] ಗೋಪಾಲನನ್ನು ಭಜಿಸುವುದರಿಂದ ದೊರೆಯುವ ಸುಖ ಬಾಹ್ಯಾಡಂಬರಗಳಾದ ಜಪ ತಪ, ತೀರ್ಥಸ್ಥಾನಗಳಿಗೆ ಹೋಗಿ ಸ್ನಾನ ಮಾಡುವುದರಿಂದ ಲಭಿಸುವುದಿಲ್ಲ.

ಭಾಈ ಬಂಧು ಕುಟುಂಬ ಸಹೋದರ
ಸಬ್‌ಮಿಲಿ ಯಹೈವಿಚಾರ್ಯೋ ಜೈಸೆಕರ್ಮ ಲಹೌ ಫಲ ತೈಸೆ[1]

ಪುರಂದರದಾಸರೂ 'ವಿಷಯಂದ ವಿಚಾರ ಬಿಡು, ವಿಹಿತ ಕರ್ಮವ ಮಾಡು' ಎಂದು ಎಚ್ಚರಿಸಿದ್ದಾರೆ.

ಸೂರದಾಸರು ಮತ್ತು ಪುರಂದರದಾಸರಲ್ಲಿ ಭಗವಂತನ ಮಹಿಮೆಯನ್ನು ಬಣ್ಣಿಸಲು ಕಾವ್ಯ ಒಂದು ಮಾಧ್ಯಮ ಮಾತ್ರ. ಅವರು 'ಕವಿ' ಬಿರುದು ಪಡೆಯಲು ಕಾವ್ಯರಚನೆಗೆ ಕೈಹಾಕಿದವರಲ್ಲ. ಕಾವ್ಯಶಾಸ್ತ್ರವನ್ನು ಅಭ್ಯಾಸಮಾಡಿ ಕಾವ್ಯಲಕ್ಷಣಗಳಿಗನುಸಾರವಾಗಿ ಕಾವ್ಯ ಬರೆಯಲು ಹೊರಟವರಲ್ಲ. ಈ ಭಕ್ತರ ಹೃದಯಕ್ಕೆ ಕವಿಹೃದಯ ಹೊಂದಿಕೊಂಡೇ ಬಂದಿರುವುದರಿಂದ ಭಾವಭಾಗೀರಥಿಯೊಡನೆ ಕಲಾಕಾಳಿಂದಿಯ ಸಂಗಮವಾಗಿರುವುದನ್ನು ಕಾಣಬಹುದು.

ಈಗ ನಮಗೆ ಲಭ್ಯವಿದ್ದು ಸೂರದಾಸರ ಕೃತಿಗಳೆಂದು ಮನ್ನಣೆ ಪಡೆದಿರುವ ಗ್ರಂಥಗಳು ಕೇವಲ ಮೂರು. ಸಾಹಿತ್ಯಲಹರಿ, ಸೂರಸಾರಾವಲಿ ಮತ್ತು ಸೂರಸಾಗರ. ಸಾಹಿತ್ಯಲಹರಿಯಲ್ಲಿ ಒಟ್ಟು ೧೧೮ ಪದಗಳಿವೆ. ಸೂರಸಾರಾವಲಿ ಕಾಮನ ಹಬ್ಬದ ಹಾಡುಗಳ ಸಂಗ್ರಹ. ಇದರಲ್ಲಿ ೧೧೦೨ ದ್ವಿಪದಿಗಳಿವೆ. ಸೂರಸಾಗರ ಒಂದೂಕಾಲು ಲಕ್ಷ ಪದಗಳ ಸಂಗ್ರಹವೆಂದು ಪ್ರತೀತಿ. ಆದರೆ ಈಗ ಲಭ್ಯವಾಗಿರುವ ಪದಗಳು ಸುಮಾರು ಹತ್ತುಸಾವಿರ. ಈ ಗ್ರಂಥದಲ್ಲಿ ಭಕ್ತಿ, ವಿಷ್ಣುವಿನ ಅವತಾರಗಳು, ಅನೇಕ ಪೌರಾಣಿಕ ಕತೆಗಳು, ಕೃಷ್ಣನ ವಿವಿಧ ಲೀಲೆಗಳು, ಗುರುಮಹಿಮೆ, ಸತ್ಸಂಗಮಹಿಮೆ, ವೈರಾಗ್ಯ, ಭ್ರಮರಗೀತೆ ಮುಂತಾದವುಗಳ ವರ್ಣನೆಯಿದೆ. ಸೂರಸಾಗರ ಭಾಗವತದ ಆಧಾರದ ಮೇಲೆ ರಚಿತವಾಗಿದೆ. ವಿಶೇಷವಾಗಿ ದಶಮಸ್ಕಂಧದ ಕತೆ ವಿಸ್ತಾರವಾಗಿ ಬಂದಿದೆ. ಪುರಂದರದಾಸರ ಕೀರ್ತನೆಗಳ ಒಟ್ಟು ಸಂಖ್ಯೆ ೪,೭೫,೦೦೦ ಎಂದು ಪ್ರತೀತಿ. ಆದರೆ ನಮಗೆ ಲಭ್ಯವಾಗಿರುವ ಕೀರ್ತನೆಗಳ ಸಂಖ್ಯೆ ಸುಮಾರು ಒಂದು ಸಾವಿರ ಮಾತ್ರ.

ರಸನಿರೂಪಣೆ, ಪಾತ್ರಚಿತ್ರಣ, ನಾಟಕೀಯತೆ, ವಿಡಂಬನೆ, ಪದಸಂಯೋಜನೆ, ವಾಗ್ವಿದಗ್ಧತೆ, ವರ್ಣಯೋಜನೆ, ಉಕ್ತಿವೈಚಿತ್ರ್ಯ, ಭಾವತೀವ್ರತೆ, ಅರ್ಥಸ್ವಾರಸ್ಯ, ಭಾವಾನುವರ್ತಿ ಶೈಲಿ, ಅಲಂಕಾರಗಳ ಸ್ವಾಭಾವಿಕ

[1] ಸೋದರರೇ ಮತ್ತು ಬಂಧುಗಳೇ ಎಲ್ಲರೂ ಗಮನಿಸಬೇಕಾದ ಅಂಶವೇನೆಂದರೆ ಕರ್ಮಕ್ಕೆ ತಕ್ಕ ಫಲ ಸಿಗುತ್ತದೆ. ಆದುದರಿಂದ ಸತ್ಕರ್ಮ ಮಾಡಿ ಸತ್ಫಲ ಪಡೆಯಿರಿ.

ಪ್ರಯೋಗ–ಹೀಗೆ ಯಾವುದೇ ದೃಷ್ಟಿಯಿಂದ ಸೂರದಾಸರ ಪದಗಳನ್ನು ನೋಡಿದರೂ ಅವುಗಳಲ್ಲಿ ಕಾವ್ಯಗುಣ ಸ್ಫುಟವಾಗಿ ಕಾಣುತ್ತದೆ. ಸೂರದಾಸರು ಒಂದೇ ಕಡೆ ಕುಳಿತು ಪದರಚನೆ ಮಾಡಿದುದರಿಂದ ಅವರಿಗೆ ತಮ್ಮ ಕಾವ್ಯ ಶಿಲ್ಪದ ಬಗ್ಗೆ ಚಿಂತನೆ ಮಾಡಲು ಸಮಯ ಸಿಗುತ್ತಿತ್ತು. ಪುರಂದರದಾಸರದು ಆಶುಕವಿತ್ವವಾದುದರಿಂದ ಅದೇ ಅದಕ್ಕೆ ಮಿತಿಯಾಗಿ ಪರಿಣಮಿಸಿದೆ. ಆದರೆ ಇಬ್ಬರ ಕೃತಿಗಳ ಮೂಲಸ್ರೋತವೂ ಭಕ್ತಿಯೇ ಆಗಿದೆ.

ಸೂರದಾಸರ ಪದಗಳಲ್ಲಿ ಅನುಪ್ರಾಸವೈಭವ ಹೆಚ್ಚು; ಅದರಲ್ಲೂ ಹೆಚ್ಚು ಪ್ರಿಯವಾದುದು ಛೇಕಾನುಪ್ರಾಸ. ಉದಾ :

ಮಾಯಾನಟಿ ಲಪಟಿ ಕರಲೀನ್ಹೆಂ ಕೋಟಿಕ ನಾಚ್‌ನಚಾವೈ

ಪುರಂದರದಾಸರ ಕೃತಿಗಳಲ್ಲಿ ಆದಿ ಮಧ್ಯ ಮತ್ತು ಅಂತ್ಯಪ್ರಾಸಗಳ ಬಳಕೆಯಿದೆ, ಉದಾ :

ದೇವ ಬಂದ ನಮ್ಮ ಸ್ವಾಮಿ ಬಂದನೋ
ದೇವರ ದೇವ ಶಿಖಾಮಣಿ ಬಂದನೋ
ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ

ಯಮಕ ಉಪಮೆ ರೂಪಕ ಸ್ವಭಾವೋಕ್ತಿ ಮೊದಲಾದ ಅಲಂಕಾರಗಳನ್ನು ಸೂರದಾಸ ಹಾಗೂ ಪುರಂದರದಾಸ–ಇಬ್ಬರ ಕೃತಿಗಳಲ್ಲೂ ಯಥೇಚ್ಛವಾಗಿ ಗುರುತಿಸಬಹುದು.

ಸೂರದಾಸರ ಕೀರ್ತನೆಗಳು ಮುಕ್ತಕಗಳು. ಅವರು ಮುಖ್ಯವಾಗಿ ಚೌಪಾಈ ಚೌಬೋಲಾ, ತೋಮರ, ಚಂಡಿಕಾ, ಮಾನವ, ಡಿಲ್ಲಾ, ದೋಹಾ ಮುಂತಾದ ಛಂದಸ್ಸುಗಳನ್ನು ಬಳಸಿದ್ದಾರೆ. ಪುರಂದರದಾಸರು ಕೀರ್ತನೆಗಳು, ಸುಳಾದಿ, ಉಗಾಭೋಗ, ವೃತ್ತನಾಮಗಳು ಎಂಬ ಪ್ರಕಾರಗಳಲ್ಲಿ ಹಾಡುಗಳನ್ನು ರಚಿಸಿದ್ದಾರೆ. ಸೂರದಾಸರು ಮತ್ತು ಪುರಂದರದಾಸರ ಶೈಲಿಯಲ್ಲಿ ನಾದ ಮಾಧುರ್ಯವಿದೆ; ಲಯವೈವಿಧ್ಯವಿದೆ; ಶಬ್ದಮಾಧುರ್ಯವಿದೆ; ತಾಳ ಲಯಗಳ ಸುಮಧುರ ಸಂಯೋಜನೆಯಿದೆ; ಲಯವಿನ್ಯಾಸವಿದೆ; ರಮಣೀಯ ಪದವಿನ್ಯಾಸದ ಜೊತೆಗೆ ರಮಣೀಯ ಅರ್ಥದ ಸ್ವಾರಸ್ಯವಿದೆ.

ಸೂರದಾಸರ ಕೀರ್ತನೆಗಳ ಭಾಷೆ ಬ್ರಜಭಾಷೆ. ಅವರ ಕೈಯಲ್ಲಿ ಬ್ರಜ ಭಾಷೆ ಮೊತ್ತಮೊದಲಿಗೆ ಸಾಹಿತ್ಯಿಕ ಭಾಷೆಯಾಗಿ ವಿಜೃಂಭಿಸಿದೆ. ಆದ್ದರಿಂದ ವಿಮರ್ಶಕರು ಆತನನ್ನು ಬ್ರಜಭಾಷೆಯ ವಾಲ್ಮೀಕಿಯೆಂದು ಕರೆದಿದ್ದಾರೆ. ಸೂರದಾಸರು ಮತ್ತು ಪುರಂಧರದಾಸರ ಭಾಷೆಯ ವೈಶಿಷ್ಟ್ಯ–ಸರಳತೆ ಮತ್ತು

ಸಹಜತೆ, ಆಡುನುಡಿಯ ಸೊಬಗು ಗಾದೆಗಳು ನುಡಿಗಟ್ಟುಗಳು ನೈಜತೆಯಿಂದ ಕೂಡಿ ಅರ್ಥಸ್ವಾರಸ್ಯಕ್ಕೆ ಮೆರುಗು ನೀಡಿವೆ. ಚಿತ್ರಕವಿತ್ವವನ್ನು ಇಬ್ಬರಲ್ಲೂ ಕಾಣುತ್ತೇವೆ. ಸೂರದಾಸರ ದೃಷ್ಟಿಕೂಟಪದಗಳು ಮತ್ತು ಪುರಂದರದಾಸರ ಬೆಡಗಿನವಚನಗಳನ್ನು ಅರ್ಥೈಸಲು ಉಪನಿಷತ್ತು, ಯೋಗ ಮತ್ತು ತಂತ್ರಜ್ಞಾನಗಳ ಜ್ಞಾನವಿದ್ದರೆ ಮಾತ್ರ ಸಾಧ್ಯ.

ಸೂರದಾಸರು ಸಂಗೀತಶಾಸ್ತ್ರಜ್ಞರು. ಅವರು ಉದ್ದಾಮ ಸಂಗೀತಗಾರರಾಗಿದ್ದರು. ಕವಿ ಪ್ರತಿಯೊಂದು ಪದಕ್ಕೂ ತಾವೇ ರಾಗ ನಿರ್ಧರಿಸಿ ಹಾಡಿದ್ದಾರೆ. ಸೂರಸಾಗರವಂತೂ ಅನೇಕ ರಾಗ–ರಾಗಿಣಿಗಳ ಭಂಡಾರ. ಸೂರದಾಸರು ಹೊಸ ಹೊಸ ರಾಗಗಳನ್ನೂ ಸೃಷ್ಟಿಸಿದ್ದಾರೆ. ಪುರಂದರದಾಸರ ಹಾಡುಗಳಲ್ಲಿಯೂ ಸಂಗೀತ ಹಾಸುಹೊಕ್ಕಾಗಿದೆ. ಕರ್ನಾಟಕ ಸಂಗೀತಕ್ಕೆ ಪುರಂದರದಾಸರು ಹಾಕಿದ ಭದ್ರಬುನಾದಿಯ ಮೇಲೆ ಅನಂತರ ಬಂದ ವಾಗ್ಗೇಯಕಾರರು ಭವ್ಯಭವನ ನಿರ್ಮಿಸಿದ್ದಾರೆ. ತಂಜಾವೂರಿನ ತುಳಜಾಜಿ ಪುರಂದರದಾಸರ ಸಂಗೀತಸಂಪತ್ತನ್ನು ಅರ್ಥಮಾಡಿಕೊಂಡು ಅವರ ಬಗ್ಗೆ ಅಭಿಮಾನ ತಳೆದಿರುವುದು ಸಂಗೀತಕ್ಷೇತ್ರದಲ್ಲಿ ಪುರಂದರದಾಸರು ಗಳಿಸಿದ್ದ ಪ್ರತಿಷ್ಠೆಯ ಫಲ.

ಸಂಕ್ಷಿಪ್ತವಾಗಿ ಹೇಳುವುದಾದರೆ ಸೂರದಾಸ ಪುರಂದರದಾಸರಿಬ್ಬರೂ ಸಗುಣೋಪಾಸಕರು. ಭಗವಂತನ ಗುಣಗಾನವೇ ಅವರ ಕಾವ್ಯೋದ್ದೇಶ. ಅವರು ವರ್ಣಿಸಿರುವ ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಭಾಷೆ ಬೇರೆಯಾಗಿದ್ದರೂ ಬಹುಮಟ್ಟಿಗೆ ಭಾವಸಾಮ್ಯ ಕಂಡುಬರುತ್ತದೆ. ಅವರು ಜ್ಞಾನಕ್ಕಿಂತ ಭಕ್ತಿಗೆ ಮಹತ್ತರವಾದ ಸ್ಥಾನ ನೀಡಿದ್ದಾರೆ. ಸೂರದಾಸರು ಅಭೇದವಾದಿಗಳಾದರೆ ಪುರಂದರದಾಸರು ಭೇದವಾದಿಗಳು. ಇಬ್ಬರೂ ವಿಷ್ಣುವಿನ ಪಾರಮ್ಯವನ್ನು ಮನಸಾರೆ ಹೊಗಳಿದ್ದಾರೆ. ತ್ರಿವಿಧ ಜೀವರುಗಳ ವರ್ಗೀಕರಣ ಮಾಡಿದ್ದಾರೆ. ಜಗತ್ತು ಸತ್ಯವೆಂದು ಪ್ರತಿಪಾದಿಸಿದ್ದಾರೆ. ಸೂರದಾಸರಲ್ಲಿ ನಿರ್ಗುಣಬ್ರಹ್ಮ ಹಾಗೂ ಯೋಗಮಾರ್ಗದ ಖಂಡನೆ ಕಂಡುಬರುತ್ತದೆ. ಈ ಖಂಡನೆ ಪುರಂದರದಾಸರಲ್ಲಿಲ್ಲ. ಪುರಂದರದಾಸರಲ್ಲಿ ಕಂಡುಬರುವ ದಟ್ಟವಾದ ಸಾಮಾಜಿಕ ಪ್ರಜ್ಞೆ, ಸಮಗ್ರ ಸಮಾಜಚಿತ್ರಣ ಮತ್ತು ಸಮಾಜವಿಮರ್ಶೆ ಸೂರದಾಸರಲ್ಲಿ ಕಂಡುಬರುವುದಿಲ್ಲ. ಸೂರದಾಸರು ಬ್ರಜ ಪ್ರದೇಶದ ಲೋಕ ಜೀವನವನ್ನು ಮಾತ್ರ ಚಿತ್ರಿಸಿದ್ದಾರೆ. ಸಂಗೀತಕ್ಷೇತ್ರಕ್ಕೆ ಈ ಇಬ್ಬರು ಸಂತರ ಕೊಡುಗೆ ಅಪಾರ ಹಾಗೂ ಅಪೂರ್ವ. ಅವರ ಸಾಹಿತ್ಯದಲ್ಲಿ ಗಾಯನ ವಾದನ ಮತ್ತು ನರ್ತನಗಳ ತ್ರಿವೇಣೀಸಂಗಮವಿದೆ. ಪುರಂದರದಾಸರಲ್ಲಿ ಇಲ್ಲದಿರುವ ರಾಧೆಯ ಕಲ್ಪನೆ, ಭ್ರಮರಗೀತೆಯ ಪ್ರಸಂಗಗಳನ್ನು ಸೂರದಾಸರಲ್ಲಿ ಕಾಣುತ್ತೇವೆ. ಹೀಗೆ ಈ ಇಬ್ಬರು ಭಕ್ತಶ್ರೇಷ್ಠರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಕೀರ್ತಿಯ ಶಿಖರವನ್ನು ಮುಟ್ಟಿದ್ದಾರೆ.

# ಪುರಂದರದಾಸರು–ಚೈತನ್ಯದೇವರು

ವಿ.ಜಿ. ಕೃಷ್ಣಮೂರ್ತಿ

ಪುರಂದರದಾಸರು ಮತ್ತು ಶ್ರೀಕೃಷ್ಣಚೈತನ್ಯದೇವರು – ಈ ಇಬ್ಬರು ಪುಣ್ಯಪುರುಷರನ್ನು ಭಕ್ತಿಪ್ರಸಾರಕರೆಂಬ ದೃಷ್ಟಿಯಿಂದ ವಿಚಾರ ಮಾಡುವುದು, ಅವರುಗಳಲ್ಲಿ ಕಂಡುಬರುವ ಪರಸ್ಪರ ಭಾವಸಾಮ್ಯಗಳನ್ನು ಗುರುತಿಸುವುದು ಈ ಲೇಖನದ ಉದ್ದೇಶ. ಭಕ್ತಿಯ ಇತಿಹಾಸವನ್ನು ಗಮನಿಸಿದರೆ ಭಕ್ತಿ ವೇದಗಳಷ್ಟು ಪ್ರಾಚೀನವೆಂಬುದು ಸರ್ವವಿದಿತ. ಪ್ರಾರಂಭದಲ್ಲಿ ವಾಸುದೇವನ ಹಾಗೂ ಕೃಷ್ಣನ ಉಪಾಸನೆಗಳೆರಡೂ ಪ್ರತ್ಯೇಕವಾಗಿದ್ದುವೆಂದು ಹೇಳಬಹುದಾದರೂ, ಅವುಗಳೆರಡೂ ಕಾಲಕ್ರಮದಲ್ಲಿ ಒಟ್ಟುಗೂಡಿ ಕೃಷ್ಣ ವಾಸುದೇವನೆಂಬ ಏಕದೇವತೆಯ ಕಲ್ಪನೆಗೆ ದಾರಿಕೊಟ್ಟುವು. ಪತಂಜಲಿಯ ಮಹಾಭಾಷ್ಯದಲ್ಲಿ ಅವರಿಬ್ಬರಿಗೂ ನಿಕಟಸಂಬಂಧವು ಸೂಚಿತವಾಗಿದೆ.[1] ''ಭಗವದ್ಗೀತೆ ಹಾಗೂ ಅನುಗೀತೆಗಳ ನಡುವಣ ಕಾಲದಲ್ಲಿ ವಾಸುದೇವಕೃಷ್ಣನನ್ನು ವಿಷ್ಣುವಿನೊಡನೆ ಗುರುತಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ''[2] ಪುರಾಣಗಳಲ್ಲಿ ಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಪರಿಗಣಿಸಿದೆ. ಭಗವದ್ಗೀತೆಯಲ್ಲಿ ಕೃಷ್ಣಭಕ್ತಿ ಪ್ರಧಾನವಾಗಿ ಕಂಡು ಬಂದು ವೈಷ್ಣವ ಸಂಪ್ರದಾಯಗಳಿಗೆ ಕೃಷ್ಣನೇ ಪುರುಷೋತ್ತಮನಾಗಿ, ಪರಮಾತ್ಮನಾಗಿ ಕಾಣಿಸಿಕೊಂಡಿದ್ದಾನೆ.

ಹನ್ನೆರಡನೆಯ ಶತಮಾನದ ಪ್ರಾರಂಭದಲ್ಲಿ ಆಂಧ್ರಪ್ರದೇಶದ ವಲ್ಲಭಾಚಾರ್ಯರು, ಹದಿನೈದನೆಯ ಶತಮಾನದಲ್ಲಿ ಶ್ರೀ ಮಧ್ವಾಚಾರ್ಯರು (ಆನಂದತೀರ್ಥರು) ದ್ವೈತ ಸಂಪ್ರದಾಯವನ್ನು ಮತ್ತು ಕೃಷ್ಣಭಕ್ತಿಯನ್ನು ಉತ್ತರ ಭಾರತದಲ್ಲಿ ಹರಡಿ ವೈಷ್ಣವ ಪಂಥಕ್ಕೆ ನವಚೇತನ ನೀಡಿದರು. ರಾಮಾನಂದರು ಮತ್ತು ಶ್ರೀಕೃಷ್ಣಚೈತನ್ಯರು ವೈಷ್ಣವಭಕ್ತಿ ಚಳುವಳಿಗಳಿಗೆ ಸ್ಫೂರ್ತಿ ನೀಡಿದರು. ಅದೇ ಕಾಲದಲ್ಲಿ ದಕ್ಷಿಣದಲ್ಲಿ ಮಧ್ವಮತಾನುಯಾಯಿಗಳೂ, ವೈಷ್ಣವ ಭಕ್ತರೂ ಆಗಿದ್ದ ಪುರಂದರದಾಸರ ಹಾಗೂ ಶ್ರೀಕೃಷ್ಣಚೈತನ್ಯರ (೧೪೮೬–೧೫೩೩) ಪರಂಪರಾಗತವಾದ ಜೀವನ ವಿವರಗಳು ಹೀಗಿವೆ :

---

[1] Indian Antiquary, III p. 16

[2] Sri. R. G. Bhandarkar, Vaishnavism, p. 34

ಪುರಂದರದಾಸರ ಜನನ ಮಹಾರಾಷ್ಟ್ರದ ಪುಣೆಗೆ ಹದಿನೆಂಟು ಮೈಲಿ ದೂರದಲ್ಲಿರುವ ಪುರಂದರಗಡದಲ್ಲಿ. ಹರಿದಾಸ ದೀಕ್ಷೆಗೆ ಹಿಂದೆ ಶ್ರೀನಿವಾಸ ನಾಯಕ ಎಂಬ ಹೆಸರನ್ನು ತಾಳಿದ್ದ ಅವರ ಕಸುಬು ಚಿನ್ನ–ಬೆಳ್ಳಿ ವ್ಯಾಪಾರ. ಭಗವಂತನ ಲೀಲೆಯಿಂದ ಜ್ಞಾನೋದಯವಾದ ಶ್ರೀನಿವಾಸ ನಾಯಕರು ಸರ್ವಸ್ವವನ್ನೂ ತ್ಯಾಗಮಾಡಿ, ಮಡದಿ ಮಕ್ಕಳೊಂದಿಗೆ ಹೊರಟು ಹಂಪೆಯಲ್ಲಿ ಶ್ರೀ ವ್ಯಾಸರಾಯರಿಂದ ಹರಿದಾಸ ದೀಕ್ಷೆ ಪಡೆದು ಪುರಂದರವಿಠಲನೆಂಬ ಅಂಕಿತದಲ್ಲಿ ಹರಿಧ್ಯಾನ ಮಾಡುತ್ತ ಜೀವನವನ್ನು ಕಳೆದರೆಂದು ತಿಳಿದುಬರುತ್ತದೆ. ಅವರ ಜೀವನವಿಚಾರವಾಗಿ ಅಧಿಕೃತ ವಿವರಗಳು ಹೆಚ್ಚಾಗಿ ತಿಳಿದು ಬಂದಿಲ್ಲ. ಶ್ರೀಕೃಷ್ಣಚೈತನ್ಯರು ಪಶ್ಚಿಮ ಬಂಗಾಳದ ನಾದಿಯಾ ಜಿಲ್ಲೆಯ ನವದ್ವೀಪದಲ್ಲಿ ಜನಿಸಿದರು. ಅವರ ತಂದೆ ವೈದಿಕಬ್ರಾಹ್ಮಣರಾದ ಜಗನ್ನಾಥ ಮಿಶ್ರ. ತಾಯಿ ಸಚೀದೇವಿ. ಸನ್ಯಾಸಕ್ಕೆ ಮುಂಚೆ ಚೈತನ್ಯರ ಹೆಸರು ನಿಮಾಯಿ, ವಿಶ್ವಂಭರ, ಗೌರಾಂಗ. ಬಡಕುಟುಂಬದಲ್ಲಿ ಹುಟ್ಟಿದರೂ ವಿಶ್ವಂಭರ ಮನೆತನಕ್ಕೆ ಬಳುವಳಿಯಾಗಿ ಬಂದಂತೆ ಮಹಾ ಪಂಡಿತರಾದರು. ನವದ್ವೀಪದಲ್ಲಿ ಸಂಸ್ಕೃತ ಶಾಲೆಯನ್ನು ತೆರೆದು ಬೋಧಿಸತೊಡಗಿದರು. ಪಂಡಿತನೆಂಬ ಅಹಂಭಾವವೂ ವಿಶ್ವಂಭರ ಪಂಡಿತರಿಗಿದ್ದಿತು. ವಿಶ್ವಂಭರರ ಮೊದಲ ಹೆಂಡತಿ ಲಕ್ಷ್ಮೀದೇವಿ ಹಾವು ಕಡಿದು ಮೃತರಾಗಲು, ತಾಯಿ ಸಚೀದೇವಿಯ ಒತ್ತಾಯಕ್ಕೆ ವಿಶ್ವಂಭರಪಂಡಿತ ವಿಷ್ಣುಪ್ರಿಯಾ ಎಂಬ ಕನ್ಯೆಯನ್ನು ವಿವಾಹವಾದರು. ತಂದೆ ಮೃತರಾದ ಮೇಲೆ ಸಂಸಾರದ ಹೊಣೆ ವಿಶ್ವಂಭರರ ಮೇಲೆ ಬಿತ್ತು. ತಮ್ಮ ೨೨ನೆಯ ವಯಸ್ಸಿನಲ್ಲಿ ಅವರು ಗಯಾ ಕ್ಷೇತ್ರಕ್ಕೆ ಹೋಗಿ ಅಲ್ಲಿ ಈಶ್ವರಪುರೀ ಎಂಬ ವೈಷ್ಣವ ಗುರುಗಳಿಂದ ದೀಕ್ಷೆಪಡೆದರು. ಈಶ್ವರಪುರೀ ವೈಷ್ಣವಗುರು ಮಾಧವೇಂದ್ರಪುರೀ ಅವರ ಶಿಷ್ಯರು.

ಗಯಾ ಕ್ಷೇತ್ರದಿಂದ ಹಿಂದಿರುಗಿದ ಮೇಲೆ ವಿಶ್ವಂಭರಪಂಡಿತರ ಜೀವನ ಪರಿವರ್ತನೆಗೊಂಡಿತು. ಸಂಸ್ಕೃತ ಶಾಲೆಯನ್ನು ಮುಚ್ಚಿ ಸದಾ ಹರಿಧ್ಯಾನದಲ್ಲೇ ಮುಳುಗಿದರು. ಪಂಡಿತನೆಂದು ಬೀಗುತ್ತಿದ್ದ ಅವರು ಕೃಷ್ಣಭಕ್ತರಾಗಿ ಭಕ್ತಿಯ ಆವೇಶದಲ್ಲಿ ಮೈಮರೆಯುತ್ತಿದ್ದರು. ನವದ್ವೀಪವಾಸಿಗಳು ಅವರನ್ನು ಶ್ರೀಕೃಷ್ಣನ ಅವತಾರವೆಂದು ಭಾವಿಸಿದರು. ಅನೇಕರು ಅವರ ಅನುಯಾಯಿಗಳಾದರು. ಅವರ ಪೈಕಿ ಅದ್ವೈತಪಂಡಿತ ಮತ್ತು ನಿತ್ಯಾನಂದ ಪ್ರಮುಖರು. ವಿಶ್ವಂಭರ ಅವರೊಂದಿಗೆ ಸೇರಿ ಶಿಷ್ಟಾಚಾರಗಳಿಲ್ಲದ ಸುಲಭ ಕ್ರಮದಲ್ಲಿ ಸಂಕೀರ್ತನ ಪದ್ಧತಿಯನ್ನು ಸ್ಥಾಪಿಸಿದರು. ಹರಿಭಕ್ತರು ಮೊದಲು ಮನೆಗಳಲ್ಲಿ ತರುವಾಯ ಬೀದಿಬೀದಿಗಳಲ್ಲಿ ಹರಿನಾಮ ಸಂಕೀರ್ತನೆಯನ್ನು ಮಾಡತೊಡಗಿದರು. ವೈದಿಕರು ವಿಶ್ವಂಭರರ ಹರಿಸಂಕೀರ್ತನೆ ಸಾರ್ವಜನಿಕ

ನೆಮ್ಮದಿಗೆ ಹಾನಿಕರವೆಂದು ನವದ್ವೀಪದ ಖಾಜಿಗೆ ದೂರುಕೊಟ್ಟರು. ಚಾಂದ್ ಖಾಜಿಗೆ ಚೈತನ್ಯರ ಸಂಕೀರ್ತನೆಗಳಲ್ಲಿ ಯಾವ ಲೋಪವೂ ಕಂಡುಬರಲಿಲ್ಲ. ವಿಶ್ವಂಭರ ಕ್ರಿ.ಶ. ಜನವರಿ ೧೫೧೦ರಲ್ಲಿ ಸಂಸಾರವನ್ನು ತ್ಯಜಿಸಿ ಕೇಶವ ಭಾರತಿ ಎಂಬ ಅದ್ವೈತ ಗುರುಗಳಿಂದ ಸನ್ಯಾಸವನ್ನು ಸ್ವೀಕರಿಸಿ, 'ಕೃಷ್ಣ ಚೈತನ್ಯ' ಎಂಬ ಅಂಕಿತವನ್ನು ಪಡೆದರು. ತರುವಾಯ ಒಂದು ತಿಂಗಳಲ್ಲೇ ಅವರು ಪುರಿ (ಒರಿಸ್ಸಾ) ಪಟ್ಟಣಕ್ಕೆ ತೆರಳಿ ಅಲ್ಲಿ ಜಗನ್ನಾಥನ ಸೇವೆಗೈದರು. ಪುರಿ ಪಟ್ಟಣದಿಂದ ತೀರ್ಥಯಾತ್ರೆ ಹೊರಟು ಆರು ವರ್ಷಗಳ ಕಾಲ (ವ್ಯಾಸ ರಾಯರ ಕಾಲದಲ್ಲಿ) ಭಾರತದ ವಿವಿಧ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದರು. ಬೃಂದಾವನ, ವಾರಾಣಸಿಗಳಿಗೆ ಹೋದರು. ವಿಜಯನಗರಕ್ಕೆ ಭೇಟಿಕೊಟ್ಟರು. ಉಡುಪಿಗೆ ಬಂದು ಶ್ರೀಕೃಷ್ಣನ ದರ್ಶನಪಡೆದು ಹರಿಧ್ಯಾನದಲ್ಲಿ ಮೈಮರೆತು ಹಾಡಿ ಕುಣಿದರು. ಉಡುಪಿ ಕೃಷ್ಣಮಂದಿರದಿಂದ ಶ್ರೀ ಮಧ್ವಾಚಾರ್ಯರ ಜ್ಞಾನಜ್ಯೋತಿಯನ್ನು ಹಚ್ಚಿಕೊಂಡು ಹೋಗಿ ಶ್ರೀಕೃಷ್ಣನ ಲೀಲಾಭೂಮಿ ಯಾದ ಬೃಂದಾವನದ ತಮ್ಮ ಮಠದಲ್ಲಿ ಬೆಳಗಿಸಿದರು. ಈ ನಂದಾದೀವಿಗೆ ಐದುನೂರು ವರ್ಷಗಳಾದರೂ ಇಂದೂ ಬೃಂದಾವನದ ಗೌಡೀಯ ವೈಷ್ಣವ ಸಂಪ್ರದಾಯದ ಚೈತನ್ಯ ಮಠದಲ್ಲಿ ಮಧ್ವಾಚಾರ್ಯರ ಪ್ರಭಾವದ ಜ್ಞಾನ ಭಕ್ತಿವೈರಾಗ್ಯಗಳ ದೀವಿಗೆಯಾಗಿ ಬೆಳಗುತ್ತಿದೆ.

ಚೈತನ್ಯ ಮಹಾಪ್ರಭು ಸ್ವಗ್ರಾಮವನ್ನು ೧೫೧೫ ರಲ್ಲಿ ಬಿಟ್ಟು ಪುರಿ ಜಗನ್ನಾಥ ಪಟ್ಟಣದಲ್ಲಿ ನೆಲೆಸಿದರು. ಅವರ ಬಂಗಾಳದ ಅನುಯಾಯಿಗಳು ವಾರ್ಷಿಕವಾಗಿ ನಡೆಯುವ ಪುರಿಜಗನ್ನಾಥ ಜಾತ್ರೆಗೆ ಹೋಗಿಬರುತ್ತ ಚೈತನ್ಯ ದೇವರ ಆದೇಶದಂತೆ ಬಂಗಾಳದಲ್ಲಿ ಚೈತನ್ಯಸಂಪ್ರದಾಯವನ್ನು ಆನು ಷ್ಠಾನಕ್ಕೆ ತಂದರು. ಚೈತನ್ಯದೇವರು ಪುರಿಜಗನ್ನಾಥನ ಸೇವೆಯಲ್ಲಿ ನಿರತರಾಗಿ ಕೃಷ್ಣನಾಮಸ್ಮರಣೆಯಲ್ಲಿ ತನ್ಮಯರಾಗಿ ಸಮಾಧಿಸ್ಥಿತಿಗೆ ಒಳಗಾಗುತ್ತಿದ್ದರು. ತಮ್ಮ ನಲವತ್ತೆಂಟನೆಯ ವಯಸ್ಸಿನಲ್ಲಿ ಅವರು ಪರಮಪದವನ್ನು ಹೊಂದಿ ದರು.

ಶ್ರೀಮಧ್ವಾಚಾರ್ಯರು ಬೋಧಿಸಿದ ಭಕ್ತಿಮಾರ್ಗವನ್ನು ಸಾಮಾನ್ಯ ರಿಗೂ ತಲಪುವಂತೆ ಕನ್ನಡ ವಾಙ್ಮಯದಲ್ಲಿ ಸಾರಿದ ಹರಿದಾಸರಲ್ಲಿ ಪುರಂದರ ದಾಸರು ಮುಖ್ಯರು. ಪರಮಾತ್ಮನಲ್ಲಿ ಮಾಹಾತ್ಮ್ಯಜ್ಞಾನಪೂರ್ವಕ ವಾಗಿ, ಸುದೃಢವಾಗಿ, ಎಲ್ಲಕ್ಕೂ ಮಿಗಿಲಾಗಿ ಅಪಾರ ಸ್ನೇಹವನ್ನು ಇರಿಸು ವುದೇ ಭಕ್ತಿ, ಆ ಭಕ್ತಿ ಪ್ರೇಮಪ್ರವಾಹರೂಪವಾಗಿರಬೇಕು ; ಅಂಥ ಭಕ್ತಿ ಯಿಂದಲೇ ಮುಕ್ತಿ ಎಂದು ಶ್ರೀಮಧ್ವಾಚಾರ್ಯರು ಭಕ್ತಿಯ ಸ್ವರೂಪವನ್ನು ತಿಳಿಸಿದ್ದಾರೆ. ಚೈತನ್ಯದೇವರು ತಾವೇ ರಾಧೆಯೆಂದು ಭಾವಿಸಿ ಕೃಷ್ಣನ ಪ್ರೇಮು

ವನ್ನು ಯಾಚಿಸಿದರು, ಭಕ್ತಿಯು ಪರಾಕಾಷ್ಠೆಯಲ್ಲಿ ಕೃಷ್ಣನೊಡನೆ ಮಿಲನಗೊಂಡ ಅನುಭವ ಅವರಿಗೆ ಆಗುತ್ತಿತ್ತು. ರಾಧೆ ಅನುಭವಿಸುತ್ತಿದ್ದ ವಿರಹ ತಾಪವನ್ನೇ ಅನುಭವಿಸುವ ಸ್ಥಿತಿಯನ್ನು ಅವರು ತಾಳುತ್ತಿದ್ದರು. ಶ್ರೀಕೃಷ್ಣ ಪರಮಾತ್ಮನಿಗೆ ರಾಧೆ ತೋರಿದ ಪ್ರೇಮವೇ ಚೈತನ್ಯಪಂಥದವರ ಕೃಷ್ಣ ಭಕ್ತಿಯ ತಿರುಳು. ಕೃಷ್ಣನಾಮದ ಸ್ಮರಣೆಹಾಗೂ ನಾಮಗಾಯನದ ಮಹತ್ವವನ್ನು ಚೈತನ್ಯಮಹಾಪ್ರಭು ತನ್ನ ಅನುಯಾಯಿಗಳಿಗೆ ಬೋಧಿಸಿದರು.[1] ಪುರಂದರದಾಸರಿಗೆ ಪುರುಷೋತ್ತಮನೇ ಆರಾಧ್ಯ ದೈವ. ಶ್ರೀಕೃಷ್ಣಚೈತನ್ಯರಿಗೆ ಪುರುಷೋತ್ತಮನ ಆರಾಧನೆಗಿಂತ ರಾಧಾಕೃಷ್ಣರಿಬ್ಬರ ಆರಾಧನೆ ಪ್ರಧಾನ. ನಿಜಕ್ಕೂ ಚೈತನ್ಯರ ಭಕ್ತಿಸಂಪ್ರದಾಯ ಉಪಾಸನಾಮೂರ್ತಿ ಹಾಗೂ ಉಪಾಸಕನ ನಡುವಣ ಸಂವೇದಾತ್ಮಕದ್ವೈತದ (senseduality) ಆಧಾರದ ಮೇಲೆ ನಿಂತಿದೆ.[2]

ಭಕ್ತಿಯು ಶಾಂತ ದಾಸ್ಯ ಸಖ್ಯ ವಾತ್ಸಲ್ಯ ಮತ್ತು ಮಧುರ ಭಾವಗಳನ್ನು ಮಧ್ವ ಹಾಗೂ ಚೈತನ್ಯ ಸಂಪ್ರದಾಯಗಳು ಅಂಗೀಕರಿಸಿವೆ. ಪುರಂದರ ದಾಸರ ಕೀರ್ತನೆಗಳಲ್ಲಿ ಈ ಎಲ್ಲ ಭಾವಗಳೂ ಅಭಿವ್ಯಕ್ತವಾಗಿವೆ. ಅವರ ಆರಾಧನಾಕ್ರಮದಲ್ಲಿ ಸಖ್ಯ ಹಾಗೂ ವಾತ್ಸಲ್ಯ ಭಾವಗಳು ಜನಾದರಣೀಯ ವಾಗಿವೆ. ದಾಸರು ಸಖ್ಯಭಾವದಲ್ಲಿ ಪರಮಾತ್ಮನನ್ನು ಸಲುಗೆಯಿಂದ ಉದ್ದೇಶಿಸಿ 'ನೀನ್ಯಾಕೋ, ನಿನ್ನ ಹಂಗ್ಯಾಕೊ ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಎನ್ನುತ್ತಾರೆ. 'ಎನಗೂ ಆಣೆ ರಂಗ ನಿನಗೂ ಆಣೆ ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ' ಎಂದು ಹೇಳುತ್ತಾರೆ. ದಾಸರ ಕೃತಿಗಳಲ್ಲಿ ಕಂಡು ಬರುವ ಈ ಸ್ನೇಹಭಾವ ಗಮನಾರ್ಹವಾದುದು.ವಾತ್ಸಲ್ಯಭಾವದಲ್ಲಿ ದಾಸರು ಯಶೋದೆಯಂತೆ ಕೃಷ್ಣನ ತುಂಟತನವನ್ನು ವಹಿಸಿಕೊಂಡೇ ಮಾತನಾಡುತ್ತಾರೆ. ಅವನನ್ನು ಶೃಂಗರಿಸುವುದು, ಅವನ ಮಹಿಮೆಯನ್ನು ಕೊಂಡಾಡುವುದು, ಅವನನ್ನು ಮುದ್ದುಮಾಡುವುದು–ಈ ಕಲ್ಪನೆಗಳೊಂದಿಗೆ ಕೃಷ್ಣನ ಗುಣಗಾನ ಮಾಡುತ್ತಾರೆ. ಉದಾಹರಣೆಗೆ 'ಗೋಪಿಯ ಭಾಗ್ಯವಿದು ಶ್ರೀಪತಿ

---

[1] **Dr. K. K** Das Gupta "Sri Chaitanya and the Gaudiya Vaishnava Movement" Social Contents of Indian Religious Reform Movement, Ed. S.P. Sen Institute of Historical Studies, Culcutta, 1978, p, 65

[2] ಅದೇ p. 66

ತಾ ಶಿಶುರೂಪಿನಲಿರುವುದು', 'ಹೊರಹೋಗಿ ಆಡದಿರು ಹರಿಯೆ ಎನ್ನ ದೊರೆಯೆ', 'ಜಗದೋದ್ಧಾರನ ಆಡಿಸಿದಳೆಶೋದ' ಇತ್ಯಾದಿ ಕೃತಿಗಳನ್ನು ಗಮನಿಸಬಹುದು.

ಆದರೆ ಚೈತನ್ಯದೇವರ ಭಕ್ತಿಮಾರ್ಗದಲ್ಲಿ ಮಧುರಭಾವಕ್ಕೆ ಹೆಚ್ಚು ಪ್ರಾಧಾನ್ಯ. ಮಧುರಭಾವದಿಂದ ಕೃಷ್ಣಪ್ರೇಮದ ಸವಿಯನ್ನು ಸುಲಭವಾಗಿ ಪಡೆಯಬಹುದೆಂಬುದು ವಂಗವೈಷ್ಣವ ಸಿದ್ಧಾಂತ. ಚೈತನ್ಯದೇವರ ಕೃಷ್ಣಾರಾಧನೆಯನ್ನು ಈ ರೀತಿ ವರ್ಣಿಸಿದೆ: "ಹರಿಕೀರ್ತನೆ ನಡೆಯುವ ಕಾಲದಲ್ಲಿ ಭಕ್ತರೆಲ್ಲ ಭಕ್ತಿಯ ಆವೇಶದಲ್ಲಿ ದೈಹಿಕವಾಗಿ ಉನ್ಮಾದಕ್ಕೊಳಗಾದವರಂತೆ ಆಗುತ್ತಾರೆ, ಜ್ಞಾನತಪ್ಪಿ ಭೂಮಿಯ ಮೇಲೆ ಹೊರಳಾಡುತ್ತಾರೆ, ಪರಸ್ಪರ ತಬ್ಬಿಕೊಳ್ಳುತ್ತಾರೆ, ನಗುತ್ತಾರೆ, ಅಳುತ್ತಾರೆ. 'ಹರಿ ಬೋಲ್ ಹರಿ ಬೋಲ್' ಎಂಬ ಅವರ ಸಾಮೂಹಿಕ ಘೋಷಣೆಗಳು ಗಗನವನ್ನು ಮುಟ್ಟುತ್ತವೆ. ಅವರು ಭಕ್ತಿಸಾಗರದಲ್ಲಿ ಮುಳುಗಿ ತಾವು ಕೃಷ್ಣನಲ್ಲಿ, ಕೃಷ್ಣ ತಮ್ಮಲ್ಲಿ ಲೀನವಾದಂಥ ಅನುಭವವನ್ನು ತಾಳುತ್ತಾರೆ..."[1] ಇದು ಮಧುರಭಾವದ ಪರಾಕಾಷ್ಠೆಯೇ ಸರಿ.

ಪುರಂದರದಾಸರು ಹಾಗೂ ಚೈತನ್ಯದೇವರು ದ್ವೈತಸಿದ್ಧಾಂತವನ್ನು ಪ್ರಚಾರ ಮಾಡಿದರು. ಈ ಮಹಾಪುರುಷರಿಬ್ಬರೂ 'ಗುರುವಿನ ಗುಲಾಮರು'. ಪುರಂದರದಾಸರು ಹರಿದಾಸರಾಗಿ ಭಕ್ತಿಯನ್ನು ಹರಡುವ ಹಾಗೂ ಸಮಾಜವನ್ನು ಸುಧಾರಿಸುವ ಕಾರ್ಯದಲ್ಲಿ ತೊಡಗಿದರು; ಚೈತನ್ಯದೇವರು ವಂಗದೇಶದಲ್ಲಿ ವೈಷ್ಣವಮತಾಚಾರ್ಯರಾಗಿ ತಮ್ಮ ಅನುಯಾಯಿಗಳ ಹಾಗೂ ಭಕ್ತರಮೂಲಕ ಭಕ್ತಿಮಾರ್ಗವನ್ನು ಪ್ರಸಾರ ಮಾಡಿದರು. ಪುರಂದರದಾಸರು ಭಕ್ತಿ ಹಾಗೂ ದ್ವೈತತತ್ತ್ವಗಳನ್ನು ಜನಸಾಮಾನ್ಯರಿಗೆ ತಿಳಿಸಲು ಹಾಗೂ ಜೀವನ ಧರ್ಮವನ್ನು ಬೋಧಿಸಲು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ಹಾಡಿದರು. ಚೈತನ್ಯಪ್ರಭು ಶಿಕ್ಷಾಷ್ಟಕದ ವಿನಾ ಬೇರೆ ಪದಾವಳಿಗಳನ್ನು ರಚಿಸಲಿಲ್ಲ. ಅವರ ಭಕ್ತಿಪಂಥವನ್ನು ಹರಡಲು ಅವರ ಶಿಷ್ಯವರ್ಗದವರೇ ಬಂಗಾಳಿಯಲ್ಲಿ ವೈಷ್ಣವಗೀತೆಗಳನ್ನು ರಚಿಸಿ ಸಂಕೀರ್ತನೆಗಳಲ್ಲಿ ಬಳಸಿದರು. ಈ ಇಬ್ಬರು ಮಹಾಪುರುಷರೂ ವಿರಕ್ತರಾಗಿ ಹರಿಸೇವೆ ಮಾಡಿದವರು. ಪುರಂದರದಾಸರು ಹರಿ

[1] S. M. Pandey and Norman Zide, "Surdas and His Krishna Bhakti", Krishna ; Myth, Rites and Attitudes, Ed. Milton Tinger, University of Chicago Press, London, 1971, p. 190.

ದಾಸರಾದರೂ ಮಡದಿ ಮಕ್ಕಳೊಂದಿಗೆ ಜೀವಿಸಿದರು. ಶ್ರೀಕೃಷ್ಣಚೈತನ್ಯರು ತಮ್ಮ ರಾಧಾಕೃಷ್ಣ ಭಕ್ತಿಗೆ ಗೃಹಜೀವನ ಅಡ್ಡಿಯೆಂದು ಸನ್ಯಾಸವನ್ನು ತಾಳಿ ಸಂಸಾರದಿಂದ ದೂರವಾದರು. ಪುರಂದರದಾಸರು ಸಂಸಾರವೆಂಬ ಬಂಧನದಲ್ಲಿದ್ದರೂ, 'ಈಸಬೇಕು ಇದ್ದು ಜೈಸಬೇಕು' ಎಂಬ ತತ್ತ್ವವನ್ನು ಬೋಧಿಸಿದರು. ಇದು ಭಕ್ತನ ಧೀರೋದಾತ್ತ ಲಕ್ಷಣವೆಂದೇ ಹೇಳಬೇಕು. ಪುರಂದರದಾಸರಿಗೆ ಶಿಷ್ಯವರ್ಗವಿದ್ದರೂ ಗೌರಾಂಗಪ್ರಭುವಿನಂತೆ ಅವರು ಅನುಯಾಯಿಗಳೊಡನೆ ಸಾಮೂಹಿಕ ಭಜನೆಗಳಲ್ಲಿ ಪಾಲುಗೊಳ್ಳುತ್ತಿರಲಿಲ್ಲವೆಂದು ತೋರುವುದು. ಅವರು ಕಾಲಿಗೆ ಗೆಜ್ಜೆ ಕಟ್ಟಿ ತಂಬೂರಿ ತಾಳಗಳೊಡನೆ ಹಾಡುತ್ತಾ ಕುಣಿಯುತ್ತಾ ಜನರಿಗೆ ನೀತಿ–ಭಕ್ತಿಗಳನ್ನು ಉಪದೇಶಮಾಡಿದರು. ಹರಿನಾಮವೆಂಬ ಕಲ್ಲುಸಕ್ಕರೆಯನ್ನು ಸಕಲರಿಗೂ ಹಂಚಿದರು.

ಎಲ್ಲ ಮತ ಸಂಪ್ರದಾಯಗಳಲ್ಲಿರುವಂತೆ ಮಧ್ವ ಹಾಗೂ ವಂಗವೈಷ್ಣವ ಸಂಪ್ರದಾಯಗಳೆರಡರಲ್ಲೂ ದೀಕ್ಷೆ ಪಡೆಯಲು ಭಕ್ತನಿಗೆ ಗುರುವಿನ ಕೃಪೆಯಾಗಬೇಕು. ಕರ್ನಾಟಕದ ಹರಿದಾಸ ದೀಕ್ಷೆಯಲ್ಲಿ ಮೊದಲನೆಯದು ಅಂಕಿತ; ಗುರು ಶಾಸ್ತ್ರೋಕ್ತವಾಗಿ ದಾಸನಿಗೆ ಅಂಕಿತವನ್ನು ನೀಡಬೇಕು. ಎರಡನೆಯದು ಗುರುವಿನ ಉಪದೇಶ ; ಗುರುವಿನ ಅನುಗ್ರಹವಿಲ್ಲದೆ ಹರಿದಾಸದೀಕ್ಷೆ ಫಲಿಸುವುದಿಲ್ಲ. ಮೂರನೆಯದು ಮಧ್ವಶಾಸ್ತ್ರದಲ್ಲಿ ಅಚಲ ನಂಬಿಕೆ ಮತ್ತು ನಿಷ್ಠೆ.

ಪುರಂದರದಾಸರು ಶ್ರೀ ವ್ಯಾಸರಾಯರಿಂದ ದಾಸದೀಕ್ಷೆ ಪಡೆದ ಮೇಲೆ ಪುರಂದರದಾಸರೆಂಬ ಅಂಕಿತವನ್ನು ಪಡೆದು ಅವರು, "ವ್ಯಾಸರಾಯರ ಚರಣ ಕಮಲ ದರುಶನವೆನಗೆ ಏಸು ಜನ್ಮದ ಸುಕೃತಫಲ ದೊರಕಿತೊ ಎನ್ನ ಸಾಸಿರ ಕುಲ ಕೋಟಿ ಪಾವನ್ನವಾಯಿತು ಶ್ರೀಶನ್ನ ಭಜಿಸುವುದಕ್ಕೆ ಅಧಿಕಾರಿ ನಾನಾದೆ" ಎಂದಿದ್ದಾರೆ. ಚೈತನ್ಯಮಹಾಪ್ರಭು ದಾಸದೀಕ್ಷೆಯನ್ನು ಮಧ್ವ ಸಂಪ್ರದಾಯದ ಮಾಧವೇಂದ್ರಪುರೀ ಅವರ ಶಿಷ್ಯ ಈಶ್ವರಪುರೀ ಅವರಿಂದಲೂ ಸನ್ಯಾಸವನ್ನು ಅದ್ವೈತಗುರು ಕೇಶವಭಾರತಿಯವರಿಂದಲೂ ಪಡೆದಿರುವುದರಿಂದ ಅವರು ಯಾವ ಮತಸಂಪ್ರದಾಯಕ್ಕೆ ಸೇರಿದವರೆಂಬ ಬಗ್ಗೆ ಚೈತನ್ಯರ ಅನುಯಾಯಿಗಳಲ್ಲೂ ವಂಗಪಂಡಿತರಲ್ಲೂ ಅನುಮಾನವಿದ್ದಂತೆ ತೋರುವುದು.[1] ಆದರೆ ಬಲದೇವವಿದ್ಯಾಭೂಷಣ ತನ್ನ 'ಪ್ರಮೇಯರತ್ನಾವಳಿ' ಹಾಗೂ ಬ್ರಹ್ಮಸೂತ್ರಕ್ಕೆ ರಚಿಸಿರುವ ತನ್ನ 'ಗೋವಿಂದ ಭಾಷ್ಯ'ಗಳಲ್ಲಿ ಚೈತನ್ಯ ದೇವರು ಮಧ್ವಸಂಪ್ರದಾಯಕ್ಕೆ ಸೇರಿದವರೆಂದು ತಿಳಿಸಿದ್ದಾನೆ.[2]

---

[1] A. K. Majumdar, Caitanya, His Life and Doctrine, Bharatiya Vidya Bhavan, Bombay, 1969, pp. 261–62

[2] ಅದೇ, p. 261

ಚೈತನ್ಯರ ಬಗ್ಗೆ ಅಧಿಕೃತ ಮಾಹಿತಿಗಳನ್ನು ತನ್ನ 'ಚೈತನ್ಯ ಚರಿತಾಮೃತ' ಕೃತಿಯಲ್ಲಿ ನೀಡಿರುವ ಕೃಷ್ಣದಾಸ ಕವಿರಾಜನು "ಬಂಗಾಳದಲ್ಲಿ ಚೈತನ್ಯ ಪಂಥದ ಬೀಜವನ್ನು ಬಿತ್ತಿದವರು ಮಾಧವೇಂದ್ರಪುರೀ. ಈಶ್ವರಪುರೀ ಅವರಿಂದ ಅದು ಮೊಳಕೆಯಾಗಿ ಶ್ರೀಕೃಷ್ಣಚೈತನ್ಯದೇವರಿಂದ ಕಲ್ಪವೃಕ್ಷವಾಗಿ ಬೆಳೆಯಿತು"[1] ಎಂದಿದ್ದಾನೆ. ಚೈತನ್ಯಪ್ರಭು ಮಧ್ವಸಂಪ್ರದಾಯಕ್ಕೆ ಸೇರಿದವರೆಂಬುದರಲ್ಲಿ ಸಂದೇಹವಿಲ್ಲ.

ಸನ್ಯಾಸ ಸ್ವೀಕರಿಸಿದಾಗ ಚೈತನ್ಯದೇವರು ತಾಯಿ ಸಚೀ ಹಾಗೂ ಮಡದಿ ವಿಷ್ಣುಪ್ರಿಯಾ ಇವರನ್ನು ಸಂತೈಸಿ ಅವರ ಜೀವನೋಪಾಯಕ್ಕೆ ನವದ್ವೀಪದಲ್ಲಿ ವ್ಯವಸ್ಥೆ ಮಾಡಿದರು. ಆ ತರುವಾಯ ಹರಿಸೇವೆಯಲ್ಲಿ ನಿರತರಾದ ಚೈತನ್ಯರಿಗೆ ಯಾವುದೂ ಬೇಡವಾಯಿತು. ಪುರಂದರದಾಸರಿಗಾದರೋ ಹರಿದಾಸ ದೀಕ್ಷೆ ಪಡೆದ ತರುಣದಲ್ಲಿ ಆಸೆಗಳನ್ನು ನಿಯಂತ್ರಿಸಲು ಸ್ವಲ್ಪ ಕಷ್ಟವಾದಂತೆಯೇ ಕಾಣುವುದು. ಆ ಬಗ್ಗೆ ಅವರು ಭಗವಂತನಲ್ಲಿ ಈ ರೀತಿ ಮೊರೆಯಿಟ್ಟಿದ್ದಾರೆ :

ಮಹಿಯೆಂಬ ಆಸೆಯು ಎನ್ನ ಮುಂದುಗೆಡಿಸುತಿದೆ
ಮನೆವಾರುತೆಯು ಎನ್ನ ಭಂಗಪಡಿಸುತಿದೆ
ಸುತರಾಸೆಯು ಎನ್ನ ದೈನ್ಯಪಡಿಸುತಿದೆ
ಇನಿತಾಸೆಯಳಿದು ಬುದ್ಧಿ ನಿನ್ನಲ್ಲಿ
ನಿಲುವಂತೆ ಮಾಡೋ ಸಿರಿಪುರಂದರವಿಠಲ

ಧರ್ಮಶಾಸ್ತ್ರಗಳು ಸಂಸ್ಕೃತದಲ್ಲಿದ್ದು ಅವು ಜನಸಾಮಾನ್ಯರಿಗೆ ಎಟುಕದ ವಿಷಯವಾಗಿತ್ತು. ಸುಮಾರು ಹತ್ತು ಹನ್ನೊಂದನೆಯ ಶತಮಾನದಲ್ಲಿ ಭಕ್ತಿ ಚಳುವಳಿ ಭಾರತದಲ್ಲಿ ಪ್ರಾರಂಭವಾಗಿ ಜನರಿಗೆ ಧರ್ಮ ಸಂದೇಶವನ್ನು ಸಾರಲು ಸಂತರು ಹಾಗೂ ಹರಿದಾಸರು ಮುಂದಾದರು. ಕರ್ನಾಟಕ ಹಾಗೂ ಬಂಗಾಳಗಳಲ್ಲಿ ಒಂದು ಕಡೆ ಮಠಾಧಿಪತಿಗಳು ಹಾಗೂಅವರ ಶಿಷ್ಯರು ಸಂಸ್ಕೃತದಲ್ಲಿ ಧರ್ಮಗ್ರಂಥಗಳನ್ನು ರಚಿಸಿದರೆ, ಇನ್ನೊಂದು ಕಡೆ ಕರ್ನಾಟಕದಲ್ಲಿ ಹರಿದಾಸರು, ಬಂಗಾಳದಲ್ಲಿ ಚೈತನ್ಯರ ಶಿಷ್ಯರು ವೈಷ್ಣವಧರ್ಮವನ್ನು ಜನರಿಗೆ ಕ್ರಮವಾಗಿ ಕನ್ನಡ ಮತ್ತು ವಂಗ ಭಾಷೆಗಳಲ್ಲಿ ಬೋಧಿಸಿದರು.

ಮಧ್ವ ಮಠಾಧಿಪತಿಗಳು ಹಾಗೂ ಹರಿದಾಸರು ದಾಸಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ನೀಡಿದ್ದಾರೆ. ಶ್ರೀಪಾದರಾಜರು ಕನ್ನಡದಲ್ಲಿ

[1] ಅದೇ, p. 263

ಭಾವಗೀತೆಗಳಂಥ ದೇವರನಾಮಗಳನ್ನು ರಚಿಸಿದ ಕಾಲದಲ್ಲಿ ವ್ಯಾಸಕೂಟ ಮತ್ತು ದಾಸಕೂಟಗಳು ರೂಪುಗೊಂಡವು. (ಈ ವಿಷಯವನ್ನು ಹರಿದಾಸ ಸಾಹಿತ್ಯದಲ್ಲಿ ದೀರ್ಘ ಸಂಶೋಧನೆಗಳನ್ನು ನಡೆಸಿರುವ ಡಾ. ಜಿ. ವರದರಾಜರಾಯರು ಸಕಾರಣಗಳೊಡನೆ ಪುಷ್ಟೀಕರಿಸಿದ್ದಾರೆ.)[1] ಈ ಹಿನ್ನೆಲೆಯಲ್ಲಿ ಬಂದ ಪುರಂದರದಾಸರು ದಾಸಕೂಟದಲ್ಲಿ ಅಗ್ರಗಣ್ಯರು. ಶ್ರೀಕೃಷ್ಣ ಚೈತನ್ಯರ ಭಕ್ತಿ ಸಂಪ್ರದಾಯಕ್ಕೆ ಅಗತ್ಯವಾದ ಹಿನ್ನೆಲೆಯನ್ನು ಒದಗಿಸಿದವರು ಮಧ್ವಾಚಾರ್ಯರೆಂಬುದನ್ನು ಕವಿಕರ್ಣಪೂರ ತನ್ನ 'ಗೌರಾಂಗ ದೀಪಿಕೆ' ಯಲ್ಲಿ ತಿಳಿಸಿದ್ದಾನೆ. ಗೌಡೀಯವೈಷ್ಣವಪಂಥದ ಹನ್ನೆರಡನೆಯ ಗುರು ಜಯಧರ್ಮರ (ಜಯಧ್ವಜರ) ಶಿಷ್ಯ ವಿಷ್ಣುಪುರೀ ಹದಿಮೂರನೆಯ ಶತಮಾನದಲ್ಲಿ ತಮ್ಮ 'ಭಕ್ತಿರತ್ನಾವಳಿ'ಯ ಮೂಲಕ ಭಾಗವತ ಹಾಗೂ ಮಧ್ವತತ್ತ್ವಗಳನ್ನು ಪ್ರಚಾರ ಮಾಡಿದರು. ಬೃಂದಾವನದಲ್ಲಿ ನೆಲೆಸಿ ವೈಷ್ಣವಧರ್ಮ ಗ್ರಂಥಗಳನ್ನು ರಚಿಸಿ ಮತಪ್ರಚಾರ ಮಾಡಲು ಚೈತನ್ಯದೇವರು ಕಳುಹಿಸಿದ ಆರ್‍ವರು ಗೋಸ್ವಾಮಿಗಳು ಕರ್ನಾಟಕದ ವ್ಯಾಸಕೂಟದವರಂತೆ ವೈಷ್ಣವ ಸಿದ್ಧಾಂತಗಳನ್ನು ಸಂಸ್ಕೃತದಲ್ಲಿ ರಚಿಸಲು ಮುಂದಾದರು. ಈ ಆರು ಮಂದಿ ಗೋಸ್ವಾಮಿಗಳು ರೂಪ, ಸನಾತನ, ಜೀವ, ಗೋಪಾಲಭಟ್ಟ, ರಘುನಾಥ ಭಟ್ಟ ಮತ್ತು ರಘುನಾಥದಾಸ. ಇವರನ್ನು ಬೃಂದಾವನ ಗೋಸ್ವಾಮಿಗಳೆಂದು ಕರೆಯಲಾಗಿದೆ. ಇವರೆಲ್ಲ ಚೈತನ್ಯಪಂಥದ ಸಿದ್ಧಾಂತಗಳನ್ನು ಕ್ರೋಡೀಕರಿಸುವ ಸಂಬಂಧದಲ್ಲಿ ಮಹತ್ತರಪಾತ್ರ ವಹಿಸಿದ್ದಾರೆ. ಭಾಗವತಪುರಾಣದ ಆಧಾರದ ಮೇಲೆಯೇ ಅವರು ಕೃಷ್ಣಭಕ್ತಿಯನ್ನು ಹರಡಿದರು. ಭಾಗವತದ ಕೃಷ್ಣನು ಅವತಾರ ಪುರುಷನಲ್ಲ, ಅವನೇ ಸಾಕ್ಷಾತ್ ಭಗವಾನ್ ಎಂದು ಸಮರ್ಥಿಸಿದರು. ಚೈತನ್ಯದೇವರ ಮತ್ತೊಂದು ಭಕ್ತರ ತಂಡ ಬಂಗಾಳದಲ್ಲಿ ಸಾಮಾನ್ಯಜನರಿಗೆ ಸರಳ ಬಂಗಾಳಿ ಭಾಷೆಯಲ್ಲಿ ಪದಾವಳಿಗಳನ್ನು ರಚಿಸಿ ಹಾಡಿ ವೈಷ್ಣವ ಮತವನ್ನು ಹರಡಲು ನಿಂತಿತು. ಈ ತಂಡದ ಚೈತನ್ಯನ ಭಕ್ತರು ದೇವರನಾಮಗಳನ್ನೂ, ಚೈತನ್ಯದೇವರ ಜೀವನ ಚರಿತ್ರೆಯನ್ನೂ ಬಂಗಾಳಿ ಭಾಷೆಯಲ್ಲಿ ಬರೆದರು. ಜಯದೇವನ ಗೀತಗೋವಿಂದ (೧೨ನೇ ಶತಮಾನ), ವಿದ್ಯಾಪತಿ ಮತ್ತು ಚಂಡೀದಾಸರ ಪದಾವಳಿಗಳು (೧೪ ಮತ್ತು ೧೫ನೇ ಶತಮಾನ) ಚೈತನ್ಯದೇವರ ಮೇಲೆ ಪ್ರಭಾವ ಬೀರಿದ್ದವು. ರಾಧಾಕೃಷ್ಣರ ದಿವ್ಯಪ್ರೇಮವು ಅಡಗಿರುವ ಈ ಮಂಗದಾಸರ ಕೃತಿಗಳಿಂದ ಚೈತನ್ಯ ಪ್ರಭು ಸ್ಫೂರ್ತಿಗೊಂಡರು.

---

[1] ಶ್ರೀಪಾದರಾಜರ ಕೃತಿಗಳು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ೧೯೭೩ ಪು. ೧೯

ಪುರಂದರದಾಸರು ಮಧ್ವಮತತತ್ವಗಳನ್ನು ಜನರಿಗೆ ಸುಲಭ ಕನ್ನಡದಲ್ಲಿ ಬೋಧಿಸಿದರು. ಅವರು 'ಮತದೊಳಗೆ ಒಳ್ಳೆಯುಮತ ಮಧ್ವಮತವು', 'ಮಧ್ವರಾಯರ ಕರುಣೆ ಪಡೆಯದವ ಧರೆಯೊಳು ಇದ್ದರೇನು ಇಲ್ಲದಿದ್ದರೇನು' ಎಂದಿದ್ದಾರೆ. ಭೇದತತ್ವವನ್ನು ಸಾರುವ ಮಧ್ವಸಿದ್ಧಾಂತದ ಪ್ರಮೇಯವನ್ನು ಪುರಂದರದಾಸರು ತಮ್ಮ ಒಂದು ಕೃತಿಯಲ್ಲಿ ಹೀಗೆ ತಿಳಿಸಿದ್ದಾರೆ :

ಜೀವ ಜೀವಕೆ ಭೇದ ಜಡಜಡಕೆ ಭೇದ
ಜೀವ ಜಡ ಪರಮಾತ್ಮನಿಗೆ ಭೇದ
ಜೀವಾಜೀವ ಮುಕ್ತಾಮುಕ್ತರ ಭೇದ
ಮುಕ್ತರೊಡೆಯ ಹರಿ ಭಕ್ತರಾಧೀನ
ಜಗತ್ಕರ್ತೃ ನೀ ಸಲಹಯ್ಯ ಪುರಂದರವಿಠಲ

ಭಾಗವತವು ಪ್ರತಿನಿಧಿಸುವ ಭಕ್ತಿಯನ್ನೇ ಬಂಗಾಳದ ವೈಷ್ಣವರೂ ಅಂಗೀಕರಿಸಿದರು. ಚೈತನ್ಯ ಪಂಥದ ವೈಷ್ಣವರಲ್ಲಿ ಕೆಲವರು ಚೈತನ್ಯದೇವರು ಶ್ರೀಕೃಷ್ಣನ ಅವತಾರವೆಂದು ತಿಳಿದರು. ಮತ್ತೆ ಕೆಲವರು ಚೈತನ್ಯರನ್ನೇ ಕೃಷ್ಣನೆಂದು ತಿಳಿದು ಅವರಲ್ಲಿ ಭಗವಂತನ ಮೂಲಸ್ವರೂಪವನ್ನು ಕಂಡರು. ಅವರು ರಾಧಾಕೃಷ್ಣರ ಪರಮಲಕ್ಷಣಗಳನ್ನು ಹೊಂದಿರುವುದಾಗಿ ಭಾವಿಸಿದರು. ಶ್ರೀಕೃಷ್ಣಚೈತನ್ಯರು ಭೂಲೋಕದಲ್ಲಿ ಪರಮಾತ್ಮನ ಅಚಿಂತ್ಯಭೇದಾಭೇದ ಸ್ವರೂಪವನ್ನು ಪ್ರತಿನಿಧಿಸುವುದಾಗಿ ಚೈತನ್ಯಪಂಥದವರು ತಿಳಿಯುತ್ತಾರೆ. ಜೀವ ಮತ್ತು ಪರಮಾತ್ಮರ ನಡುವೆ ಏಕಕಾಲಿಕವೂ ಅಗಮ್ಯವೂ ಆದ ಅಭೇದಾಭೇದ-ಅಂದರೆ, ಅಭಿನ್ನತ್ವದಲ್ಲಿ ಭಿನ್ನತ್ವವನ್ನು ತೋರುವುದು ಚೈತನ್ಯದೇವರ "ಅಚಿಂತ್ಯಭೇದಾಭೇದ"ದ ತಿರುಳು.

ಚೈತನ್ಯಪಂಥದ ರಾಧಾಪ್ರೇಮಸಂಬಂಧವಾದ ಅಚಿಂತ್ಯ ಶಕ್ತಿಯ ಸಿದ್ಧಾಂತ ಭಾರತೀಯ ದಾರ್ಶನಿಕ ಕ್ಷೇತ್ರಕ್ಕೆ ವಂಗವೈಷ್ಣವ ಸಂಪ್ರದಾಯ ನೀಡಿರುವ ಮುಖ್ಯ ಕೊಡುಗೆ. ಪುರಂದರದಾಸರು ಮಧ್ವಸಿದ್ಧಾಂತಗಳನ್ನನುಸರಿಸಿ ಕೃಷ್ಣನೇ ಪರಮದೈವವೆಂದು ನಂಬಿರಲು, ಚೈತನ್ಯದೇವರು ರಾಧಾಕೃಷ್ಣರ ಮಧುರಪ್ರೇಮಕ್ಕೆ ಸಂಬಂಧಪಟ್ಟಹಾಗೆ ಭಕ್ತಿಯನ್ನು ಪ್ರಸಾರ ಮಾಡಿದರು.

ಅವರ ಶಿಕ್ಷಾಷ್ಟಕದಲ್ಲಿ ಚೈತನ್ಯದೇವರ ಉಪದೇಶಗಳು ಹೀಗಿವೆ: ಸಂಕೀರ್ತನೆಯೇ ಮುಕ್ತಿಗೆ ಮಾರ್ಗ. ಭಗವಂತನ ದಿವ್ಯ ನಾಮದಲ್ಲಿ ಅವನ ಸರ್ವಾತಿಶಯ ಶಕ್ತಿಗಳು ಅಡಕವಾಗಿವೆ. ಅವನ ನಾಮಸ್ಮರಣೆಗೆ

ಯಾವ ಪ್ರತಿಬಂಧಕವೂ ಇಲ್ಲ. ಭಗವಂತನ ಸೇವೆಯಲ್ಲಿ ಭಕ್ತನು ದೀನನಾಗಿ ತಾನು ತೃಣಕ್ಕೆ ಸಮಾನನೆಂದು ಭಾವಿಸಬೇಕು. ಭಕ್ತನು ವೃಕ್ಷದಂತೆ ಸಹಿಷ್ಣುತೆಯನ್ನು ಹೊಂದಿರಬೇಕು. ಇತರರನ್ನು ಗೌರವಿಸಬೇಕು. ಶುದ್ಧ ಮನಸ್ಸಿನಿಂದ ಹರಿಯನ್ನು ಧ್ಯಾನಿಸಬೇಕು. ಗೋವಿಂದಾ, ನನಗೆ ಧನಾರ್ಜನೆಯ ಹಂಬಲವಿಲ್ಲ, ಸ್ತ್ರೀವ್ಯಾಮೋಹವಿಲ್ಲ. ನನಗೆ ಅನುಯಾಯಿಗಳೂ ಬೇಕಾಗಿಲ್ಲ. ನಿನ್ನ ಸೇವೆ ನನಗೆ ಜನ್ಮಜನ್ಮಗಳಲ್ಲೂ ಬೇಕು. ಹೇ ನಂದಕುಮಾರ, ನಾನು ನಿನ್ನ ಅನನ್ಯಭಕ್ತನಾದರೂ ಜನನ ಮರಣಗಳ ಸಾಗರದಲ್ಲಿ ಬಿದ್ದು ನರಳುತ್ತಿದ್ದೇನೆ. ಈ ಭವಬಂಧನದಿಂದ ನನ್ನನ್ನು ಮುಕ್ತನನ್ನಾಗಿ ಮಾಡಿ ನಿನ್ನ ಪಾದಾರವಿಂದಕ್ಕೆ ಸೇರಿಸಿಕೊ. ಹೇ ಕೃಷ್ಣಾ, ನಿನ್ನ ಪವಿತ್ರ ನಾಮವನ್ನು ಜಪಿಸುವಾಗ ನನ್ನ ನಯನಗಳಲ್ಲಿ ಪ್ರೇಮಬಾಷ್ಪಗಳು ತುಂಬುವುದು ಎಂದಿಗೆ ? ನಿನ್ನ ನಾಮವನ್ನು ಜಪಿಸುವಾಗ ಭಕ್ತಿಯ ಆವೇಶದಲ್ಲಿ ನನ್ನ ಧ್ವನಿಗಟ್ಟುವುದು ಎಂದು ? ನನ್ನ ರೋಮಗಳು ನವಿರೇಳುವುದೆಂದು ? ಗೋವಿಂದಾ, ನಿನ್ನ ಅಗಲಿಕೆಯಲ್ಲಿ ನಿಮಿಷಗಳು ವರ್ಷಗಳಾಗಿ ಕಾಣುತ್ತಿವೆ. ಕಣ್ಣೀರು ಪ್ರವಾಹವಾಗಿ ಹರಿಯುತ್ತಿದೆ. ನೀನಿಲ್ಲದೆ ಪ್ರಪಂಚವೇ ಶೂನ್ಯವಾಗಿ ಕಾಣುತ್ತಿದೆ. ನನ್ನ ದೈವ ಕೃಷ್ಣನಲ್ಲದೆ ಬೇರೊಬ್ಬನಲ್ಲ. ಅವನು ನನ್ನನ್ನು ಆಲಿಂಗನದಿಂದ ನೋಯಿಸಿದರೂ ಸರಿಯೆ, ಪ್ರತ್ಯಕ್ಷವಾಗದೆ ನನ್ನನ್ನು ನಿರಾಶೆಗೊಳಿಸಿದರೂ ಸರಿಯೆ, ಅವನೇ ನನ್ನ ದೈವ. ಅವನೇ ನನ್ನ ಇಷ್ಟದೇವತೆಯಾದ್ದರಿಂದ ನಾನು ಅವನಿಗೆ ಸರ್ವಾಧೀನ.[1]

ಪುರಂದರದಾಸರ ಕೀರ್ತನೆಗಳಲ್ಲಿಯೂ ಈ ಧರ್ಮ ಧ್ಯೇಯಗಳನ್ನು ಕಾಣಬಹುದು. ಉದಾಹರಣೆಗೆ :

ಸುಮ್ಮನೆ ಬರುವುದೆ ಮುಕ್ತಿ ಪ.
ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ ಅ.ಪ.

ಮನದಲಿ ದೃಢವಿರಬೇಕು ಪಾಪಿ
ಜನರ ಸಂಸರ್ಗವ ನೀಗಲು ಬೇಕು
ಅನುಮಾನವನು ಬಿಡಬೇಕು ತನ್ನ
ತನುಮನಧನವನೊಪ್ಪಿಸಿಕೊಡಬೇಕು

1. A. C. Bhaktivedanta Swami Prabhupada op. cit. xxlii-xxv

ಕಾಮಕ್ರೋಧವ ಬಿಡಬೇಕು ಪರ
ಕಾಮಿನಿಯರ ಹಂಬಲ ಬಿಡಬೇಕು
ಹೇಮದಾಸೆಯ ಸುಡಬೇಕು ಹರಿ
ನಾಮಸಂಕೀರ್ತನೆಯನ್ನು ಮಾಡಬೇಕು

ಸಂದಣಿಗಳ ಬಿಡಬೇಕು ದೇಹ
ಬಂಧು ಬಾಂಧವರ ಸ್ನೇಹವ ಬಿಡಬೇಕು
ನಿಂದಿಸಿದರೆ ಹಿಗ್ಗಬೇಕು ಕೋಪ
ಬಂದಾಗ ಸೈರಣೆ ಬಿಡದಿರಬೇಕು

ಹರಿಯೇ ಗುರುವೆನ್ನಬೇಕು ಶ್ರೀ
ಹರಿಯೆ ಪರದೈವವೆಂದೆನ್ನಬೇಕು
ಪರವಸ್ತು ಒಲ್ಲೆನಬೇಕು ದೇಹ
ಸ್ಥಿರವಲ್ಲವೆಂದು ತಿಳಿಯಬೇಕು

ವ್ಯಾಪಾರವನ್ನು ಬಿಡಬೇಕು ನಮ್ಮ
ಶ್ರೀಪತಿ ಪುರಂದರವಿಠಲೆನ್ನಬೇಕು.
ಪಾಪರಹಿತನಾಗಬೇಕು ಜ್ಞಾನ
ದೀಪದ ಬೆಳಕಿನಲಿ ಓಡಾಡಬೇಕು

ಹೀಗೆ ಪುರಂದರದಾಸರು ಹಾಗೂ ಚೈತನ್ಯದೇವರು ಕೃಷ್ಣಭಕ್ತಿಯಲ್ಲಿ ಮಧ್ವಮತದ ಪರಮ ಧ್ಯೇಯಗಳನ್ನೆಲ್ಲ ಅಭಿವ್ಯಕ್ತಿಸಿದ್ದಾರೆ. ಚೈತನ್ಯರಂತೆಯೇ ಪುರಂದರದಾಸರು 'ನಾಮಸಂಕೀರ್ತನೆ ಅನುದಿನ ಮಾಳ್ಪಗೆ ನರಕ ಭಯಗಳುಂಟೆ', 'ಈ ಸಿರಿಯು ನಂಬಿ ಹಿಗ್ಗಲು ಬೇಡ ಮನವೆ', 'ಮನುಜ ಶರೀರವಿದೇನು ಸುಖ', 'ನಿನ್ನ ನೋಡಿ ಧನ್ಯನಾದೆನೋ ಹೇ ಶ್ರೀನಿವಾಸ' 'ಯಾರು ಬಿಟ್ಟರೂ ಕೈಯ ನೀ ಬಿಡದಿರು ಕಂಡ್ಯ' ಮುಂತಾಗಿ ಹಾಡಿ ವೈಷ್ಣವ ಭಕ್ತನ ಆದರ್ಶಗಳೇನೆಂಬುದನ್ನು ಹೇಳಿದ್ದಾರೆ.

ದಕ್ಷಿಣ ಭಾರತದಲ್ಲಿ ವೈಷ್ಣವ ದ್ವೈತ ಹಾಗೂ ವಿಶಿಷ್ಟಾದ್ವೈತಮತಗಳು ವರ್ಣಾಶ್ರಮಧರ್ಮಕ್ಕೆ ಹೆಚ್ಚು ಚ್ಯುತಿಬಾರದಂತೆ ಸಾಗಿಬಂದಿವೆ. ಆದರೆ ಬಂಗಾಳದಲ್ಲಿ ಕೃಷ್ಣಚೈತನ್ಯರು ಹಾಗೂ ಅವರ ಶಿಷ್ಯರು ಹರಡಿದ ವೈಷ್ಣವ ಮತ (ಚೈತನ್ಯಮತ) ಸಮಾಜದಲ್ಲಿ ಅವ್ಯವಸ್ಥೆಯನ್ನುಂಟು ಮಾಡಿದೆಯೆಂದು ಹೇಳಲಾಗಿದೆ. ಚೈತನ್ಯದೇವರು ಸ್ವತಃ ಸಮಾಜಸುಧಾರಕರಲ್ಲ; ವೇದಾಂತಿಯೂ ಆಗಿರಲಿಲ್ಲ. ಆದರೆ ಅವರು ಕೃಷ್ಣಭಕ್ತರಾಗಿದ್ದು ಪ್ರಭಾವಯುತ ಧರ್ಮ

ಬೋಧಕರಾಗಿದ್ದರು. ಎಲ್ಲ ಜಾತಿಯವರಿಗೂ ಅವರು ರಾಧಾಕೃಷ್ಣಭಕ್ತಿಯನ್ನು ಬೋಧಿಸಿದರು ; ಎಲ್ಲ ಜಾತಿಯವರಿಗೂ ರಾಧಾಕೃಷ್ಣರ ಭಜನೆಗೆ ಹಕ್ಕಿದೆಯೆಂದು ತಿಳಿಸಿದರು. ಈ ಬೋಧನೆ ಚೈತನ್ಯರ ಶಿಷ್ಯರಲ್ಲಿ ಕೆಲವರಿಗೆ ಹಿಡಿಸಲಿಲ್ಲವೆನ್ನಲಾಗಿದೆ. ಅಂತೆಯೇ ಪುರಂದರದಾಸರು ಅನುಸರಿಸಿದ ಶ್ರೀ ಮಧ್ವಾಚಾರ್ಯರ ದ್ವೈತಮತದಲ್ಲಿ ಭಕ್ತಿಗೆ ಜಾತಿಭೇದಗಳಿಲ್ಲದಿದ್ದರೂ ವರ್ಣಾಶ್ರಮಧರ್ಮಕ್ಕೆ ಅದರಿಂದ ಚ್ಯುತಿಯುಂಟಾಗಲಿಲ್ಲ. ದಾಸರು ಹರಿನಾಮವನ್ನು ಜಾತಿಭೇದವಿಲ್ಲದೆ ಎಲ್ಲರಿಗೂ ಹಂಚಿ ವರ್ಣಾಶ್ರಮಧರ್ಮವನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿದರು. ಆಚಾರಗಳನ್ನು ಪಾಲಿಸದೆಹೋಗತಕ್ಕವರು ಉತ್ತಮ ಕುಲದಲ್ಲಿ ಹುಟ್ಟಿದ್ದರೂ ಅವರೇ ಹೊಲೆಯರು ಎಂಬ ಸತ್ಯವನ್ನು ಸಾರಿದರು :

ಹೊಲೆಯು ಬಂದಾನೆಂದು ಒಳಗೆ ದೇವರ ಮಾಡಿ
ಢಣ ಢಣ ಘಂಟೆ ಬಾರಿಸುತ
ತನುವಿನ ಕೋಪ ಹೊಲೆಯಲ್ಲವೇನಯ್ಯ
ಮನಸಿನ ವಂಚನೆ ಹೊಲೆಯಲ್ಲವೇನಯ್ಯ
ಇಂಥ ಹೊರಗಿದ್ದ ಹೊಲೆಯನ್ನು ಒಳಗೆ ತುಂಬಿಟ್ಟುಕೊಂಡು
ಇದಕೇನು ಮದ್ದು ಶ್ರೀಪುರಂದರವಿಠಲ

ದಕ್ಷಿಣ ಭಾರತದಲ್ಲಿ ಕಂಡುಬರುವಂತೆ ಬಂಗಾಳದಲ್ಲೂ ಕೀರ್ತನೆ, ಸಂಗೀತ ಸಂಸ್ಕೃತಿಯ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಸೃಷ್ಟಿ. ಅದು ಚೈತನ್ಯ ಮಹಾಪ್ರಭು ಸ್ಥಾಪಿಸಿದ ಅತ್ಯಂತ ಭಾವಪರವಶಾತ್ಮಕ ಕೃಷ್ಣಭಕ್ತಿಗೆ ನಿಕಟವಾಗಿ ಸಂಬಂಧಿಸಿದೆ ; ವೈಷ್ಣವ ಆರಾಧನಾಕ್ರಮದಲ್ಲಿ ಭಕ್ತಿರಸದಿಂದ ಕೂಡಿದ ಕೀರ್ತನೆ ಉತ್ತಮ ಸಾಧನವಾಗಿ ಪರಿಣಮಿಸಿದೆ. ಜಯದೇವನ ಹಾಗೂ ಚಂಡೀದಾಸನ ಕೀರ್ತನೆಗಳು ಚೈತನ್ಯರ ಮೇಲೆ ಪ್ರಭಾವ ಬೀರಿದ್ದವು. ನವದ್ವೀಪದಲ್ಲಿದ್ದಾಗ ಚೈತನ್ಯದೇವರು ನಾಮಸಂಕೀರ್ತನೆಗಳನ್ನು ಏರ್ಪಡಿಸಿ ವೈಷ್ಣವಮತ ಪ್ರಚಾರಕ್ಕೆ ನಿಂತರೆಂದು ಹೇಳಲಾಗಿದೆ.ಚೈತನ್ಯದೇವರು ಸನ್ಯಾಸ ತಾಳಿದಮೇಲೆ ಪುರಿಜಗನ್ನಾಥ ಪಟ್ಟಣದಲ್ಲಿದ್ದುಕೊಂಡು ೧೫೩೩ರಲ್ಲಿ ಮೃತರಾದ ಮೇಲೆ ಬಂಗಾಳದಲ್ಲಿ ಚೈತನ್ಯಪಂಥದ ಚಳುವಳಿ ಇಬ್ಭಾಗವಾಗಿ,ಚೈತನ್ಯರ ಅನುಯಾಯಿಗಳಾದ ನಿತ್ಯಾನಂದ ಮತ್ತು ಅದ್ವೈತಆಚಾರ್ಯ–ಇವರಿಬ್ಬರೂ ವೈಷ್ಣವ ಪಂಥದ ಎರಡು ಕವಲುಗಳ ನಾಯಕರಾದರು. ಚೈತನ್ಯರ ತರುವಾಯ ಅವರ ಶಿಷ್ಯರು ಅವರನ್ನು ಕುರಿತ ಹಾಗೆ ರಚಿಸಿದ 'ಗೌರಚಂದ್ರಿಕಾ'ದಲ್ಲಿಯ ಪದಗಳನ್ನು ಸಂಕೀರ್ತನೆಗಳಲ್ಲಿ ಹಾಡತೊಡಗಿದರು. ಅವರು ಸಾಮಾನ್ಯವಾಗಿ ಹಾಡುತ್ತಿದ್ದ ಪದಗಳಿಗೆ ನಿದರ್ಶನವಿದು :

ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ
ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ

ಪುರಂದರದಾಸರು ಸಂಗೀತ ಶಾಸ್ತ್ರವನ್ನು ಬಲ್ಲವರಾಗಿದ್ದರು. ಸ್ಫೂರ್ತಿಯಿಂದ ಅವರು ರಚಿಸುತ್ತಿದ್ದ ಹಾಡುಗಳು ಶಾಸ್ತ್ರಬದ್ಧವಾಗಿವೆ. "ಪುರಂದರದಾಸರ ಕೀರ್ತನೆಗಳು ಅವರ ಗುರುಪೀಳಿಗೆಯವರ ರಚನೆಗಳ ರೀತಿಯಲ್ಲೇ ಪಲ್ಲವಿ ಮತ್ತು ಚರಣಗಳೆಂಬ ಅಂಗಗಳನ್ನು ಹೊಂದಿವೆ."[1] ಅವರು ತಮ್ಮ ಕಾಲದಲ್ಲಿ ಪ್ರಯೋಗದಲ್ಲಿದ್ದ ೩೨ ರಾಗಗಳನ್ನು ತಮ್ಮ ಕೀರ್ತನೆಗಳಲ್ಲಿ ಪ್ರಯೋಗಿಸಿದ್ದಾರೆಂಬ ಮಾತಿದೆ. ದಾಸರು ಉಪಯೋಗಿಸಿದ ಸುಳಾದಿ, ಕೀರ್ತನೆ, ಉಗಾಭೋಗ, ಮೊದಲಾದುವೆಲ್ಲಾ ಭಕ್ತಿಪ್ರಸಾರಕ್ಕೆ ಸುಲಭ ಸಂಗೀತಮಾಧ್ಯಮಗಳಾದವು. ಪುರಂದರದಾಸರ ಕಾಲಕ್ಕೆ ಎರಡು ಶತಮಾನಗಳ ತರುವಾಯ ಇದ್ದ ಶ್ರೀ ತ್ಯಾಗರಾಜರು ತಿಳಿಸುವಂತೆ ಪುರಂದರದಾಸರೇ ಸಂಗೀತಶಾಸ್ತ್ರ ಜೀರ್ಣೋದ್ಧಾರಕ್ಕೆ ಮೂಲಪುರುಷರು. ಪುರಂದರದಾಸರಿಗೆ 'ಕರ್ನಾಟಕ ಸಂಗೀತ ಪಿತಾಮಹ' ಎಂಬ ಬಿರುದೂ ಇದೆ.

ಚೈತನ್ಯದೇವರು ಸಕಲ ಶಾಸ್ತ್ರ ಪಂಡಿತರಾಗಿದ್ದು ಸಂಗೀತಕಲೆಯನ್ನು ಬಲ್ಲವರಾಗಿದ್ದಿರಬೇಕು. ಆದರೆ ಭಕ್ತಿಪರವಶರಾಗುತ್ತಿದ್ದ ಅವರಿಗೆ ಕೃತಿರಚನೆ ಸಾಧ್ಯವಿಲ್ಲದೆ ಹೋಯಿತು. ತಮ್ಮ ಸಂಕೀರ್ತನೆಗಳಿಗೆ ಅವರು ಭಕ್ತಿಗೀತೆಗಳನ್ನು ಧಾರಾಳವಾಗಿ ಬಳಸಿಕೊಂಡರು. ಕೃಷ್ಣಭಕ್ತಿಯನ್ನು ಅವರು ಸಂಕೀರ್ತನೆಗಳ ತಳಹದಿಯ ಮೇಲೆ ನಿಲ್ಲಿಸಿದರು. ಪುರಂದರದಾಸರಾದರೋ ಸಂಗೀತವನ್ನು ಹರಿಸ್ತುತಿಗೂ, ಭಕ್ತಿರಸಾಯನವನ್ನು ಜನಕೋಟಿಗೆ ಹಂಚುವುದಕ್ಕೂ ಬಳಸಿಕೊಂಡರು.

1 ಎಲ್. ರಾಜಾರಾವ್, "ಪುರಂದರದಾಸರು", ಭಾರತೀಯ ಕಲಾದರ್ಶನ, ಸಂ. ಅ.ನ. ಕೃಷ್ಣರಾಯ, ಮೈಸೂರು ಸಂಗೀತನಾಟಕಅಕಾಡೆಮಿ, ೧೯೬೪, ಪು-೫೨

# ಪುರಂದರದಾಸರು – ಜಯದೇವಕವಿ

ಎಂ. ವಿ. ವರದರಾಜನ್

ಭಾಗವತಧರ್ಮ ಕೃಷ್ಣಭಕ್ತಿಯ ಮೇಲೆಯೇ ನಿಂತಿದೆ. ಈ ಭಕ್ತಿ ಮಾರ್ಗದ ಸಾಧನೆಯನ್ನು ಸಕಲರೂ ಮಾಡಬಹುದು. ಅದರಲ್ಲಿ ಜಾತಿ ಮತ ಲಿಂಗಭೇದಗಳೊಂದೂ ಇಲ್ಲ. ಕರ್ನಾಟಕದಲ್ಲಿ ಶ್ರೀಕೃಷ್ಣಭಕ್ತಿ ಅನೇಕ ಮುಖಗಳಲ್ಲಿ ಬೆಳೆದಿದೆ. ಆದರೆ ಉತ್ತರದ ಕಡೆಯ ರಾಧಾ–ಕೃಷ್ಣರ ಭಕ್ತಿಯಂತಹ ಮಧುರಭಕ್ತಿಗೆ ಇಲ್ಲಿ ಅವಕಾಶ ಕಡಿಮೆ. ಅಷ್ಟೇ ಅಲ್ಲ 'ರಾಧೆ' ಎಂಬ ಹೆಸರು ಕಾಣಸಿಗುವುದೂ ಅಪರೂಪ. ಕಾರಣವೇನೆಂದರೆ ಕೃಷ್ಣಭಕ್ತಿಗೆ ಆಧಾರವಾದ ಮಹಾಭಾರತ, ಹರಿವಂಶ, ಭಾಗವತ, ವಿಷ್ಣುಪುರಾಣ ಇವುಗಳಲ್ಲಿ ಎಲ್ಲಿಯೂ ರಾಧೆಯ ಬಗ್ಗೆ ಪ್ರಸ್ತಾಪವೇ ಇಲ್ಲ. ರಾಧೆಯ ಪ್ರಸ್ತಾಪವನ್ನು ಬ್ರಹ್ಮವೈವರ್ತ ಪುರಾಣದಲ್ಲಿ ಮಾತ್ರ ಕಾಣಬಹುದು. ಕ್ರಿ.ಶ. ೮ನೆಯ ಶತಮಾನದಲ್ಲಿ ಸ್ವಯಂಭೂ ಕವಿಯು ತನ್ನ 'ಛಂದಲಕ್ಷಣ' ಗ್ರಂಥದಲ್ಲಿ ಉದಾಹರಣೆಗಾಗಿ ಬಳಸಿದ 'ಶುದ್ಧಸ್ವಭಾವ' ಕವಿಯ ಪದ್ಯವೊಂದರಲ್ಲಿ 'ರಾಧಾ ಕೃಷ್ಣ ಭಕ್ತಿ' ನಿರೂಪಿತವಾಗಿದೆ :

ರಾಸೇ ಸಂಭೂಯ ಗೋಲೋಕೇ ಸಾ ದಧಾವ ಹರೇಃ ಪುರಃ
ತೇನ ರಾಧಾಸಮಾಖ್ಯಾತಾ........[1]

ಅಂಗನೆಯರ ಮಧ್ಯೆ ಕೃಷ್ಣ, ಕೃಷ್ಣನ ಮಧ್ಯೆ ಅಂಗನೆಯರು, ಮತ್ತೆ ಕೃಷ್ಣ ಮತ್ತೆ ಅಂಗನೆಯರು ಹೀಗೆ ಮಂಡಲಾಕಾರವಾಗಿ ನಿಂತು ವೇಣುನಾದವನ್ನು ಮಾಡುವ ಕೃಷ್ಣನ ರಾಸಮಂಡಲದ ಚಿತ್ರಣವಿದು :

ಅಂಗನಾಮಂಗನಾಮಂತರೇ ಮಾಧವೋ
ಮಾಧವಂ ಮಾಧವಂ ಚಾಂತರೇಣಾಂಗನಾ
ಇತ್ಥಮಾಕಲ್ಪಿತೇ ಮಂಡಲೇ ಮಧ್ಯಗಃ
ಸಂಜಗೌ ವೇಣುನಾ ದೇವಕೀನಂದನಃ

---

[1] ರಾಧೆಯೇ ಗೋಲೋಕಧಾಮದ ರಾಣಿ. ಕೃಷ್ಣನ ವಿಲಾಸಿನಿ, ಪ್ರೇಯಸಿಯೆನ್ನುವ ಕಲ್ಪನೆ ರಾಸಮಂಡಲದ ಒಡಲಿಂದಲೇ ಹುಟ್ಟಿಕೊಂಡಿತು. ರಾಧಾಮಾಧವರ ವಿಹಾರವೇ ರಾಸವೆನಿಸಿಕೊಂಡಿತು... ('ಗೀತಗೋವಿಂದ', ಎಸ್.ಕೆ. ರಾಮಚಂದ್ರರಾವ್ ಪುಟ. ೪೭.)

ಗೋಪಿಯರು ಕೃಷ್ಣನ ಸನಿಹವನ್ನು ಬಯಸಲು ಕಾತರರಾಗಿದ್ದರೆಂದು ವಿಷ್ಣು ಪುರಾಣ, ಹರಿವಂಶ, ಭಾಗವತಗಳಲ್ಲಿಯೂ ಕಾಣಬಹುದು.

ಪುರಂದರದಾಸರೂ ಗೊಲ್ಲತಿಯರೊಡನೆ ನಲಿವ ಚೆಲ್ವಮೂರುತಿಯಾದ ಕೃಷ್ಣನು ಗೋಪಿಕೆಯರೊಡನೆ ಇರುವ ಚಿತ್ರಣವನ್ನು ಕೊಡುತ್ತಾರೆ :

ಹಿಂಡುನಾರಿಯರೆಲ್ಲ ಸುತ್ತಿಕೊಂಡಿರೆ
ತಾಳಲಾರೆವು ನಾವು ಪುರಂದರವಿಠಲನ
ಕಾಣದೆ ನಿಲ್ಲಲಾರೆವೆ........

ಆದರೆ ಜಯದೇವ,ಲೀಲಾಶುಕರ ಕಾವ್ಯಗಳಲ್ಲಿ 'ರಾಸ'ದ ಕಲ್ಪನೆ ಪ್ರಧಾನವಾಗಿದ್ದರೆ ದಾಸರಲ್ಲಿ 'ದಾಸ' ಕಲ್ಪನೆಯನ್ನು ಕಾಣುತ್ತೇವೆ.

ಜಯದೇವಕವಿಯ 'ಗೀತಗೋವಿಂದ' ಕಾವ್ಯ ೧೨ ಸರ್ಗಗಳಿಂದ ಕೂಡಿದೆ. ಇದರಲ್ಲಿ ಅಷ್ಟಪದಿವೃತ್ತಗಳಿವೆ. ಯಮಕ, ಪ್ರಾಸದಿಂದ ಕೂಡಿ ಮೈನವಿರೇಳಿಸುವ ಸಂಗೀತದ ಝರಿಯ ನಿನಾದ ಇದರಲ್ಲಿ ಅಡಗಿದೆ. ಸಂಗೀತ ಅರಿಯದವನಿಗೂ ಈ ಕಾವ್ಯ ತಲೆದೂಗುವಂತೆ ಮಾಡುತ್ತದೆ.

ಭೋಜದೇವ ಮತ್ತು ರಮಾದೇವಿಯರ ಮಗನೇ ಕವಿ ಜಯದೇವ. ಇವನ ಹುಟ್ಟೂರು ಜಗನ್ನಾಥದ ಹತ್ತಿರವಿರುವ ಬಿಂದುಬಿಲ್ವ. ಹೆಂಡತಿ ಪದ್ಮಾವತಿ. ಜಯದೇವನು ಕ್ರಿ. ಶ. ೧೨ನೆಯ ಶತಮಾನದ ಬಂಗಾಳದ ಬಲ್ಲಾಳಸೇನ ರಾಜನ ಮಗ ಲಕ್ಷ್ಮಣಸೇನನ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದ. ಗೀತಗೋವಿಂದದ ಕಾವ್ಯವಸ್ತು ರಾಧಾಮಾಧವರ ಪ್ರೇಮ.ಅದರಲ್ಲಿ ವಿಪ್ರಲಂಭ ಶೃಂಗಾರದಿಂದ ಹಿಡಿದು ಸಂಭೋಗಶೃಂಗಾರದವರೆಗೂ ಶೃಂಗಾರ ಮಡುಗಟ್ಟಿ ನಿಂತಿದೆ. ಗೋವಿಂದನ ಪ್ರೇಮವನ್ನು ತಿಳಿಸುವ ಗೀತೆಗಳಿರುವುದರಿಂದಲೇ ಕಾವ್ಯಕ್ಕೆ 'ಗೀತಗೋವಿಂದ' ಎಂದು ಹೆಸರು ಬಂದಿದೆ. ಈ ಕೃತಿಗೆ ಬ್ರಹ್ಮ ವೈವರ್ತ ಪುರಾಣವೇ ಮೂಲ. ಭಾಗವತವನ್ನೇ ಆಧರಿಸಿದ ಕಾವ್ಯಗಳು ಅನೇಕವಿದ್ದರೂ ಅವು ಜಯದೇವನ ಗೀತಗೋವಿಂದದಂತೆ, ಲೀಲಾಶುಕನ 'ಶ್ರೀಕೃಷ್ಣಕರ್ಣಾಮೃತ'ದಂತೆ ಗೇಯಕಾವ್ಯಗಳಾಗಿ, ಸಂಗೀತ–ಸಾಹಿತ್ಯವನ್ನು ಒಮ್ಮೈಯಲಾಗಿ ಕೂಡಿಸಿಕೊಂಡಂತೆ ಕಾಣುವುದಿಲ್ಲ. ''ಪ್ರಖ್ಯಾತವಾದ ಮೂರು ವೈಷ್ಣವ ಭಕ್ತಿಕಾವ್ಯಗಳಿವೆ. ಇಂಥ ಗ್ರಂಥ ಮೂರೇನೇ ಎಂದು ಯಾರಾದರೂ ಆಶ್ಚರ್ಯಪಡಬಹುದು. ಭಕ್ತಿಮಾತ್ರ ಅಲ್ಲ ಕಾವ್ಯ ಎಂಬ ಪದವನ್ನು ನೆನೆದರೆ ಈ ಆಶ್ಚರ್ಯಕ್ಕೆ ಕಾರಣ ಇಲ್ಲ ಎನ್ನಿಸುವುದು. ಭಕ್ತಿಯನ್ನು ಪ್ರಕಟಿಸಿದ ಕೃತಿ ಸ್ವಯಂ ಕಾವ್ಯವೂ ಆಗುವುದು ಅಸಾಮಾನ್ಯವೇ.

ಇದು ಕುಲಶೇಖರಾಳ್ವಾರ್ ಇವರ ಮುಕುಂದಮಾಲೆಯಲ್ಲಿ, ಜಯದೇವನ ಗೀತಗೋವಿಂದದಲ್ಲಿ, ಲೀಲಾಶುಕನ ಕೃಷ್ಣಕರ್ಣಾಮೃತದಲ್ಲಿ ಸಿದ್ಧಿಸಿದೆ".[1]

ಜಯದೇವ ತಾನು ತನ್ನ ಪತ್ನಿ ಪದ್ಮಾವತಿಯೊಂದಿಗೆ ಜೀವ ಒಂದು ; ಶರೀರ ಬೇರೆ ಬೇರೆ ಎಂಬಂತೆ ಇದ್ದು ರಾಧಾಕೃಷ್ಣರ ಪ್ರೇಮವನ್ನು ಚಿತ್ರಿಸಿದ. ಪದ್ಮಾವತಿಯೇ ರಾಧೆ ತಾನೇ ಮಾಧವನಾಗಿ ಗೀತಗೋವಿಂದವನ್ನು ಬರೆದ. ಇದು ಕವಿಯ ಜೀವನ ಹಾಗೂ ಭಕ್ತಿಸಾಧನೆಗಳ ತಾದಾತ್ಮ್ಯವನ್ನು ಎತ್ತಿ ತೋರಿಸುತ್ತದೆ. ಇಲ್ಲಿ ಪ್ರಣಯ, ವಿರಹ, ಕಾಮಗಳೆಲ್ಲ ದೈವಪ್ರಣಯ, ದೈವ ಕಾಮವಾಗಿ, ಸಖೀಭಾವವಾಗಿ ಮಾರ್ಪಟ್ಟಿದೆ. ಎಲ್ಲವೂ ಭಕ್ತಿರಸದಿಂದ ತುಂಬಿ ತುಳುಕುತ್ತಿದೆ.

ಕನ್ನಡನಾಡಿನಲ್ಲಿ ಭಾಗವತಧರ್ಮವನ್ನು ಎತ್ತಿಹಿಡಿದವರು ಹರಿದಾಸರು. ಭಕ್ತಿಯೋಗವೇ ಅತ್ಯಂತ ಸುಲಭವಾದದ್ದು, ಸರ್ವಜನಕ್ಕೂ ಆದರಣೀಯವಾದುದೆಂದು ತೋರಿಸಿಕೊಟ್ಟವರವರು. ಕೃಷ್ಣನೇ ಎಲ್ಲರಿಗೂ ಆಶ್ರಯೀಭೂತ ಎಂದು ಶರಣಾಗತಿತತ್ವವನ್ನೇ ಎತ್ತಿತೋರಿಸಿದರು. ಎಲ್ಲ ಹರಿದಾಸರು ಈ ಮೇಲಿನ ತತ್ವವನ್ನೇ ನುಡಿಗಳಲ್ಲಿ ಎತ್ತಿ ಆಚರಣೆಯಲ್ಲಿ ತಂದರು. ಕೃಷ್ಣಭಕ್ತಿ ಪಂಥಕ್ಕೆ ತಮ್ಮನ್ನೇ ತಾವು ಅರ್ಪಿಸಿಕೊಂಡರು. ಅಂಥವರಲ್ಲಿ ಪುರಂದರದಾಸರೂ ಒಬ್ಬರು. ಇವರೂ ಅವತಾರ ಪುರುಷನಾದ ಶ್ರೀ ಕೃಷ್ಣನ ಬಗ್ಗೆ ಅಸಂಖ್ಯಾಂತ ಕೀರ್ತನೆಗಳನ್ನು ಪ್ರೀತಿಯಿಂದ, ಭಕ್ತಿ ಕುಸುಮಾಂಜಲಿಯಾಗಿ ಅರ್ಪಿಸಿದ್ದಾರೆ. ಪುರಂದರದಾಸರ ಕವಿಹೃದಯ, ಭಕ್ತಿ, ಭಾವುಕತೆಗಳೇ ಕೀರ್ತನೆಗಳಾಗಿ ಹೊರಹೊಮ್ಮಿವೆ.

ಗೀತಗೋವಿಂದ ಮತ್ತು ಶ್ರೀಕೃಷ್ಣಕರ್ಣಾಮೃತದಲ್ಲಿ ರಾಧೆಯು ಪ್ರಣಯ ಮಧುರಭಾವವಾಗಿ ಕಂಡರೆ, ಪುರಂದರರ ಕೃತಿಗಳಲ್ಲಿ ಗೋಪಿಯರೇ ಸತಿಯರು. ಗೀತಗೋವಿಂದದಲ್ಲಿ ಮಾಧವನ ಚಿಂತೆ ರಾಧೆಗೆ ಬಹಳವಾಗಿ ಹತ್ತಿಕೊಂಡಿದೆ. ರಾಧೆಯ ವಿರಹವನ್ನು ಕಂಡು ಸಖಿಯರು ಅನೇಕ ಮಾತುಗಳನ್ನು ಆಡುತ್ತಾರೆ :

ವಸಂತೇ ವಾಸಂತೀ ಕುಸುಮ ಸುಕುಮಾರೈರವಯವೈ
ಭ್ರಮಂತೀಂ ಕಾಂತಾರೇ ಬಹುವಿಹಿತ ಕೃಷ್ಣಾನುಸರಣಾಂ
ಅಮಂದಂ ಕಂದರ್ಪಜ್ವರ ಜನಿತ ಚಿಂತಾಕುಲತಯಾ

1 ಶ್ರೀಕೃಷ್ಣಕರ್ಣಾಮೃತ – ಮೂಲ ಮತ್ತು ಅನುವಾದ', – ಶ್ರೀನಿವಾಸ, ಜೀವನ ಕಾರ್ಯಾಲಯ, ಬೆಂಗಳೂರು. ೧೯೫೯, ಪ್ರಸ್ತಾವನೆ, ಪುಟ. VII.

ಚಲದ್ಬಾಧಾಂ ರಾಧಾಂ ಸರಸಮಿದ ಮೂಚೇ ಸಹಚರೀ[1]

ಆ ಕೃಷ್ಣನಾದರೋ

ವಿಹರತಿ ಹರಿರಿಹ ಸರಸ ವಸಂತೇ ನೃತ್ಯತಿ
ಯುವತಿ ಜನೇನ ಸಮಂ ಸಖಿ ವಿರಹ ಜನಸ್ಯ ದುರಂತೇ

ವಸಂತಮಾಸದಲ್ಲಿ ವಿರಹಿ ರಾಧೆಯು ಎದುರಿಗೆ ಕೃಷ್ಣ ಅಸಂಖ್ಯ ಗೋಪ ಸ್ತ್ರೀಯರೊಡನೆ ಹೆಜ್ಜೆ ಹಾಕಿ ಆನಂದದಿಂದ ಕುಣಿಯುತ್ತಿದ್ದಾನೆ. ಬೀದಿಬೀದಿಯಲ್ಲಿ ಗೋಪಸ್ತ್ರೀಯರು ಕಾಮದ ಉನ್ಮಾದದಿಂದ ಹುಚ್ಚಾಗಿ ಅಳುತ್ತಿದ್ದಾರೆ. ಮಾಧವನನ್ನು ಮತ್ತೆ ಮತ್ತೆ ಕರೆಯುತ್ತಿದ್ದಾರೆ. ಇಂತಹ ಗೋಪಸ್ತ್ರೀಯರ ಜೊತೆಯಲ್ಲಿ ಶ್ರೀಕೃಷ್ಣ ಹೇಗಿದ್ದನು ಎಂಬುದನ್ನು ಜಯದೇವನ ಮಾತಿನಲ್ಲೇ ಕೇಳಬೇಕು:

ಅನೇಕನಾರೀ ಪರಿರಂಭ ಸಂಭ್ರಮಂ
ಸ್ಫುರನ್ಮನೋಹಾರಿ ವಿಲಾಸಲಾಲಸಂ
ಮುರಾರಿ ಮಾರಾದುಪದರ್ಶಯಂತ್ಯಸೌ
ಸಖೀಸಮಕ್ಷಂ ಪುನರಾಹ ರಾಧಿಕಾಂ

ಗೋಪಕನ್ನೆಯರನ್ನು ಆಲಿಂಗಿಸುವುದರಲ್ಲಿ ಕೃಷ್ಣನಿಗೆ ಪರಮಾಸಕ್ತಿ ; ಅಪರಿಮಿತ ಸಂತೋಷ. ಅವನ ಅಪ್ಪುಗೆಯಲ್ಲಿ ಒಂದು ವಿಲಾಸದ ಕಂಪು ಇರುತ್ತಿತ್ತು. ಇಂತಹ ಸಂದರ್ಭದಲ್ಲಿ ಸಖಿಯೊಬ್ಬಳು ರಾಧೆಗೆ ಕೃಷ್ಣನ ವಿಚಾರವಾಗಿ ಮತ್ತಷ್ಟು ತಿಳಿಸುವಳು. ಇಂತಹುದೇ ಸಂದರ್ಭ ಪುರಂದರದಾಸರಲ್ಲಿ ಹೀಗಿದೆ :

ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ
ಸುತ್ತ ಮುತ್ತ ನಾರಿಯರು ತಥೈ ತಥೈ ಥಾಯೆಂದು
ಆರ್ತಿಯಿಂದ ಕುಣಿಸುವರು ಪರವಸ್ತುವ ಹಿಡಿದು
ಕಾಮಿನಿಯರೆಲ್ಲ ನೆರೆದು ಕಂದನಾಟಗಳಾಡಿ
ಪ್ರೇಮದಿಂದ ಬಿಗಿಬಿಗಿದಪ್ಪಿ ಮುದ್ದಾಡಿ
ಕಾಮಿತ ಫಲವೀವ ಭಕುತಜನರೊಡೆಯ

ಇಲ್ಲಿ ಶ್ರೀಕೃಷ್ಣ ಪರಬ್ರಹ್ಮಸ್ವರೂಪ. ಅಂತಹ ಪರಬ್ರಹ್ಮಸ್ವರೂಪನನ್ನು ಪಡೆದ ಗೋಪಿಯರು ಒಳ್ಳೆಯ ರಾಗರಸದಿಂದ ಕುಣಿಯುತ್ತಿದ್ದಾರೆ; ಮಕ್ಕ

---

[1] ರಾಧ ಕೋಮಲ ಶರೀರದಿಂದ ಕೂಡಿದ್ದಾಳೆ. ಕಾಮ ರಾಧೆಯನ್ನು ದಹಿಸುತ್ತಿದ್ದಾನೆ, ಅವಳು ಮಾಧವನನ್ನು ಹುಡುಕುತ್ತಾ ಹೊರಟಿದ್ದಾಳೆ.

ಳಾಟವಾಡಿದ್ದಾರೆ, ಪ್ರೇಮದಿಂದ ಆಲಿಂಗನ ಮಾಡುತ್ತಿದ್ದಾರೆ. ಏಕೆಂದರೆ ಕೃಷ್ಣ ಕಲ್ಪವೃಕ್ಷ ಕಾಮಧೇನುವಲ್ಲವೇ, ಭಕ್ತಜನಕ್ಕೆ ಒಡೆಯನಲ್ಲವೇ? ಇಂತಹ ಕೃಷ್ಣಪರಮಾತ್ಮನನ್ನು ನೋಡಿದರೆ ಸಂತೋಷ, ಕೂಡಿದರೆ ಸಂತೋಷ. ಅವನೊಡನೆ ಆಡಿ ಪಾಡಿದರೆ ಅದೇ ಸ್ವರ್ಗ. ಆದ್ದರಿಂದಲೇ ಗೋಪಿಕೆಯರು ಕೃಷ್ಣನನ್ನು ಕರೆಯುತ್ತಾರೆ :

ಓಡಿಬಾರಯ್ಯ ವೈಕುಂಠಪತಿ ನಿನ್ನ
ನೋಡುವೆ ಮನದಣಿಯ ಪ.
ನೋಡಿ ಮುದ್ದಾಡಿ ಮಾತಾಡಿ ಸಂತೋಷಗೂಡಿ
ಪಾಡಿ ಪೊಗಳುವೆನು ಪರಮಪುರುಷ ಹರಿ ಅ.ಪ.
ಕೆಂದಾವರೆ ಪೋಲ್ವ ಪಾದಗಳಿಂದ ರಂಗ
ಧಿಂ ಧಿಮಿ ಧಿಮಿಕೆಂದು ಕುಣಿಯುತಲಿ
ಅಂದಿಗೆ ಕಿರುಗೆಜ್ಜೆ ಘಲುಘಲುರೆನ್ನುತ
ಚಂದದಿ ಪೀತಾಂಬರ ನಲಿದಾಡುತ ...
ಮಂಗಳಾತ್ಮಕ ಮೋಹನಕಾಯ ರಂಗ
ಸಂಗೀತಲೋಲ ಸದ್ಗುಣಶೀಲ
ಅಂಗನೆಯರಿಗೆಲ್ಲ ಅತಿಪ್ರಿಯನಾದ, ಶುಭಾಂಗ

ಗೋಪಿಯರಿಗೆ ಸುಮ್ಮನೆ ನೋಡಿದರೆ ಸಾಲದು, ಕೃಷ್ಣನನ್ನು ಕಂಡು ಮುದ್ದಾಡಬೇಕು, ಮಾತನಾಡಬೇಕು. ಅವನನ್ನು ಹಾಡಿ ಹೊಗಳಬೇಕು. ಪಿತಾಂಬರಧಾರಿಯನ್ನು ಕೊಂಡಾಡಬೇಕು.

ಗೀತಗೋವಿಂದದ ಕೃಷ್ಣನ ಕೇಳಿ ಗೋಪಸ್ತ್ರೀಯರ ಸಮೂಹದಲ್ಲಿ ನಡೆಯುತ್ತದೆ. ಮಾಧವ ಬಹಳ ಉಲ್ಲಾಸದಿಂದ ಇದ್ದಾನೆ. ಅವನ ಶರೀರವಾದರೋ ಚಂದನದಲ್ಲಿ ಪೂರ್ತಿ ಅದ್ದಿದಂತೆ ಕಾಣುತ್ತಿದೆ. ಪೀತಾಂಬರಧಾರಿಯಾಗಿದ್ದಾನೆ. ಇಂತಹ ಶ್ರೀಕೃಷ್ಣನನ್ನು ಗೋಪಿ ಅಪ್ಪಿದ್ದಾಳೆ. ಅಷ್ಟೇ ಸೊಗಸಾಗಿ ಪಂಚಮರಾಗವುಕ್ಕುವಂತೆ ಹಾಡನ್ನೂ ಹಾಡುತ್ತಿದ್ದಾಳೆ. ಅಸಂಖ್ಯ ಗೋಪಸ್ತ್ರೀಯರಲ್ಲಿ ಯಾರಿಗೋ ಆಲಿಂಗನ, ಮತ್ತಾರಿಗೋ ಚುಂಬನ, ಮಗದೊಬ್ಬಳನ್ನು ರಮಿಸುವಿಕೆ ಹೀಗೆ ಕೃಷ್ಣನ ವಿಲಾಸ ಸಾಗುತ್ತಿತ್ತು. ಅಂತೆಯೇ ಪುರಂದರದಾಸರು :

ಇರುಳೊಳು ಹೆಂಗಳ ಕೂಡಿ ಆಡುತಲಿ
ವರ ಯಮುನೆಯ ತೀರದಿ ನಿಂತ

ಬರಿಮಾತಿಲ್ಲದೆ ಹದಿನಾರುಸಾವಿರ ತರಳೇರ
ಮರುಳುಮಾಡಿದ ಈ ಮದನಗೋಪಾಲನ

ಎಂದು ಸ್ತುತಿಸಿ ಹಾಡಿದ್ದಾರೆ. 'ಸುಂದರಾಂಗದ ಸುಂದರಿಯರ ಹಿಂದುಮುಂದಿನಲಿ' ಸುಳಿದಾಡುತ್ತಿದ್ದ ಪಿಳ್ಳಂಗೋವಿಯ ಚೆಲ್ವಕೃಷ್ಣನನ್ನು ದರ್ಶಿಸಿದ್ದಾರೆ.

'ಸ್ವಚ್ಛಂದಂ ವ್ರಜಸುಂದರೀಭಿರಭಿತಃ ಪ್ರತ್ಯಂಗಮಾಲಿಂಗಿತಃ' ಸ್ವಚ್ಛಂದದಿಂದ ಮನಸ್ಸಿಗೆ ಬಂದ ಗೋಪಕನ್ಯೆಯರನ್ನು ಆಲಿಂಗಿಸಿ ಆಸ್ವಾದಿಸುತ್ತಿದ್ದನು. ಹೀಗೆ ಇದ್ದರೂ ರಾಧೆಯನ್ನು ಒಂದು ಕ್ಷಣವೂ ಮರೆತಿರಲಿಲ್ಲ, ಬಿಟ್ಟಿರಲಿಲ್ಲ. ಕೃಷ್ಣಪರಮಾತ್ಮ ಎಲ್ಲ ಗೋಪಿಯರಿಗೂ ಸಮಾನ ಪ್ರೇಮವನ್ನು ಹಂಚಿ ವಿಹರಿಸಿದ್ದಾನೆ. ರಾಧೆಗೆ ಬಹಳ ಅಸೂಯೆ ಉಂಟಾಯಿತು. ಕೃಷ್ಣನಿಂದ ದೂರ ಸರಿದು ಲತಾಗೃಹದಲ್ಲಿ ಗುಟ್ಟಾಗಿ ಸಖಿಯೊಡನೆ ತನ್ನ ಅಂತರಂಗವನ್ನು ಬಿಚ್ಚಿದ್ದಾಳೆ ;

ಯುವತಿಷು ವಲತ್ತೃಷ್ಣೇ ಕೃಷ್ಣೇ ವಿಹಾರಿಣಿ ಮಾಂ ವಿನಾ
ಪುನರಪಿ ಮನೋವಾಮಂ ಕಾಮಂ ಕರೋತಿ ಕರೋಮಿ ಕಿಂ

'ಅಯ್ಯೋ ! ನನ್ನನ್ನು ಬಿಟ್ಟು ಎಲ್ಲರೊಡನೆಯೂ ವಿಹರಿಸುತ್ತಿರುವನಲ್ಲಾ' ಗೋಪಕನ್ನೆಯರ ಮೇಲೆಯೇ ಶ್ರೀಕೃಷ್ಣನಿಗೆ ಹೆಚ್ಚು ಆಸೆ. ಇದನ್ನು ಕಣ್ಣಿನಿಂದ ನೋಡಿದರೂ ಅವನ ಮೇಲೆ ಕೋಪ ಬರುವುದಿಲ್ಲವಲ್ಲ. ಏನು ಮಾಡಲಿ ಏನು ಮಾಡಲಿ' ಎಂದು ರಾಧೆ ತನ್ನ ಸಖಿಯೊಡನೆ ಪ್ರಲಾಪಿಸುತ್ತಾಳೆ :

ಸಖೀ ಹೇ ಕೇಶಿಮಥನ ಮುದಾರಂ ರಮಯ ಮಯಾಸಹ
ಮದನ ಮನೋರಥ ಭಾವಿತಯಾ ಸವಿಕಾರಂ

ಎಲೈ ಗೋಪಕನ್ನಿಕೆಯೇ ! ನನ್ನಲ್ಲಿ ಮಾಧವನು ತೃಪ್ತಿಗೊಳ್ಳುವಂತೆ ಏನಾದರೂ ಮಾಡು ಎಂದು ಉತ್ಕಟಭಾವವನ್ನು ಪ್ರಕಟಿಸುತ್ತಾಳೆ. ಇಲ್ಲಿಯು ಕೃಷ್ಣನ ಮೇಲಿನ ಪ್ರೀತಿ, ಒತ್ತಾಯದ ಧ್ವನಿಗಳು ಗಮನಾರ್ಹ. ಅವನಿಲ್ಲದೆ ಹೋದರೆ ರಾಧೆಗೆ ಪ್ರಪಂಚವೇ ಶೂನ್ಯವಾಗುತ್ತದೆ.

ಪುರಂದರದಾಸರಲ್ಲಿಯೂ ಗೋಪಿಯರ ವಿರಹ ಮುಗಿಲು ಮುಟ್ಟಿದೆ :

ಶ್ರೀಕೃಷ್ಣರಾಯನ ತೋರಿಸೆ ಮಾತನಾಡಿಸೆ
ಧೀರ ರಂಗನು ಬಾರದೆ ಇಹನೇನೆ
ಮಾರನಯ್ಯಗೆ ಮಾಡಿದ ತಪ್ಪು ಏನೆ
ವಾರಿಜಾಕ್ಷಿ ನೀವೊಂದು ಮಾತಾಡಬಾರೆ

ನೀರಜಾಕ್ಷನ ನಿಮಿಷದಿ ಕರೆದುತಾರೆ......
ವೇಣುನಾದದಿ ಮರುಳುಮಾಡಿದನಮ್ಮ

–ಎಂದೆಲ್ಲಾ ಪರಿಪರಿಯಾಗಿ ನುಡಿದು ಕೃಷ್ಣನೆಂಬ ಮಾಣಿಕ್ಯಕ್ಕೆ ಆಸೆಪಡುತ್ತಾರೆ, ಗೋಪಿಕೆಯರು. ವೃಂದಾವನದಿಂದ ಗೋಪಿಯರ ಒಡೆಯನಾದ ಗೋವಿಂದನನ್ನು ಕರೆದುತಾರ ಎನ್ನುವಾಗ ಗೋಪಿಯರ ಉತ್ಕಟೇಚ್ಛೆ ಎಷ್ಟೊಂದು ಆಳವಾಗಿದೆ! ಶ್ರೀಕೃಷ್ಣನಿಲ್ಲದೆ ಇವರು ಇರಲಾರರು; ಗೀತಗೋವಿಂದದಲ್ಲಿ ರಾಧೆ ಕೃಷ್ಣನಿಲ್ಲದೆ ಇರಲಾರಳು. ಸಖಿಯೊಡನೆ 'ರಮಯ ಮಯಾಸಹ' ಎನ್ನುವಾಗಿನ ಯಾಚನಾಭಾವ 'ಇಷ್ಟು ದಿವಸವೂ ಹ್ಯಾಂಗೆ ಬಿಟ್ಟಿಹೆವಮ್ಮ' ಎನ್ನುವಾಗಿನ ಕೃಷ್ಣನ ವಿರಹ ಹೇಗೆ ಗೋಪಿಯರ ಹೃದಯವನ್ನು ಚೂರು ಚೂರು ಮಾಡಿದೆ ಎಂಬುದನ್ನು ಗಮನಿಸಬಹುದು. 'ನೀರಜಾಕ್ಷನ ನಿಮಿಷದಿ ಕರೆದು ತಾರೆ' ಎನ್ನುವಲ್ಲಿ ಗೋಪಿಯರು ಶ್ರೀಕೃಷ್ಣನಿಲ್ಲದೆ ಒಂದು ನಿಮಿಷವೂ ಇರಲಾರರು ಎಂಬುದನ್ನು ತಿಳಿಯಬಹುದು. ಅವರು ಮನ್ಮಥನ ಬಾಧೆಯಿಂದ ಬಳಲಿ ಬೆಂಡಾಗಿದ್ದಾರೆ. ಚಂದನದಿಂದ ಲೇಪಿತವಾಗಿದ್ದರೂ ಅವರ ಎದೆಗಳು ಉರಿಯಹತ್ತಿವೆ. ಚಂದ್ರನ ಬೆಳುದಿಂಗಳಿನಿಂದ ಕಿಚ್ಚು ಇನ್ನೂ ಉಲ್ಬಣಗೊಂಡಿದೆ. ಮಂದಮಾರುತ ಬೀಸಿದರೂ ಅದು ತಾಪವೇ ಆಗಿದೆ. ಶ್ರೀಕೃಷ್ಣನ ವಿರಹ ಇವರಿಗೆ ಸಹಿಸಲಸಾಧ್ಯವಾಗಿದೆ.

ನವಿಲುಗರಿಗಳ ಸಮೂಹದಿಂದ ಕೂಡಿದವನೂ, ಮಂಡಲಾಕಾರವಾಗಿ ಕೇಶಬಂಧವುಳ್ಳವನೂ ಇಂದ್ರಚಾಪದಂತೆ ಬಣ್ಣಗಳಿಂದ ಕೂಡಿದವನೂ ಆದ ಕೇಶವನಿಂದ; ಗೋಪಕಾಂತೆಯರ ಮುಖವನ್ನು ಚುಂಬಿಸುವುದರಲ್ಲೇ ಆಸೆಯುಳ್ಳವನಾದ ಶ್ರೀಕೃಷ್ಣಪರಮಾತ್ಮನಿಂದ ಗೋಪಸ್ತ್ರೀಯರಿಗೆ ಮನ್ಮಥ ಬಾಧೆ ವಿಪರೀತವಾಗಿದೆ. ಕುಚಗಳ ಮೇಲಿನ ಮುಕ್ತಾಹಾರ ಚಲಿಸುತ್ತಿದೆ :

ಚಂಚಲಕುಂಡಲ ದಲಿತಕಪೋಲಾ
ಮುಖರಿತ ರಶನ ಜಘನಗತಿಲೋಲಾ
ವಿಪುಲ ಪುಲಕ ಪೃಥುವೇಪಥುಭಂಗಾ
ಶ್ವಸಿತ ನಿಮೀಲಿತ ವಿಕಸದನಂಗಾ
ಶ್ರಮಜಲಕಣ ಭರ ಸುಭಗಶರೀರಾ
ಪರಿಪತಿತೋರಸಿ ರತಿರಣಧೀರಾ[1]

---

[1] ರತಿರಣಧೀರನಾದ ಕೃಷ್ಣಪರಮಾತ್ಮನು, ಚಂಚಲವಾದ ಕರ್ಣಕುಂಡಲಗಳಿಂದ ಕೂಡಿದ ಜಘನ ಸ್ಥಳದ ಗಮನದಿಂದ ಶಬ್ದ ಬರುವಂತಹ ಒಡ್ಯಾಣವುಳ್ಳಂತಹ ತರುಣಿ

–ಹೀಗೆ ನಾನಾ ರೀತಿಯ ಗೋಪವಧುಗಳ ಸಮೂಹದಲ್ಲಿ ಕೃಷ್ಣನು ವಿಹರಿಸುವ ಚಿತ್ರವನ್ನು ಜಯದೇವ ತೋರಿಸಿದರೆ, ಗಾಡಿಕಾರ ಶ್ರೀ ವೇಣು ಗೋಪಾಲನ ಕೂಡಿ ಕೊಂಡಾಡುವ ಸುಖದ ಸೊಬಗನ್ನು ಪುರಂದರದಾಸರಲ್ಲಿಯೇ ನೋಡಬೇಕು :

ಮಡದಿಯರೆಲ್ಲರು ಮೀಯುತಲಿರೆ ಮೈ
ಉಡುಗೆಯ ತೆಗೆದುಕೊಂಡು
ಸಡಗರದಲಿ ಬೇಡಿಕೊಳ್ಳೆ ವಸ್ತ್ರಗಳನು
ಕೊಡದೆ ಅಡವಿಗೆ ನಡೆದ

ಹೀಗೆ ಹದಿನಾರುಸಾವಿರ ಗೋಪಿಯರೊಡನೆ ಇದ್ದ ಕೃಷ್ಣನ ಪೂರ್ಣಚಿತ್ರವನ್ನು ಕೊಟ್ಟು ಈ ಕೃಷ್ಣನೆಂತಹವನು ಎಂಬುದನ್ನು ಹೀಗೆ ತಿಳಿಸುತ್ತಾರೆ :

ಹಸಿರು ಪಟ್ಟೆಯನು ಉಟ್ಟು – ನಮ್ಮನೆ ಹೆಣ್ಣು
ಮೊಸರು ಕಡೆಯುತಿರಲು
ನಸುನಗುತಲಿ ಬಂದು ಕುಸುಮ ಮಲ್ಲಿಗೆ ಮುಡಿಸಿ
ಬಸಿರುಮಾಡಿದನೆಂಥ ಹಸುಳನೆ ಗೋಪಿ

.........

ಋತುವಾದ ಬಾಲೆಯರು ಪತಿಯೆಡೆ ಪೋಪಾಗ
ಕೃತಕದಿಂದಡಗಿಹನೆ
ಮತಿಗೆಟ್ಟ ಪೆಣ್ಣೆ ಸುಂಕವನು ಕೊಡು ಎನುತಲಿ
ಪ್ರತಿಯಾಗಿ ಮಾರನ ಸೂರೆಗೊಂಬುವನೆ

ಇಷ್ಟೆಲ್ಲಾ ಮಾಡಿದ ಕೃಷ್ಣಪರಮಾತ್ಮನಿಗೆ ಎಚ್ಚರಿಕೆಯನ್ನು ಕೊಡುವುದನ್ನು ಮರೆಯುವುದಿಲ್ಲ, ಪುರಂದರದಾಸರು ;

ಜಾರನೆನಿಸಿಕೊಳಲೇಕೆ – ರಂಗ
ಚೋರನೆನಿಸಿಕೊಂಬ ದೂರು ನಿನಗೇಕೆ
ವಾರಿಜಾಕ್ಷಿಯರ ಕೂಡಲೇಕೆ – ನಮ್ಮ
ಪುರಂದರ ವಿಠ್ಠಲರಾಯ ಎಚ್ಚರಿಕೆ –

---

(ಗೋಪಿ) ಯರೊಡನೆ, ವಿಪುಲವಾದ ರೋಮಾಂಚನದಿಂದಲೂ, ಬಹಳವಾದ ಕಂಪನದಿಂದಲೂ, ತರಂಗದಂತೆ ನಿಟ್ಟುಸಿರಿನಿಂದಲೂ ನಿಮೀಲಿತವಾದ ಕಣ್ಣುಗಳಿಂದಲೂ, ಕೂಡಿದ ಕಾಮೋದ್ರೇಕಮಾಡುವ ಗೋಪವಧುವಿನೊಡನೆ, ಬಹಳ ಆಯಾಸದಿಂದ ಉಂಟಾದ ಬೆವರಿನಿಂದ ಕೂಡಿರುವ, ರತಿರಣಧೀರೆಯರಾದ ಗೋಪಕನ್ನಿಕೆಯರೊಡನೆ ವಿಹರಿಸುತ್ತಿದ್ದನು.

ಹೀಗೆ ಪುರಂದರದಾಸರು ಶ್ರೀಕೃಷ್ಣನ ಕೀರ್ತನೆಯನ್ನು ಮಧುರಭಕ್ತಿಯ ಎಲ್ಲ ಸ್ತರಗಳಲ್ಲಿಯೂ ಮಾಡಿದ್ದರೆ ಜಯದೇವ ಸತಿ–ಪತಿ ಭಾವವನ್ನೇ ಹೆಚ್ಚಾಗಿ ತನ್ನ ಗೀತಗೋವಿಂದದಲ್ಲಿ ಮೂಡಿಸಿದ್ದಾನೆ.

ಕೃಷ್ಣನ ದಶಾವತಾರಗಳನ್ನು ಪುರಂದರರು ಅನೇಕ ವಿಧವಾಗಿ ಹಾಡಿ ಹೊಗಳಿದರೆ ಜಯದೇವ ವೃತ್ತದ ಒಂದೇ ಶ್ಲೋಕದಲ್ಲಿ ದಶಾವತಾರಿಯಾದ ಕೃಷ್ಣನನ್ನು ಸ್ಮರಿಸುತ್ತಾನೆ: (ಒಂದೊಂದು ಪದ್ಯದಲ್ಲಿ ಒಂದೊಂದು ಅವತಾರವನ್ನು ಸ್ಮರಿಸಿರುವುದೂ ಉಂಟು)

ವೇದಾನುದ್ಧರತೇ ಜಗನ್ನಿವಹತೇ ಭೂಗೋಲಮುದ್ಬಿಭ್ರತೇ
ದೈತ್ಯಾನ್ದಾರಯತೇ ಬಲಿಂ ಛಲಯತೇ ಕ್ಷತ್ರಕ್ಷಯಂ ಕುರ್ವತೇ
ಪೌಲಸ್ತ್ಯಂ ಜಯತೇ ಹಲಂ ಕಲಯತೇ ಕಾರುಣ್ಯ ಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿ ಕೃತೇ ಕೃಷ್ಣಾಯ ತುಭ್ಯಂ ನಮಃ[1]

ಹತ್ತು ಅವತಾರವೆತ್ತಿದ ಕೃಷ್ಣ ನಮ್ಮನ್ನು ಸಲಹಲಿ ಎಂದೇ ಪುರಂದರರೂ ಪ್ರಾರ್ಥಿಸುತ್ತಾರೆ.

ಜಲದೊಳು ತಮನ ಮರ್ದಿಸಿ ಅಂದು ಮತ್ಸ್ಯನಾಗಿ
ಬಲುಗಿರಿಯ ನೆಗಹಿ ಮರೆಮಾಡಿ ಕೂರ್ಮನಾಗಿ
ನೆಲನ ಒಯ್ದವನ ಕೊಲುವೆನೆಂದು ವರಾಹನಾಗಿ
ಬಲುಭಕ್ತಗಾಗಿ ಕಂಬದಿ ನಾರಸಿಂಹನಾಗಿ
ಚಿಕ್ಕರೂಪದಿಂದ ಬಲಿಯ ದಾನವ ಬೇಡಿ
ಉಕ್ಕಿನ ಕೊಡಲಿಯ ಪಿಡಿದ ಪರಶುರಾಮ
ಮಿಕ್ಕಿದ ತಲೆಯ ಚೆಂಡಾಡಿದ ಶ್ರೀರಾಮ
ಸೊಕ್ಕಿದ ಕಂಸನ ಕೊಲುವೆನೆಂದ ಕೃಷ್ಣ

---

[1] ಮತ್ಸ್ಯಾವತಾರವನ್ನು ಎತ್ತಿ ವೇದಗಳನ್ನು ಉದ್ಧರಿಸಿದವನೆ, ಕೂರ್ಮಾವತಾರದಿಂದ ಬೆನ್ನ ಮೇಲೆ ಪೃಥ್ವಿಯನ್ನೇ ಹೊತ್ತೆ. ವರಾಹರೂಪದಲ್ಲಿ ಭೂಮಿಯನ್ನು ಎತ್ತಿದೆ. ನರಸಿಂಹನಾಗಿ ಹಿರಣ್ಯಕಶಿಪುವನ್ನು ಸೀಳಿದೆ. ತ್ರಿವಿಕ್ರಮನಾಗಿ ಬಲಿಯನ್ನು ಪಾತಾಳಕ್ಕೆ ತುಳಿದೆ. ಪರಶುಧರನೆನಿಸಿ ಕ್ಷತ್ರಿಯ ಕುಲವನ್ನೇ ಧ್ವಂಸಮಾಡಿದೆ. ಶ್ರೀರಾಮನಾಗಿ ದಶಕಂಠನನ್ನು ಕೊಂದೆ. ಬಲಭದ್ರನಾಗಿ ಹಲಾಯುಧವನ್ನೇ ಧರಿಸಿದೆ. ಬುದ್ಧನಾಗಿ ದಯೆತೋರಿದೆ. ಕಲ್ಕಿತನವನ್ನು ಹೊಂದಿ ಮ್ಲೇಚ್ಛರನ್ನು ಧ್ವಂಸಮಾಡಿದೆ. ಇಂತಹ ಹತ್ತವತಾರವನ್ನೆತ್ತಿದ ಶ್ರೀಕೃಷ್ಣ ನಿನಗೆ ನಮಸ್ಕಾರ.

ಬಲುಪತಿವ್ರತೆಯರ ವ್ರತವನಳಿದ ಬುದ್ಧ
ಕಲಿಯಾಗಿ ಖಡುಗವ ಪಿಡಿದು ಕುದುರೆ ಏರಿ
ಒಲಿದು ಭಕ್ತರನೆಲ್ಲ ಸಲಹುವೆನೆಂತೆಂದು

ಇಂತಹ ದಶಾವತಾರದ ಕೀರ್ತನೆಗಳು ಪುರಂದರದಾಸರಲ್ಲಿ ಅನೇಕವಿವೆ.

ಜಯದೇವನಾದರೊ ಈ ದಶಾವತರದಲ್ಲಿ ಎಲ್ಲಿಯೂ ಕೃಷ್ಣಾವತಾರವನ್ನು ಎತ್ತಿ ಹೇಳಲಿಲ್ಲ. ಆದರೆ ಕೃಷ್ಣ ಎಲ್ಲ ಅವತಾರವನ್ನೂ ತಾಳಿದ್ದವನು ಎಂದು ಅವನಿಗೆ ನಮಸ್ಕರಿಸುತ್ತಾನೆ; ಬಲರಾಮನ ಅವತಾರವನ್ನೇ ಎತ್ತಿ ಹೇಳುತ್ತಾನೆ. ರಾಮಾವತಾರಾನಂತರ ಶ್ರೀಕೃಷ್ಣಾವತಾರ ಬರಬೇಕು. ಆದರೆ ಜಯದೇವ :

ವಹಸಿ ವಪುಷಿ ವಿಶದೇ ವಸನಂ ಜಲದಾಭಂ
ಹಲಹತಿ ಭೀತಿ ಮಿಲಿತ ಯಮುನಾಭಮ್
ಕೇಶವಾಧೃತ ಹಲಧರರೂಪ ! ಜಯಜಗದೀಶಹರೇ

ಎಂದು ಹಲಾಯುಧವನ್ನು ಧರಿಸಿ ಬಲರಾಮನಾಗಿ ನಿಂತ ಕೇಶವನನ್ನೇ ಸ್ಮರಿಸುತ್ತಾನೆ. ಪುರಂದರರು ಎಲ್ಲಿಯೂ ಬಲರಾಮನನ್ನು ಅವತಾರಪುರುಷನಾಗಿ ಸ್ಮರಿಸುವುದಿಲ್ಲ.

ಸಂಸ್ಕೃತ ಕವಿಗಳಲ್ಲಿ ಕವಿ ಜಯದೇವ ಕೃಷ್ಣನ ರಾಸಲೀಲೆಯನ್ನು ವರ್ಣಿಸಿದ್ದರೆ ಸಂಸ್ಕೃತದ ಇನ್ನೊಬ್ಬ ಕವಿ ಲೀಲಾಶುಕ ಕೃಷ್ಣನ ಬಾಲಲೀಲೆಗಳನ್ನು ಅಮೋಘವಾಗಿ ಚಿತ್ರಿಸಿದ್ದಾನೆ. ಇಬ್ಬರವೂ ಕೃಷ್ಣಭಕ್ತಿ ಕಾವ್ಯಗಳು. ಲೀಲಾಶುಕನನ್ನು ಕೃಷ್ಣಲೀಲಾಶುಕನೆಂತಲೂ ಕರೆಯುವುದುಂಟು. ಸ್ಥಳ—ಮುಕ್ತಸ್ಥಳ. ತಂದೆ ದಾಮೋದರ ; ತಾಯಿ ನೀಲಿ. ಶ್ರೀಕೃಷ್ಣನ ಪರಮಭಕ್ತನಾಗಿದ್ದ ಇವನ ಕಾಲ ಕ್ರಿ.ಶ. ಸು ೧೧ನೆಯ ಶತಮಾನ.ಲೀಲಾಶುಕ ಸಾಹಿತ್ಯಾಲಂಕಾರ ವ್ಯಾಕರಣ ಶಾಸ್ತ್ರಗಳಲ್ಲಿ ವಿಪುಲ ಪಾಂಡಿತ್ಯವನ್ನು ಪಡೆದಿದ್ದನು. ಅನೇಕ ಕಾವ್ಯಗಳನ್ನು ಬರೆದಿದ್ದರೂ, ಈತನಿಗೆ ಹೆಸರು ತಂದದ್ದು 'ಶ್ರೀಕೃಷ್ಣಕರ್ಣಾಮೃತ'. 'ಶ್ರೀಕೃಷ್ಣಕರ್ಣಾಮೃತ' ಮೂರು ಆಶ್ವಾಸಗಳಿಂದ ಕೂಡಿದೆ. ಇದರಲ್ಲಿ ೩೨೨ ಪದ್ಯಗಳಿವೆ. ಇಲ್ಲಿ ಲೀಲಾಶುಕ ಶ್ರೀಕೃಷ್ಣನ ಅನೇಕ ವಿಲಾಸಗಳನ್ನು ಕಣ್ಮುಂದೆ ಕಟ್ಟಿಕೊಡುತ್ತಾನೆ. ಇವನ ಕಾವ್ಯದಲ್ಲಿ ವೈವಿಧ್ಯವಿದೆ. ರಚನೆಯು ಚತುರತೆಯಿಂದೆ. ಅನೇಕ ಛಂದಸ್ಸಿನ ನೈಪುಣ್ಯ ತೋರಿಸಿದ್ದಾನೆ. ಅಲಂಕಾರ ವೈವಿಧ್ಯವಾದ ಶೃಂಗಾರ, ಹಾಸ್ಯ, ಕರುಣ, ಅದ್ಭುತ ರಸಗಳ ಮೇಳ ಇಲ್ಲಿದೆ.

ಜಯದೇವ ಕೇವಲ ರಾಧಾಮಾಧವರ ಪ್ರಣಯಕ್ಕೆ ಗೀತಗೋವಿಂದವನ್ನು ಮೀಸಲಿಟ್ಟಂತೆ ಲೀಲಾಶುಕ 'ನಾವು ಯಶೋದೆಯ ಶಿಶುವಿನ ಬಾಲ

ಲೀಲಾಕಥಾಸಿಂಧುವಿನಲ್ಲಿ ಕ್ರೀಡಿಸೋಣ ಎಂದು ಹೊರಟಿದ್ದಾನೆ. ಮಣ್ಣು ತಿಂದ ಬಾಯಲ್ಲಿ ಜಗವನ್ನೇ ತೋರಿಸಿದ ಕೃಷ್ಣನ ಅದ್ಭುತವಾದ ಬಾಲಲೀಲೆ :

ಕೃಷ್ಣೇನಾಂಬಗತೇನ ರಂತುಮಧುನಾ ಮೃದ್ಭಕ್ಷಿತಾ ಸ್ವೇಚ್ಛಯಾ
ತಥ್ಯಂ ಕೃಷ್ಣ ಕಏವಮಾಹ ಮುಸಲೀ ಮಿಥ್ಯಾಂಬ ಪಶ್ಯಾನನಂ
ವ್ಯಾದೇಹೀತಿ ವಿದಾರಿತೇ ಚ ವದನೇ ದೃಷ್ಟ್ವಾ ಸಮಸ್ತಂ ಜಗತ್
ಮಾತಾಯಸ್ಯ ಜಗಾಮ ವಿಸ್ಮಯಪದಂ ಪಾಯಾತ್ಸನಃ ಕೇಶವಃ[1]

ಎಂದು ವರ್ಣಿತವಾಗಿದೆ. ಅಂತೆಯೇ ಪುರಂದರದಾಸರು :

ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೊ
ದೊರಕದ ವಸ್ತುವು ದೊರಕಿತು ತಮಗೆಂದು
ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರೋ

–ಎಲ್ಲರಿಗೂ ದೊರಕದ ವಸ್ತುವು ತಮಗೆ ದೊರಕಿತಲ್ಲಾ ಎಂಬ ಆತ್ಮಸಂತೋಷದಿಂದ ಕೃಷ್ಣನನ್ನು ಭಕ್ತಿಯ ಆಶ್ರಯದಲ್ಲಿ ಸಿಲುಕಿಸಿಕೊಳ್ಳುತ್ತಾರೆ.

ಪುರಂದರರ ಕೃಷ್ಣನು ಎಂತಹವನು ಎಂಬುದನ್ನು ನೋಡೋಣ. ಮಣ್ಣು ತಿನ್ನುತ್ತಿದ್ದ ಬಾಲಕನಿಗೆ ಅನುನಯದಿಂದ ಬುದ್ಧಿಹೇಳಿ, ಜೋಗಿಬರುತ್ತಾನೆಂದು ಹೆದರಿಸಿ ಅವನ ಬಾಯಿ ತೆರೆಸಿದಳು, ಯಶೋದೆ. ಆಗ :

ಬಾಯಲಿ ಕಂಡಳು ಹದಿನಾಲ್ಕು ಲೋಕವ
ಕಾಯ ಮರೆತಳಯ್ಯ ಮರುಳಿಗೆ ವಶವಾಗಿ
ಮತ್ತು ಕಂಡಳು ಅವಳು ಗೋಕುಲವೆಲ್ಲವ
ಅತ್ತ ಕಂಡಳು ತನ್ನ ಕೃಷ್ಣನ ಬಗಲಲಿ

ಅಂತಹ ಅದ್ಭುತ ಬಾಲಕೇಳಿಯನ್ನು ತೋರಿಸಿದ್ದ ಕೃಷ್ಣ. ಮಣ್ಣು ತಿಂದ ಕೃಷ್ಣನನ್ನು ಇಬ್ಬರೂ ಹೀಗೆ ನೋಡಿದರೆ ಬೆಣ್ಣೆತಿಂದ ಕೃಷ್ಣ ಇವರಿಗೆ ಹೇಗೆ ಕಾಣಿಸಿದ್ದಾನೆ ನೋಡೋಣ.

---

[1] ಆಟವಾಡುತ್ತಿರುವಾಗ ಕೃಷ್ಣ ಚೆನ್ನಾಗಿ ಮಣ್ಣು ತಿಂದನು. ಇದನ್ನು ನೋಡುತ್ತಿದ್ದ ಬಲರಾಮ ತಾಯಿಯ ಹತ್ತಿರ ದೂರನ್ನು ಕೊಟ್ಟ. ತಾಯಿ ಪರೀಕ್ಷಿಸುವ ಸಲುವಾಗಿ ಕೃಷ್ಣನ ಬಾಯನ್ನು ತೆರೆಸಿ ನೋಡಿದರೆ ಅವಳಿಗೆ ಆಶ್ಚರ್ಯ ಕಾದಿತ್ತು. ಸಮಸ್ತ ಲೋಕವನ್ನೂ ಆ ಸಣ್ಣ ಬಾಯಲ್ಲಿ ಕಂಡಳು; ಸಂತಸಪಟ್ಟಳು; ವಿಸ್ಮಯಗೊಂಡಳು.

ಮಂಡಿಯನ್ನೂ ಎಡದ ಕೈಯನ್ನೂ ಮಡಿಸಿ ನೆಲದಲ್ಲಿರಿಸಿ ಬಲಗೈತಾವರೆಯಲ್ಲಿ ಬೆಣ್ಣೆಯ ಉಂಡೆಯನ್ನು ನೋಡುತ್ತಿರುವ ಬಾಗಿದ ಮೈಯ ಬಾಲಕೃಷ್ಣನನ್ನು ಲೀಲಾಶುಕ ದರ್ಶಿಸಿದ್ದಾನೆ :

ಆಕುಂಚಿತಂ ಜಾನುಕಂ ಚ ವಾಮಂ
ನ್ಯಸ್ಯಾವನೌ ದಕ್ಷಿಣ ಹಸ್ತಪದ್ಮೇ
ಆಲೋಕಯಂತಂ ನವನೀತ ಖಂಡಂ
ಬಾಲಂ ಭಜೇ ಕೃಷ್ಣಮುಪಾನತಾಂಗಮ್

ಅದೇ ಬೆಣ್ಣೆಯ ಕೃಷ್ಣನನ್ನು ಪುರಂದರರು ಅನೇಕ ಭಂಗಿಗಳಲ್ಲಿ ನೋಡಿದ್ದಾರೆ ;

ಮೊಸರು ಕಡೆವಲ್ಲಿ ಇವನ ಗಾಳಿ ಘನವಮ್ಮ
ಶಿಶುವಿನ ಕೈಯಲ್ಲಿ ಬೆಣ್ಣೆ ಉಳಿಗೊಡನಮ್ಮ
ಬೆಣ್ಣೆಯು ಕಂಡರಂತು
ಅದರ ರೂಪ ಕಣ್ಣಿಗೆ ತೋರನಲ್ಲ

ಎಂದು ಮುಂತಾಗಿ ದೂರಿದರೂ

ಪಾಡಿದವರಿಗೆ ಬೇಡಿದ ವರಗಳ
ನೀಡುತಲಿ ದಯಮಾಡುತಲಿ ನಲಿ
ದಾಡುತಲಿ ಬೆಣ್ಣೆ ಬೇಡುತಲಿ

ಇರುವ ಕೃಷ್ಣನನ್ನೂ ಕಂಡಿದ್ದಾರೆ, ಪುರಂದರದಾಸರು.

ಶ್ರೀ ಕೃಷ್ಣಕರ್ಣಾಮೃತದ ನಾಯಕ ಶ್ರೀಕೃಷ್ಣನ ಸೌಂದರ್ಯಾತಿಶಯ ಹೀಗಿದೆ :

ಕಸ್ತೂರೀತಿಲಕಂ ಲಲಾಟ ಫಲಕೇ ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂ ಕರೇ ಕಂಕಣಂ
ಸರ್ವಾಂಗೇ ಹರಿಚಂದನಂ ಚ ಕಲಯನ್ ಕಂಠೇಚ ಮುಕ್ತಾವಲಿಂ
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣಿಃ [1]

---

[1] ಹಣೆಯಲ್ಲಿ ಕಸ್ತೂರೀತಿಲಕವನ್ನು ಧರಿಸಿದವನೂ, ವಕ್ಷಸ್ಥಲದಲ್ಲಿ ಕೌಸ್ತುಭಮಣಿಯಿಂದ ಶೋಭಿತನಾಗಿರುವವನೂ, ಮೂಗಿನ ತುದಿಯಲ್ಲಿ ಮುತ್ತನ್ನು ಇರಿಸಿಕೊಂಡವನೂ, ವೇಣುಭೂಷಿತನಾಗಿಯೂ, ಮುಂಗೈಯಲ್ಲಿ ಕಂಕಣವನ್ನು ಧರಿಸಿದವನೂ, ಹರಿಚಂದನದಿಂದ ಲೇಪಿತನಾಗಿಯೂ, ಕಂಠದಲ್ಲಿ ಮುತ್ತಿನ ಮಾಲೆಯನ್ನು ಧರಿಸಿದವನೂ, ಗೋಪಕನ್ನಿಕೆಯರಿಂದ ಕೂಡಿದವನೂ ಆಗಿದ್ದಾನೆ ಗೋಪಾಲ ಚೂಡಾಮಣಿ.

ಪುರಂದರರ ಬಾಲಕೃಷ್ಣನ ಸೌಂದರ್ಯವೂ ಅತ್ಯದ್ಭುತವಾಗಿ ಮೂಡಿ ಬಂದಿದೆ :

ಕಾಶಿಪೀತಾಂಬರ ಕೈಯಲ್ಲಿ ಕೊಳಲು
ಪೂಸಿದ ಶ್ರೀಗಂಧ ಮೈಯೊಳಗಮ್ಮ
ಲೇಸಾಗಿ ತುಲಸಿಯ ಮಾಲೆಯ ಹಾಕಿದ......
ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ
ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ
ಅರಳೆಲೆ ಕನಕದ ಕುಂಡಲ ಕಾಲಂದುಗೆ......
ಕಾಲಲ್ಲಿ ಕಿರುಗೆಜ್ಜೆ ನೀಲದ ಬಾವುಲಿ
ನೀಲವರ್ಣನು ನಾಟ್ಯವಾಡುತಲಿ
ಮೇಲಾಗಿ ಬಾಯಲ್ಲಿ ಜಗವನು ತೋರಿದ
ಮೂಲೋಕದೊಡೆಯ ......
ಕುಂಕುಮ ಕಸ್ತೂರಿ ಕೂಡಿ ಕೂಡಿ ನಾಮವು
ಶಂಖ ಚಕ್ರಂಗಳ ಧರಿಸಿಹನಮ್ಮ
ಬಿಂಕದಿಂದಲಿ ಕೊಳಲೂದುತ ಪಾಡುತ
ಪಂಕಜಾಕ್ಷನು......
ಹದಿನಾರು ಸಾವಿರ ಗೋಪಿಯರೊಡಗೂಡಿ
ಚದುರಂಗ ಪಗಡೆಯನಾಡುವನಮ್ಮ
........................
ಮದನಮೋಹನರೂಪ ಎದೆಯಲ್ಲಿ ಕೌಸ್ತುಭ
ನೊಸಲ ಸುತ್ತಿದ ಪಟ್ಟಿ ನಡುವಿನ ವಡ್ಯಾಣ
ಎಸೆವ ಕಸ್ತೂರಿ ಬಟ್ಟುಮೈಯವನಮ್ಮ

ಹೀಗೆ, ಸ್ವಲ್ಪ ಹೆಚ್ಚುಕಡಿಮೆ ಇಬ್ಬರಲ್ಲೂ ಶ್ರೀಕೃಷ್ಣನ ಚಿತ್ರಣ ಒಂದೇ ರೀತಿಯಲ್ಲಿ ಬರುತ್ತದೆ.

ಪರಮಮುಪದೇಶಮಾದ್ರಿಯಧ್ವಂ
ನಿಗಮವನೇಷು ನಿತಾಂತ ಚ ರಖಿನ್ನಾಃ
ವಿಚಿನುತ ಭವನೇಷು ವಲ್ಲರೀನಾಂ
ಉಪನಿಷರ್ಥದ ಮುಲೂಖಲೇ ನಿಬದ್ಧಂ

ಯಾವ ಉಪನಿಷತ್ತಿಗೂ ಸಿಲುಕದ ಪರವಸ್ತುವನ್ನು ಗೊಲ್ಲತಿಯರ ಮನೆಯ ಒರಳಿಗೆ ಕಟ್ಟಿಹಾಕಿದೆ. ಪರಮಾತ್ಮ ಎಷ್ಟು ಭಕ್ತಪರಾಧೀನ ಎಂಬುದನ್ನು ಇದು ತಿಳಿಸುತ್ತದೆ.

ಪುರಂದರರ ಕೃಷ್ಣನೂ ಕೂಡ ‘ಅಣುರೇಣುವೆಂಬ ಚಿನ್ಮಯ ಮೂರುತಿಯು. ಮುನಿಗಳ ಹೃದಯದೊಳು ಮಿಸುಗುವ ಮೂರುತಿಯು... ಆರು ಹತ್ತುಸಾವಿರ ಗೋಪ ನಾರಿಯರನು ಕೂಡಿದ ಮಾರನಯ್ಯನು.’

ಅನಂತವೇದ ಸಮೂಹಗಳಿಂದಲಿ
ಅಜಾದಿಸುರರು ಅರಸಲೇತಕ್ಕಿನ್ನು ?
ಆ ನಂದ ಯಶೋದೆಯರಮನೆಯಲ್ಲಿ
ವೃಂದಾವನದಿ ಆಣಿಸಿಕೊಂಡನವ್ವ

ಇಂತಹ ಕೃಷ್ಣ ಪರಮಾತ್ಮ

ಸೋಽಯಂ ಮುನೀಂದ್ರಜನಮಾನಸತಾಪಹಾರೀ
ಸೋಽಯಂ ಮದವ್ರಜವಧೂವಸನಾಪಹಾರೀ
ಸೋಽಯಂ ತೃತೀಯಭುವನೇಶ್ವರದರ್ಪಹಾರೀ
ಸೋಽಯಂ ಮದೀಯಹೃದಯಾಂಬುರುಹಾಪಹಾರೀ[1]

ಶ್ರೀಕೃಷ್ಣಮೂರ್ತಿಯ ಅನೇಕ ವಿಧವಾದ ರೂಪವನ್ನು ಕಡೆದು ಕಡೆದು ಲೀಲಾಶುಕ ನಮ್ಮ ಮುಂದೆ ಇರಿಸುತ್ತಾನೆ. ಪ್ರತಿಯೊಂದು ಚಿತ್ರವೂ ಸೂಕ್ಷ್ಮವಾಗಿದೆ. ಪ್ರತಿಯೊಂದೂ ಆಸ್ವಾದ್ಯಯೋಗ್ಯವಾಗಿದೆ.

“ಒಂದು ದೃಷ್ಟಿಯಿಂದ ಕೃಷ್ಣಕರ್ಣಾಮೃತವೂ ಗೀತಗೋವಿಂದವೂ ಒಂದಕ್ಕೊಂದು ಪೂರಕವಾಗಿರುವಂತಿವೆ. ವೃಂದಾವನ ವಿಹಾರಿಯಾದ ಕೃಷ್ಣನ ವಿವಿಧ ಮುಖಗಳನ್ನು ಕೃಷ್ಣಕರ್ಣಾಮೃತದಲ್ಲಿ ಕಾಣಬಹುದು. ಕಿಶೋರ ಕೃಷ್ಣನ ಲೀಲೆಗಳು ಮೈದುಂಬಿರುವುದನ್ನು ಇಲ್ಲಿ ಕಾಣಬಹುದು. ರಾಧಾರಸಿಕನಾದ ಪ್ರಣಯಿ ಕೃಷ್ಣನ ಶೃಂಗಾರ ಮನೋಧರ್ಮವು ಗೀತಗೋವಿಂದದ ಮುಖ್ಯ ರಸ. ಭಾವುಕರು ಬೇಕೆಂದರೆ ಕೃಷ್ಣಚರಿತ್ರೆಯ ಪೂರ್ವಾರ್ಧವು ಕೃಷ್ಣಕರ್ಣಾಮೃತವೆಂದೂ, ಉತ್ತರಾರ್ಧವು ಗೀತಗೋವಿಂದವೆಂದೂ ಕಂಡುಕೊಳ್ಳ

[1] ಎಲ್ಲ ಮುನೀಂದ್ರರ ಮನಸ್ಸಿನ ತಾಪವನ್ನು ನಿವಾರಿಸಿದವನು ಸಕಲಗೋಪವನಿತೆಯರ ಬಟ್ಟೆಗಳೆಲ್ಲವನ್ನು ಅಪಹರಿಸಿದವನು ಇಂದ್ರನ ದರ್ಪವನ್ನು ಅಪಹರಿಸಿದವನು, ಅಷ್ಟೇ ಅಲ್ಲ ಹೃದಯವನ್ನು ಕದ್ದವನು ಆಗಿದ್ದಾನೆ.

ಬಹುದು''[1] ಆದುದರಿಂದಲೇ ಇಲ್ಲಿ ಈ ಎರಡು ಕಾವ್ಯಗಳನ್ನು ಪರಿಚಯಿಸ ಲಾಗಿದೆ.

ಪುರಂದರದಾಸರ ರಚನೆಗಳಲ್ಲಿ ಕೃಷ್ಣಲೀಲೆಯನ್ನು ಕುರಿತು ಅನೇಕ ಪದಗಳಿದ್ದರೂ, ಕೃಷ್ಣನ ಬಾಲಲೀಲೆ ಅವರ ಮನಸ್ಸನ್ನು ಹೆಚ್ಚಾಗಿ ಸೆಳೆದಿದೆ. ಈ ಪದಗಳಲ್ಲಿ ವಿಶೇಷವಾದ ಮೋಹಕತೆ ಇದೆ. ಹರಿದಾಸರು ಭಾಗವತಪುರಾಣ ವನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ. ಕೃಷ್ಣಭಕ್ತಿಯ ಸೀಮೆಯಲ್ಲೇ ಹರಿದಾಸ ಪಂಥ ಬೆಳೆಯಿತು. ಆದ್ದರಿಂದ ಕೃಷ್ಣನ ಕಥೆಗಳಿಗೆ ಭಾಗವತಪುರಾಣ, ವಿಷ್ಣು ಪುರಾಣ, ಹರಿವಂಶ ಇವೇ ಆಕರವಾಗಿವೆ.

ಲೀಲಾಶುಕ, ಜಯದೇವ, ಪುರಂದರದಾಸರು ಈ ಮೂವರಲ್ಲೂ ಇರುವ ಸಮಾನ ಭಾವನೆಗಳನ್ನು ಗಮನಿಸಿದರೆ ಅವು ಒಂದಕ್ಕೊಂದು ಪೂರಕವೇ ಆಗಿ ರುವಂತಿವೆ. ಎಲ್ಲವೂ ಭಕ್ತಿಯ ಪರಾಕಾಷ್ಠೆಯ ಮೇಲೇ ನಿಂತಿವೆ. ಯಶೋದೆಯ ಭಾಗ್ಯ, ಗೋಪಿಯರ ಮನೋಭಾವಗಳು, ಶ್ರೀಕೃಷ್ಣನ ಬಾಲ ಲೀಲೆಗಳು, ದಶಾವತಾರಗಳು, ತುಂಟ ಕೃಷ್ಣ ಹೀಗೆ ಅನೇಕ ರೀತಿಯ ಚಿತ್ರಣ ಗಳು ಸಮಾನವಾಗಿಯೇ ಕಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಭಿನ್ನ ವಾಗಿರುವೂ ಕಾಣುತ್ತವೆ ಗೀತಗೋವಿಂದದಲ್ಲಿಯಾದರೋ ರಾಧೆಯ ವಿಲಾಸ ವಿಭ್ರಮಗಳು ಮಾತ್ರವೇ ತುಂಬಿವೆ. ಇವುಗಳನ್ನು ಪುರಂದರದಾಸರ ಗೋಪಿಕೆ ಯರೊಡನೆ ಮಾತ್ರ ಹೋಲಿಸಬಹುದು; ರಾಧೆಗೆ ಬದಲಾಗಿ ಗೋಪಿಯರನ್ನು ಇರಿಸಬೇಕು ಅಷ್ಟೆ. ಇಲ್ಲೆಲ್ಲಾ ಗೋಪಸ್ತ್ರೀಯರು 'ಜೀವ'ವಾದರೆ ಶ್ರೀಕೃಷ್ಣ 'ಈಶ್ವರ'. ಆದ್ದರಿಂದಲೇ ಉಪನಿಷತ್ತಿನ ಅರ್ಥವನ್ನು ಇಲ್ಲಿ ಕಾಣಬಹುದು. ಆಗ ಆಂಡಾಳ್ (ಗೋದಾದೇವಿಯ) ಮಾತು 'ಉನ್ ತನ್ನೋಡುರವೇಲ್ ನಮಕ್ಕುಂಗೊಳಿಕ್ಕವೊಳಿಯಾದು' ಅಂದರೆ ಭಗವಂತನೊಂದಿಗೆ ಬೆಳೆದ ನಂಟನ್ನು ಬಿಡುವುದು ಅಸಾಧ್ಯ. ಆದ್ದರಿಂದ ನಾವೆಲ್ಲ 'ಅರಿಯಾದಪಿಳ್ಳೈಗಳೋಂ' (ಅರಿಯದ ಮಕ್ಕಳು) ಎಂದು ತಿಳಿಸಿ ಭಗವಂತನೊಡನೆ ತಾವು ಎಂತಹ ಸಂಬಂಧವನ್ನು ಹೊಂದಿದ್ದೇವೆಂದು ತಿಳಿಸುತ್ತಾರೆ. ಇದೇ ಮನೋಧರ್ಮ ಗೀತಗೋವಿಂದದಲ್ಲಿಯೂ ಕಾಣಸಿಗುತ್ತದೆ. ಪುರಂದರರು, ಲೀಲಾಶುಕರು ಕೂಡ ಇದನ್ನೇ ನುಡಿದು ತೋರಿಸುತ್ತಾರೆ. ಇಂತಹ ಮಧುರರತಿಯ ಭಾವನೆ ಯನ್ನೇ ಸ್ಪಷ್ಟಪಡಿಸಿದ ಅನೇಕ ಕಾವ್ಯಗಳು ಸಂಸ್ಕೃತದಲ್ಲಿ ಇವೆ. ಬೃಂದಾವನ ದಾಸ ಗೋಸ್ವಾಮಿಯ 'ರಾಸಕಲ್ಪಸಾರತತ್ತ್ವ' ರುದ್ರನ್ಯಾಯವಾಚಸ್ಪತಿಯ 'ಬೃಂದಾವನವಿನೋದ', ಶ್ರೀಧರಸ್ವಾಮಿಯ 'ವ್ರಜವಿಹಾರ' ಅನನ್ಯದಾಸರ

---

[1] ಗೀತಗೋವಿಂದ, ಎಸ್. ಕೆ. ರಾಮಚಂದ್ರರಾವ್, ಪು.೬

'ರಸಕೃಷ್ಣಮಾಧುರೀ', ಲೋಲಂಬರಾಜನ 'ಸುಂದರದಾಮೋದರ', ಹರಿವಂಶಗೋಸ್ವಾಮಿಯ 'ರಾಧಾರಸಸುಧಾನಿಧಿ', ನಂದಕುಮಾರನ 'ರಾಧಾಮಾನ ತರಂಗಿಣಿ', ಕೃಷ್ಣದತ್ತನ 'ರಾಧಾರಹಸ್ಯ', ರಾಮಚಂದ್ರ ಕವಿಯ 'ರಾಧಾವಿನೋದ', ಸುಬಲಚಂದ್ರನ 'ರಾಧಾಸೌಂದರ್ಯಮಂಜರಿ' ಇವೇ ಮುಂತಾದ ಅನೇಕ ಕೃತಿಗಳು ರಾಧಾತತ್ವವನ್ನು ತಿಳಿಸಿದರೂ 'ರಾಧಾಮಾಧವರಸ'ವನ್ನೇ ಮುಖ್ಯವಾಗಿ ಹೊಂದಿದ್ದರೂ ಕೃಷ್ಣನ ಅನೇಕಾನೇಕ ಚಿತ್ರಗಳನ್ನು ಕಂಡರಿಸಿವೆ. ಹಾಗೆಯೇ ಪುರಂದರದಾಸರು ಕೃಷ್ಣಭಕ್ತಿಗೆ ತಮ್ಮನ್ನು ಮೀಸಲಿರಿಸಿ ಶ್ರೀಕೃಷ್ಣನ ಬಗೆಬಗೆಯ ಚಿತ್ರಣವನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸಿದ್ದಾರೆ.

# ಅನುಬಂಧ

## ಅಂಕಿತ ನಾಮಗಳ ಶಬ್ದ ಸೂಚಿ


ಅಕ್ಕಮಹಾದೇವಿ. ಪುಟ ಸಂಖ್ಯೆ ; ೧೦
೨೭ ೪೫ ೪೬ ೧೨೧
ಅಚ್ಯುತ ೩೨ ೬೮ ೧೨೦ ೧೪೭
ಅಜಾಮಿಳ ೧೩೧
ಅದ್ವೈತ ಆಚಾರ್ಯ ೧೪೯
ಅದ್ವೈತ ಪಂಡಿತ ೧೩೯
ಅನನ್ಯದಾಸ ೧೬೫
ಅನಂತ ೧೪೭
ಅನ್ನಮಾಚಾರ್ಯ (ಅನ್ನಮಯ್ಯ)
೪ ೧೨ ೫೯ ೬೦ ೬೧ ೬೨ ೬೩
೬೫ ೬೭ ೬೮ ೬೯
ಅಪ್ಪರ್ ೮೯
ಅಭಿನವ ೯೮
ಅರ್ಜುನ ೭೮ ೧೨೯
ಅರುಣಗಿರಿನಾಥ ೧೦
ಅಲ್ಲಮಪ್ರಭು (ಅಲ್ಲಮ) ೧೦ ೪೫ ೪೬
ಅಕ್ಷೋಭ್ಯತೀರ್ಥ ೮೩
ಆದಯ್ಯ ೮೨
ಆದಿಕೇಶವಸ್ವಾಮಿ ೨೩
ಆಂಡಾಳ್ (ಗೋದಾ, ಗೋದಾದೇವಿ) ೯ ೧೦
೨೨ ೨೬ ೨೭ ೩೯ ೧೨೧ ೧೬೫
ಇಬ್ರಾಹೀಂ ಲೋದಿ ೧೧೧
ಈಶ್ವರ ೫ ೨೫ ೮೫ ೧೦೫ ೧೬೫
ಈಶ್ವರಪುರೀ ೧೪೩ ೧೪೪
ಈಶಾನ್ಯಗುರು ೪೩
ಉಡೈನಂಗೈಯಾರ್ ೨೫
ಎಳುತ್ತಚ್ಚನ್ ೨ ೭೬ ೭೭ ೭೮ ೭೯ ೮೧
ಏಕನಾಥ ೨ ೧೪ ೮೮ ೯೧ ೯೪ ೯೫
ಏಗಂಟಿ ಲಕ್ಷ್ಮಯ್ಯ ೫೯
ಕನಕದಾಸರು ೨೮ ೫೧ ೭೯
ಕಪಿಲಮಹರ್ಷಿ ೨೯
ಕಬೀರ್ ೧ ೩ ೪ ೧೭ ೧೮ ೯೭ ರಿಂದ
೧೧೧ ೧೧೬ ೧೨೧
ಕಮಲ ೨೨
ಕಮಳನಾಭತೀರ್ಥ ೮೫
ಕಮಾಲ್ ೧೦೦
ಕಮಾಲಿ ೧೦೦
ಕಲ್ಪವೃಕ್ಷ ೧೫೫
ಕಲಿಯುಗ ೮೦
ಕಲ್ಕಿ ೧೬೦
ಕವಿಕರ್ಣಪೂರ ೧೪೫
ಕಂಚರ್ಲ ಗೋಪನ್ನ (ಭದ್ರಾಚಲ ರಾಮದಾಸ) ೫೯
ಕಂಚಿ ೨೫
ಕಂಸ ೬೯
ಕಾನ್ಹೋಪಾತ್ರ (ಕಾನ್ಹೋಬಾ) ೨ ೯೬
ಕಾಮಜನಕ ೩೪
ಕಾಮಧೇನು ೧೫೫
ಕಾವೇರಿ ೮೯
ಕಾಳಿಂಗ ೬೪ ೧೨೭
ಕಾಳಿಂಗ ಮರ್ದನ ೧೨೪
ಕೀಲಕ ೮೬
ಕುಚೇಲ ೭೫

ಕುಮುದವಲ್ಲಿ ೨೯ ೩೦
ಕುಲಶೇಖರಾಳ್ವಾರ್ ೯ ೨೨ ೧೫೩
ಕಾಂತಿ ೬೪
ಕೂರ್ಮ ೧೫೯
ಕೃತ್ತಿಕಾ ೨೯
ಕೃಷ್ಣ (ಶ್ರೀಕೃಷ್ಣ, ಬಾಲಕೃಷ್ಣ) ೨ ೭
೧೦ ೧೨ ೧೪ ೧೭ ೧೯ ೨೦ ೨೬ ೨೭
೩೨ ೩೪ ೩೯ ೪೦ ೪೧ ೫೭ ೬೪ ೬೫
೭೩ ೭೪ ೭೮ ೭೯ ೮೦ ೧೦೮ ೧೧೩
ರಿಂದ ೧೩೦ ೧೩೫ ೧೩೭ ೧೩೮ ೧೪೦
೧೪೧ ೧೪೨ ೧೪೫ ೧೪೬ ೧೪೭ ೧೪೯
ರಿಂದ ೧೬೧ ೧೬೩ ೧೬೪ ೧೬೫
ಕೃಷ್ಣದತ್ತ ೧೬೫
ಕೃಷ್ಣದಾಸಕವಿರಾಜ ೧೪೪
ಕೃಷ್ಣಪ್ಪನಾಯಕ ೯೮
ಕೃಷ್ಣಮಾಚಾರ್ಯ ೧೧ ೫೯ ೬೨
ಕೃಷ್ಣಾ ೪೧
ಕೇಶವ ೩೨ ೧೫೭ ೧೬೦ ೧೬೧
ಕೇಶವಭಾರತಿ ೧೪೦ ೧೪೩
ಕೇಶವರಾವ್ ದೇಶಮುಖ ೯೬
ಕೇಶಿ ೧೫೬
ಕೌಮೋದಕೀ ೨೩
ಗಜೇಂದ್ರ ೩೮
ಗರ್ಗ ೫
ಗರುಡ ೨೬
ಗಹಿನೀನಾಥ ೯೦
ಗಂಗಾಂಬಿಕೆ ೪೧ ೪೬
ಗಾಂಧೀಜಿ ೧೪
ಗಿರಿಧರಗೋಪಾಲ (ಗಿರಿಧರನಾಗರಪ್ರಭು, ಗಿರಿಧರ ಲಾಲ) ೧೧೩ ೧೧೫ ೧೧೭ ೧೧೮ ೧೨೦
ಗಿರಿರಾಜ ೬೦
ಗುಪ್ತಭಕ್ತಿಯರಿ ಮಂಚಣ್ಣ ೮೨ ೮೩ ೮೬
ಗುರುನಾನಕ್ (ನಾನಕ್) ೧೬ ೧೭
ಗುರುಮಧ್ವಪತಿ ೯೮
ಗುರುರಾಯ ೯೮
ಗೋದಾವರಿ ೮೯
ಗೋಪಣ್ಣ ೮೫
ಗೋಪಾಲಚೂಡಾಮಣಿ ೧೬೧
ಗೋಪಾಲಭಟ್ಟ ೧೪೫
ಗೋಪಾಲ ದೇವಣ್ಣ ೮೫
ಗೋವರ್ಧನಗಿರಿ ೬೪ ೬೫ ೭೪
ಗೋವಿಂದ ೩೪ ೩೯ ೬೫ ೬೮ ೧೦೪ ೧೪೩
೧೫೨ ೧೫೭
ಗೋವಿಂದದೀಕ್ಷಿತ ೬೦.
ಗೋರಕ್ಷನಾಥ ೯೦
ಗೋರಾಕುಂಭಾರ್ ೧೩
ಗೋಸ್ವಾಮಿ ವಿಟ್ಠಲನಾಥ ೧೧೫ ೧೨೨
ಗೌರಾಂಗ ೧೩೯
ಗೌರಾಂಗಪ್ರಭು ೧೪೩
ಚಕ್ರಧರ ೮೯
ಚೆನ್ನಬಸವಣ್ಣ ೪೫ ೪೬
ಚಾತುರ್ವರ್ಣಸ್ಕ ಮಹಾರಾಜ್ ೯೬
ಚಾಂದ್ ಖಾಜಿ ೧೪೦
ಚಿತ್ರಾ ೫೨
ಚಿನತಿರುಮಲಾಚಾರ್ಯ (ಚಿನ್ನನ್ನ) ೫೯ ೬೨
ಚೆರುಶ್ಶೇರಿ ೨ ೪ ೧೨ ೭೧ ೭೨ ೭೪ ೮೧
ಚೈತನ್ಯ (ಶ್ರೀಕೃಷ್ಣಚೈತನ್ಯ, ಚೈತನ್ಯದೇವರು)
೨ ೩ ೪ ೨೦ ೧೪೮ ೧೪೯ ೧೫೦
ಚೋಖಾಮೇಳಾ ೧೩
ಚಂಡೀದಾಸ ೨೦ ೧೪೫ ೧೪೯
ಚಂದನ ೧೫೭
ಚಂದ್ರ ೮ ೧೬ ೧೦೮ ೧೫೭
ಜಗನ್ನಾಥಮಿಶ್ರ ೧೩೯

ಜಯದೇವ ೨ ೪ ೧೪ ೧೯ ೨೦ ೨೬ ೧೪೫ ೧೪೯ ೧೫೧ ೧೫೨ ೧೫೩ ೧೫೮ ೧೫೯ ೧೬೦ ೧೬೫
ಜಯಧರ್ಮ ೧೪೫
ಜಯಧ್ವಜ ೧೪೫
ಜಸುಮತಿ (ಯಶೋದಾ, ಯಶೋದೆ) ೬೯ ೭೩ ೧೦೮ ೧೧೭ ೧೨೩ ೧೨೪ ೧೨೫ ೧೪೭
ಜಂಬುಕೇಶ್ವರ ೮೬
ಜಾಹ್ನವಿ ೩೫
ಜ್ಞಾನೇಶ್ವರ (ಜ್ಞಾನದೇವ) ೧ ೧೩ ೮೭ ೮೮ ೮೯ ೯೦ ೯೨ ೯೩ ೯೪
ಜೀವಗೋಸ್ವಾಮಿ ೧೧೫ ೧೪೫
ಜೇಷ್ಠಾ ೨೭
ಡೋಹರ ಕಕ್ಕಯ್ಯ ೪೫
ತಾಮ್ರಪರ್ಣೀ ೨೫
ತ್ಯಾಗರಾಜ ೨ ೬೦ ೧೫೦
ತಿರುಜ್ಞಾನ ಸಂಬಂಧರ್ ೮
ತಿರುಪ್ಪಾಣಾಳ್ವಾರ್ ೯ ೨೨ ೨೮ ೨೯
ತಿರುಮಳಿಶೈಆಳ್ವಾರ್ ೯ ೨೨ ೨೪
ತಿರುಮೂಲರ್ ೮
ತಿರುಮಂಗೈ ಆಳ್ವಾರ್ ೯ ೨೨ ೨೯ ೩೦ ೩೧ ೩೭
ತಿರುವಾಳ ೨೪
ತಿರುವೇಂಗಳಪ್ಪ ೩೫
ತುಕಾರಾಮ (ತುಕಾರಾಂ) ೨ ೪ ೧೪ ೮೮ ೯೨ ೯೫ ೯೬
ತುಲಸೀದಾಸ್ ೧ ೧೧೬ ೧೧೭
ತುಲಾ ೨೩
ತೈಲಪ ೪೩
ತ್ರೈಲೋಕ್ಯಭೂಷಣ ೮೪
ತೊಂಡ(ಡಿ)ರಡಿಪ್ಪೊಡಿಆಳ್ವಾರ್ (ವಿಪ್ರನಾರಾಯಣ, ಭಕ್ತಾಂಘ್ರಿರೇಣು) ೯ ೨೨ ೨೭ ೨೮
ದಶರಥ ೧೦೮
ದಾದಾಮಹಾರಾಜ್ ಸಾತಾರ್‌ಕರ್ ೯೬
ದಾಮಾಜಿಪಂತ್ ೨
ದಾಮೋದರ ೧೬೦
ದುರ್ಮತಿ ೨೮
ದೇವದೇವಿ ೨೮
ದೇವ(ಜೇಡ)ರ ದಾಸಿಮಯ್ಯ ೧೦ ೪೫ ೪೬
ದೇವರಾಜ ೪೩
ದೇವೇಂದ್ರ ೬೫
ಧನಿಷ್ಠಾ ೨೩
ನಮ್ಮಾಳ್ವಾರ್ (ಶಠಕೋಪ, ಮಾರನ್, ವಕುಳಾಭರಣ) ೯ ೨೨ ೨೫ ೨೬ ೩೦ ೩೭
ನ(ನಾ)ರಸಿಂಹ ೩೮ ೩೯ ೪೦ ೪೧ ೧೫೯
ನರಸಿಂಹಮೆಹತಾ ೨ ೧೪ ೧೨೧
ನರಹರಿತೀರ್ಥ ೮೩ ೮೫
ನರಹರಿ ಸೋನಾರ್ ೧೩
ನಳ ೨೯
ನಂದ ೧೨೪ ೧೬೪
ನಂದಕುಮಾರ ೧೬೫
ನಂದದಾಸ ೧೯
ನಾಗಮ್ಮ ೪೧
ನಾಗಶಯನ ೧೩೦
ನಾದ(ಥ)ಮುನಿ ೧೦
ನಾಮದೇವ ೨ ೧೩ ೧೪ ೮೮ ೯೧ ೧೨೧
ನಾರದ (ನಾರದಮಹರ್ಷಿ) ೫ ೫೭ ೭೪ ೯೮ ೧೧೭
ನಾರಾಯಣ ೩೧ ೩೩ ೩೭ ೫೬ ೭೮
ನಾರಾಯಣಸೂರಿ ೬೦
ಸತ್ಯಾನಂದ ೧೩೯
ನಿಮಾಯಿ ೧೩೯
ನಿವೃತ್ತಿನಾಥ ೯೦
ನೀಮಾ ೯೯
ನೀರೂ ೯೯

ನೀರೇಜನಾಭ ೮೫
ನೀರಜನಾಭ ವ್ರತಪತಿ ೮೪
ನೀಲಾಂಬಿಕೆ ೪೧ ೪೬
ನೀಲಿ ೧೬೦
ನೀಳೋಬಾ ೯೬
ನೂಂಡ್ ೧೫
ಪಟ್ನಂ ಸುಬ್ರಹ್ಮಣ್ಯಯ್ಯರ್ ೬೦
ಪದ್ಮ ೨೬
ಪದ್ಮಾವತಿ ೧೫೨ ೧೫೩
ಪದ್ಮನಾಭತೀರ್ಥ ೮೩ ೮೪ ೮೫
ಪರಶುರಾಮ ೧೫೯
ಪರಿಸಾಭಾಗವತ್ ೧೩
ಪಂಗಯಚ್ಚಲ್ವೆ ೨೪
ಪಂಢರಿರಾಯ ೯೩
ಪಂಪ ೪
ಪ್ರಭವ ೨೭
ಪ್ರಮಾಧಿ ೨೫
ಪ್ರಹ್ಲಾದ ೧೩೧
ಪಾಣಿನಿ ೬
ಪಾಲ್ಕುರಿಕೆ ಸೋಮನಾಥ ೧೧
ಪ್ರಾ.ಶಂ.ಮಾ. ದಾಂಡೇಕರ್ ೯೬
ಪುನರ್ವಸು ೨೬
ಪುರಂದರದಾಸರು ೪ ೫ ೧೧ ೧೨ ೧೩
೧೯ ೨೨ ೫೬ ೫೭ ೫೯ ೬೧ ೬೨
೬೩ ೬೫ ೬೭ ೬೮ ೬೯ ೭೦ ೭೨ ೭೩
೭೪ ೭೫ ೭೯ ೮೦ ೮೧ ೮೨ ೯೭ ರಿಂದ
೧೧೨ ೧೧೭ ರಿಂದ ೧೫೦ ೧೫೨ ರಿಂದ
೧೫೬ ೧೬೦ ೧೬೩ ೧೬೪ ೧೬೫
ಪುರುಷಾಮೃಗ ೬೪
ಪುಂಡರೀಕಾಕ್ಷ ೧೩೦
ಪುಂಡಲೀಕ ೧ ೮೭ ೮೮ ೯೨ ೯೩
ಪೂತತ್ತಾಳ್ವಾರ್ ೯ ೨೨ ೨೩ ೩೧ ೩೪
ಪೂತನೀ ೩೮
ಪೂಂತಾನಂ ನಂಪೂತಿರಿ (ಪೂಂತಾನಂ)೭೯ ೮೦ ೮೧
ಪೆದತಿರುಮಲಾಚಾರ್ಯ ೫೯
ಪೆರಿಯಾಳ್ವಾರ್ (ಭಟ್ಟನಾಥರು, ವಿಷ್ಣುಚಿತ್ತರು)
೯ ೧೦ ೨೨ ೨೬ ೨೭
ಪೇಯಾಳ್ವಾರ್ ೯ ೨೨ ೨೩ ೩೩ ೩೮
ಪೊಯ್‌ಗೈ ಆಳ್ವಾರ್ ೯ ೨೨ ೨೩ ೨೪ ೩೧ ೩೨
೩೩ ೩೮
ಪೋತನ ೨ ೧೨
ಫಣಿಶಯನ ೧೨೬
ಬಲದೇವ ೪೧
ಬಲದೇವ ವಿದ್ಯಾಭೂಷಣ ೧೪೩
ಬಲರಾಮ ೧೨೩ ೧೨೬
ಬಲ್ಲಾಳಸೇನ ೧೫೨
ಬಲಿ ೧೫೯
ಬಸವೇಶ್ವರ (ಬಸವಣ್ಣ) ೮ ೧೦ ೪೨ ೪೬
೪೭ ೪೮ ೫೨ ೫೪ ೫೫ ೫೬ ೫೭ ೮೨
ಬಂಕಟಸ್ವಾಮಿ ೯೬
ಬ್ರಹ್ಮಪುತ್ರಾ ೨೦
ಬಾಬರ್ ೧೧೪
ಬಿಜ್ಜಳ ೪೩ ೪೭
ಬುದ್ಧ ೧೬೦
ಬೃಂದಾವನಗೋಸ್ವಾಮಿ ೧೬೫
ಬೊಮ್ಮ ೧೦೮
ಭವಾನಿ ೧೧೩
ಭಾನುದಾಸ ೮೮ ೯೧
ಭೀಮ ೪೧ ೬೪
ಭೂದೇವಿ ೨೭
ಭೃಗು ೨೪
ಭೋಜದೇವ ೧೫೨
ಭೋಜರಾಜ ೧೧೩ ೧೧೪
ಮಚ್ಛೇಂದ್ರನಾಥ ೯೦

ಮಡಿವಾಳ ಮಾಚಯ್ಯ ೪೯
ಮತ್ಸ್ಯ ೧೫೯
ಮಥುರಾ ೨೫
ಮದನಗೋಪಾಲ ೧೫೬
ಮಧ್ವಾಚಾರ್ಯ (ಮಧ್ವ, ಮಧ್ವರಾಯ, ಮಧ್ವ ಮುನಿ, ಆನಂದತೀರ್ಥ) ೭ ೩೪ ೪೧ ೫೦ ೫೨ ೮೩ ೮೪ ೮೯ ೧೩೨ ೧೩೮ ೧೪೦ ೧೪೫ ೧೪೬
ಮಧುರಕವಿ (ಆಳ್ವಾರ್) ೧೦ ೨೨ ೨೫ ೩೭ ೪೧
ಮಧುವರಸ ೪೭
ಮಧುಸೂದನ ೧೦೪
ಮನ್ಮಥ ೧೫೭
ಮಲಪ್ರಭಾ ೪೧
ಮಲ್ಲಪ್ಪ ವಾಸಕರ್ ೯೬
ಮಲ್ಲಿಕಾರ್ಜುನ ಪಂಡಿತ ೧೧
ಮಹಮದ್ ಬಿನ್ ತುಗಲಖ್ ೧೦೧
ಮಾಣಿಕ್ಯ ವಾಚಕರ್ ೯
ಮಾದರ ಚನ್ನಯ್ಯ ೪೫
ಮಾದರಸ ೪೩
ಮಾದಲಾಂಬೆ ೪೩
ಮಾಧವ ೩೧ ೧೩೦ ೧೫೧ ೧೫೨ ೧೫೩ ೧೫೫ ೧೫೬ ೧೬೦
ಮಾಧವತೀರ್ಥ ೮೩
ಮಾಧವಾರ್ಯ ೮೪ ೮೫
ಮಾಧವೀ ೨೩
ಮಾಧವೇಂದ್ರಪುರೀ ೧೪೩ ೧೪೪
ಮಾರನಯ್ಯ ೧೫೬
ಮೀರಾ (ಮೀರಾಬಾಯಿ) ೧ ೩ ೪ ೨೭ ೧೧೨ ರಿಂದ ೧೨೧
ಮುಕ್ತಾಯಕ್ಕ ೪೬
ಮುಕುಂದ ೩೪ ೬೮ ೧೦೪
ಮುಕುಂದಾಚಾರ್ಯ ೨೬
ಮುತ್ತಯ್ಯ ಭಾಗವತರ್ ೬೦
ಮುತ್ತುಸ್ವಾಮಿ ದೀಕ್ಷಿತ ೬೦
ಮುನಿಪಲ್ಲೆ ಸುಬ್ರಹ್ಮಣ್ಯ ೫೯
ಮುರಾರಿ ೧೦೪
ಮುರುಗನ್ ೮
ಮೈಸೂರು ವಾಸುದೇವಾಚಾರ್ಯ ೬೦
ಯಥೋಕ್ತಕಾರಿ ಸ್ವಾಮಿ ೨೨
ಯಮುನೆ ೧೫೫
ಯಶೋದೆ ೧೬೦ ೧೬೧ ೧೬೪ ೧೬೫
ರಖುಮಾದೇವಿ ೯೩
ರಘುನಾಥದಾಸ ೧೪೫
ರಘುನಾಥನಾಯಕ ೬೦
ರತ್ನಸಿಂಹ ೧೧೨ ೧೧೩ ೧೧೪
ರಮಾದೇವಿ ೧೫೨
ರಂಗ ೬೪ ೧೨೭ ೧೨೮ ೧೫೬ ೧೫೮
ರಂಗನಾಥ ೨೭ ೨೮ ೨೯
ರಾಜಮನಿಯಾ ೧೦೦
ರಾಣಾಕುಂಭಾ ೧೧೩
ರಾಣಾಸಾಂಗಾ ೧೧೩ ೧೧೪
ರಾಧಾ (ಧೆ) ೨ ೧೯ ೨೦ ೧೪೦ ೧೪೧ ೧೪೫ ೧೪೬ ೧೫೧ ರಿಂದ ೧೫೭ ೧೬೦ ೧೬೪ ೧೬೫
ರಾಮ (ಶ್ರೀರಾಮ) ೧ ೪೦ ೪೧ ೫೭ ೧೦೪ ೧೦೮ ೧೦೯ ೧೫೦ ೧೫೯ ೧೬೦
ರಾಮಚಂದ್ರ ೫೭
ರಾಮಚಂದ್ರಕವಿ ೧೬೫
ರಾಮದಾಸ ೬೦ ೯೧
ರಾಮಾನುಜ ೧ ೭ ೬೬ ೧೦೪
ರಾಮಾನಂದ ೧ ೧೮ ೯೯ ೧೦೦ ೧೦೪ ೧೩೮
ರಾಮ್‌ದೂದಾ ೧೧೨ ೧೧೩
ರುದ್ರ ೬ ೧೦೮
ರುದ್ರನ್ಯಾಯವಾಚಸ್ಪತಿ ೧೬೫

ರೂಪಗೋಸ್ವಾಮಿ ೧೪೫
ರೈದಾಸರು ೧೧೫
ರೋಹಿಣೀ ೨೮
ಲಕ್ಕವಣಾಂಬೆ ೬೦
ಲಕುಮಿ ೬೯
ಲಲ್ಲೇಶ್ವರಿ (ಲಲ್ಲಾದೇವಿ, ಲಲ್ಲಾ) ೧೫ ೧೬
ಲಕ್ಷ್ಮಣಸೇನ ೧೫೨
ಲಕ್ಷ್ಮೀದೇವಿ ೧೩೯
ಲಕ್ಷ್ಮೀನಾರಾಯಣ ೨೦
ಲಕ್ಷ್ಮೀಬಾಯಿ ೯೮
ಲೀಲಾಶುಕ (ಕೃಷ್ಣಲೀಲಾಶುಕ) ೧೫೨ ೧೫೩ ೧೬೦
ಲೋಕಸಾರಂಗ ೨೯
ಲೋಯಿ ೧೦೦
ಲೋಲಂಬರಾಜ ೧೬೫
ಲೋಹಿಯಾಮಹಾರಾಜ್ ೯೬
ವರದಪ್ಪ (ನಾಯಕ) ೯೮
ವರಾಹ ೧೫೯
ವಲ್ಲಭಾಚಾರ್ಯ ೧೧೫ ೧೩೨ ೧೩೮
ವಾದಿರಾಜರು ೧೧ ೫೧
ವಾಮನ ೩೮ ೪೦ ೪೧
ವಾಲ್ಮೀಕಿ ೭೭ ೧೩೧ ೧೩೬
ವಾಸುದೇವ ೭೫ ೧೧೪ ೧೩೮
ವಾಸುದೇವ ಬಾಬಾ ದೇಹೂರ್‌ಕರ್ ೯೬
ವ್ಯಾಸ ೫ ೬
ವ್ಯಾಸರಾಯರು ೧೧ ೨೨ ೫೧ ೬೧ ೧೦೦ ೧೦೧ ೧೦೩ ೧೧೫ ೧೨೨
ವಿಕ್ರಮಸಿಂಹ ೧೧೪
ವಿಜಯದಾಸರು ೯೮
ವಿಠಲ (ವಿಟ್ಠಲ, ವಿಠೋಬಾ) ೧ ೨ ೧೩ ೧೪ ೬೧ ೬೭ ೮೨ ೮೬ ೯೦ ೯೩ ೯೫ ೯೬ ೧೦೮ ೧೧೮
ವಿಠಂಣ ೮೫
ವಿದ್ಯಾಪತಿ ೧೭ ೨೦ ೧೪೫
ವಿಶ್ವಂಭರ ೧೩೯ ೧೪೦
ವಿಶಾಖ ೨೫
ವಿಷ್ವಕ್ಸೇನ ೪೧
ವಿಷ್ಣು ೧ ೩ ೮ ೨೧ ೨೫ ೨೬ ೨೭ ೬೬ ೭೧ ೭೨ ೭೮ ೮೩ ೮೯ ೯೮
ವಿಷ್ಣುಚಿತ್ತ ೨೬
ವಿಷ್ಣುಪ್ರಿಯಾ ೧೩೯ ೧೪೪
ವಿಷ್ಣುಪುರೀ ೧೪೫
ವಿಷ್ಣುಬುವಾಜೋಗ್ ೯೬
ವಿಸೋಬಾ ಖೇಚರ್ ೧೩
ವೀರಮದೇವ ೧೧೨ ೧೧೪
ವೆಳ್ಳಾಳರ ಕಾರಿಯಾರ್ ೨೫
ವೆಂಕಟೇಶ್ವರ ೧೨ ೬೧ ೭೯
ವೇಣುಗೋಪಾಲ ೧೫೮
ವೈಜಯಂತೀಮಾಲೆ (ಲಾ) ೨೭ ೧೧೮
ಶಕಟಾಸುರ ೩೮
ಶಠಕೋಪಮುನಿ ೬೦
ಶತಭಿಷ ೨೩
ಶಂಕರ ೭
ಶಂಕರದೇವ ೨೦
ಶಂಕರಸ್ವಾಮಿ ಶಿವೂರ್‌ಕರ್ ೯೬
ಶಾರ್ಙ್ಗ ೨೯
ಶಾಹುಭೂಪಾಲ ೬೦
ಶ್ಯಾಮಾಶಾಸ್ತ್ರಿ ೬೦
ಶಿವ ೧ ೨೫ ೫೬ ೫೭ ೫೯ ೭೧ ೭೮ ೮೩
ಶಿವಛತ್ರಪತಿ ೯೧
ಶಿವಲೆಂಕಮಂಚನ ಪಂಡಿತ ೧೧
ಶಿವ್ವಲ್ಲಿ ೨೩
ಶುದ್ಧಾ ಸ್ವಭಾವ ೧೫೧
ಶೇಕ್ಕಿಳಾರ್ ೯
ಶ್ರವಣ ೨೨
ಶ್ರೀಧರಸ್ವಾಮಿ ೧೬೫

ಶ್ರೀನಿವಾಸ ೨೬ ೨೮ ೩೯ ೧೪೮
ಶ್ರೀನಿವಾಸ ನಾಯಕ ೯೮ ೧೩೯
ಶ್ರೀಪತಿ ೧೪೧
ಶ್ರೀಪತಿಪಂಡಿತ ೧೧
ಶ್ರೀಪಾದರಾಜ(ರು) ೨ ೧೧ ೬೧ ೧೦೩ ೧೪೪
ಶ್ರೀವತ್ಸ ೨೮
ಶ್ರೀಶ ೧೪೩
ಶ್ರೀಹರಿ (ಹರಿ) ೨ ೨೫ ೩೨ ೩೩ ೩೫ ೩೭ ೩೮ ೫೨ ೫೬ ೭೫ ೭೬ ೧೦೪ ೧೦೮ ೧೧೪ ೧೧೫ ೧೧೮ ೧೧೯ ೧೨೩ ೧೨೯ ೧೩೧ ೧೩೨ ೧೪೨ ೧೪೩ ೧೪೪ ೧೪೮ ೧೪೯ ೧೫೦ ೧೫೫
ಷೇಕ್ ತಖೀ ೧೦೦
ಸಚೀದೇವಿ (ಸಚೀ) ೧೩೯ ೧೪೪
ಸನಾತನ ಗೋಸ್ವಾಮಿ ೧೪೫
ಸರಸ್ವತೀಬಾಯಿ ೯೮
ಸ್ವಯಂಭೂ ೧೫೧
ಸಾಖರೇ ಮಹಾರಾಜ್ ೯೬
ಸಾರಂಗಪಾಣಿ ೬೦
ಸ್ವಾತಿತಿರುನಾಳ್ ೬೦
ಸಿಕಂದರ್ ಲೋದಿ ೧೦೦
ಸಿದ್ಧಾರ್ಥ ೨೨
ಸಿದ್ಧರಾಮ ೪೫
ಸಿಂಗಗಾವುಂಡ ೮೬
ಸೀತೆ ೬೪
ಸುದರ್ಶನ ೩೩
ಸುಬಲಚಂದ್ರ ೧೬೫
ಸುಬ್ಬರಾಮದೀಕ್ಷಿತ ೬೦
ಸುಲಭತೀರ್ಥ ೮೩
ಸುಂದರರ್ ೮ ೯
ಸೂರ್ಯ ೮
ಸೂರದಾಸ್ ೧ ೪ ೧೯ ೧೧೬ ೧೧೭ ೧೨೨ ೧೨೪ ೧೨೫ ರಿಂದ ೧೩೭
ಸೇನಾಸ್ವಾಮೀ ೧೩
ಸೌಗಂಧಿಕ ೬೪
ಹನುಮಂತ (ಹನುಮ) ೪೧ ೬೩
ಹವಳೆಯ್ಯ ೪೭
ಹರಿವಂಶಗೋಸ್ವಾಮಿ ೧೬೫
ಹರಿಹರ ೧೧
ಹಲಾಯುಧ ೧೬೦
ಹಿರಣ್ಯಕಶಿಪು ೩೮ ೩೯
ಹೈಬತ್‌ರಾವ್ ಬಾಬಾ ೯೬
ಕ್ಷೇತ್ರಯ್ಯ ೫೯ ೬೦

## ಸ್ಥಳನಾಮಗಳು

ಅಜಮೀರ್ ೧೧೪
ಅಯೋಧ್ಯೆ ೨೫
ಇಂಗಳೇಶ್ವರ ೪೨
ಉಡುಪಿ ೫೧ ೭೯ ೧೦೨ ೧೪೦
ಕಡಪ ೬೦
ಕಪ್ಪಡಿ ಸಂಗಮ ೪೩
ಕಲ್ಯಾಣ ೪೩ ೪೫
ಕಾಶಿ ೨೫ ೭೯ ೯೨ ೯೮ ೯೯
ಕಾಂಚೀಪುರ ೨೨
ಕುಡುಕಿ ೧೧೩
ಕುರುಕಾಪುರಿ (ಆಳ್ವಾರ್ ತಿರುನಗರಿ) ೨೫
ಕುಂಭಕೋಣ ೭೯
ಕೂಡಲಿ ೮೪
ಕೇದಾರ ೧೦೨
ಕೊಲ್ಲಿನಗರ ೨೬
ಗಯಾ ೧೩೯
ಗುರುವಾಯೂರು ೭೯
ಚಿತ್ತೂರು ೧೧೩
ಚಿದಂಬರಮ್ ೯

ಚೆಂಗಲ್ಪಟ್ಟು ೨೩
ಚೆಂಜಿ ೫೯
ಗೋಕರ್ಣ ೭೯
ಗೋಕುಲ ೭೪
ತಂಜಾವೂರು ೫೯
ತಾಳ್ಳಪಾಕ ೬೦
ತಿರುಕ್ಕಡಲ್ ೨೩
ತಿರುಕ್ಕರಂಬನೂರು ೨೮
ತಿರುಕ್ಕಳುಕ್ಕುನ್ರಂ ೯
ತಿರುಕ್ಕೋವಿಲೂರು ೨೩
ತಿರುಕ್ಕೋಳೂರು ೨೫
ತಿರುಪತಿ ೫೧ ೭೯ ೧೦೨
ತಿರುಪೆರುಂನ್ದುರೈ ೯
ತಿರುವಾಲಿ ತಿರುನಗರಿ ೨೯
ತಿರುವಾಂಕೂರು ೨೬
ತೀರ್ಥಹಳ್ಳಿ ೮೩ ೮೫
ದ್ವಾರಕೆ ೧೮
ದೇವಗಿರಿ ೮೬
ನವದ್ವೀಪ ೧೩೯ ೧೪೦ ೧೪೪ ೧೪೯
ನಾಗಾವಿ ೮೯
ನಾದಿಯಾ ೧೩೯
ನೌಗ್ರಾಂಗ್ ೨೦
ಪುಣೆ ೧೩೯
ಪಂಡರಂಗೆ (ಪಂಢರಪುರ) ೧೩ ೧೪ ೮೬ ೮೭ ೮೯ ೯೧ ೯೨ ೯೫
ಪುರಂದರಗಡ ೯೨ ೧೩೯
ಪುರಿ (ಪುರಿ ಜಗನ್ನಾಥ, ಜಗನ್ನಾಥ) ೧೪೦ ೧೪೯ ೧೫೨
ಪೈಠಣ ೯೧
ಬದರಿಕಾಶ್ರಮ ೨೫
ಬ್ರಜ (ವ್ರಜ) ೧೧೭ ೧೩೭
ಬಾಗೇವಾಡಿ ೪೨
ಬಿಜಾಪುರ ೪೨
ಬಿಂದುಬಿಲ್ವ ೧೫೨
ಬೃಂದಾವನ(ವೃಂದಾವನ) ೭೪ ೧೧೪ ೧೧೫ ೧೪೦ ೧೫೭ ೧೬೪
ಬೆಲಹರ ೯೮ ೯೯
ಬೇಲೂರು ೮೫
ಮಗಹರ ೯೮ ೧೧೦ ೧೧೧
ಮಥುರಾ (ಮಥುರೆ) ೫೯ ೧೩೦
ಮದನಪಲ್ಲಿ ೯೪
ಮದ್ರಾಸ್ ೨೩
ಮಂಗಳವಾಡ ೪೩
ಮುಕ್ತಸ್ಥಳ ೧೬೦
ಮೇಥತಾ ೧೧೩ ೧೧೪
ಮೈಲಾಪುರ ೨೩
ಮೈಸೂರು ೫೧ ೫೯ ೧೦೨
ಮೊಹೆಂಜೊದಾರೊ ೬
ರಾಜಂಪೇಟ ೬೦
ರಾಮೇಶ್ವರ ೭೯
ಲಕ್ಕುಂಡಿ ೮೯
ವಾರಾಣಾಸಿ ೧೪೦
ವ್ಯಾಸಸಮುದ್ರ ೯೪
ವಿಜಯನಗರ ೯೧ ೧೦೦ ೧೪೦
ವಿಲ್ಲಿಪುತ್ತೂರು ೨೬
ಶಿವಮೊಗ್ಗಾ ೮೩
ಶ್ರೀಕೂರ್ಮ ೮೫
ಶ್ರೀರಂಗ ೨೮ ೭೯
ಶ್ರೀಲಂಕ ೧೬
ಹರಪ್ಪ ೬

## ಗ್ರಂಥನಾಮಗಳು

ಅಧ್ಯಾತ್ಮರಾಮಾಯಣ ಕಿಳಿಪ್ಪಾಟ್ಟು ೧೨ ೭೭
ಅನುಗೀತೆ ೧೩೮

ಅಮಲನಾದಿಪಿರಾನ್ ೨೯
ಆದಿಗ್ರಂಥ ೧೦೬
ಆನಂದಲಹರೀ ೯೨
ಉಪನಿಷತ್ತು ೬ ೨೭ ೨೮ ೭೭ ೧೫೫
ಋಗ್ವೇದ (ವೇದಗಳು) ೬ ೨೦ ೭೭
ಏಕನಾಥೀ ಭಾಗವತ ೯೨
ಕಣ್ಣಿನುಣ್ ಶಿರುತ್ತಾಂಬು ೨೬
ಕಬೀರ ಗ್ರಂಥಾವಲೀ ೧೦೬
ಕೃಷ್ಣಗಾಥಾ ೧೨ ೭೧ ೭೨
ಗಂಗಾವಾಕ್ಯಾವಲೀ ೧೭
ಗೀತಗೋವಿಂದ ೩ ೧೯ ೨೬ ೧೪೫ ೧೫೨ ೧೫೩ ೧೫೫ ೧೫೭ ೧೬೦ ೧೬೪ ೧೬೫
ಗೀತಗೋವಿಂದ ಟೀಕಾ ೧೦೬
ಗೀತಾಸಾರ ೯೨
ಗೌರಚಂದ್ರಿಕಾ ೧೪೯
ಗೌರಾಂಗ ದೀಪಿಕೆ ೧೪೫
ಚತುಃಶ್ಲೋಕೀಭಾಗವತ ೯೨
ಚರೀತ್ ೧೧೬
ಚೈತನ್ಯ ಚರಿತಾಮೃತ ೧೪೪
ಜ್ಞಾನಪ್ಪಾನ ೮೦
ಜ್ಞಾನೇಶ್ವರಿ ೧ ೯೦
ತಿರುಕ್ಕುರುಂದಾಂಡಕಂ ೩೦
ತಿರುಚ್ಚಂದವಿರುತ್ತಮ್ ೨೪ ೨೫ ೩೬
ತಿರುತ್ತೊಂಡತ್ತೊಗೈ ೯
ತಿರುತ್ತೊಂಡರ್ ಪುರಾಣಂ ೯
ತಿರುನೆಡುಂದಾಂಡಕಂ ೩೦
ತಿರುಪ್ಪಲ್ಲಾಂಡು ೨೬
ತಿರುಪ್ಪಳ್ಳಿ ಎಳುಚ್ಚಿ ೨೮
ತಿರುಪ್ಪಾವೈ ೨೭
ತಿರುಪ್ಪುಗಳ್ ೧೦
ತಿರುಮಾಲೈ ೨೮
ತಿರುಮುರೈ ೮
ತಿರುವಂದಾದಿ ೨೪
ತಿರುವಾಚಕಮ್ ೯
ತಿರುವಾಯ್ಮೊಳಿ ೧ ೨೫
ತಿರುವಾಶಿರಿಯಂ ೨೫
ತಿರುವಿರುತ್ತಂ ೨೫
ತಿರುವೆಳುಕ್ಕೂರ್ ತಿರುಕ್ಕೈ ೩೦
ತೇವಾರಮ್ ೮
ದಿವ್ಯಪ್ರಬಂಧಮ್ ೮
ದುರ್ಗಾಭಕ್ತಿತರಂಗಿಣಿ ೧೭
ನರಸೀಜೀತಾ ಮಾಯರಾ ೧೦೬
ನರಸೀಮೇಹತಾನೀ ಹುಂಡೀ ೧೦೬
ನಾಚ್ಚಿಯಾರ್ ತಿರುಮೊಳಿ ೨೭
ನಾನ್ಮುಕನ್ ತಿರುವಂದಾದಿ ೨೪ ೩೫
ನಾರದ ಭಕ್ತಿಸೂತ್ರ ೫
ನಾಲಾಯಿರ ದಿವ್ಯಪ್ರಬಂಧಮ್ ೧೨
ಪರಿಪಾಡಲ್ ೮
ಪ್ರಮೇಯ ರತ್ನಾವಳಿ ೧೪೩
ಪೆರಿಯ ತಿರುಮಡಲ್ ೩೦
ಪೆರಿಯ ತಿರುವಂದಾದಿ ೨೫
ಪೆರಿಯ ತಿರುವಾಯ್ಮೊಳಿ ೩೦
ಪೆರಿಯ ಪುರಾಣಮ್ ೯
ಪೆರಿಯಾಳ್ವಾರ್ ತಿರುಮೊಳಿ ೨೬
ಪೆರುಮಾಳ್ ತಿರುಮೊಳಿ ೨೬
ಬಸವ ಪುರಾಣ ೧೧
ಬ್ರಹ್ಮವೈವರ್ತ ಪುರಾಣ ೧೫೧ ೧೫೨
ಬೀಜಕ ೧೦೬
ಬೃಂದಾವನ ವಿನೋದ ೧೬೫
ಭಕ್ತಿ ರತ್ನಾವಳಿ ೧೪೫
ಭಗವದ್ಗೀತೆ ೬ ೨೦ ೭೧ ೧೩೮

ಭಾಗವತ (ಪುರಾಣ) ೭ ೧೨ ೨೬ ೨೮ ೫೨ ೬೩ ೬೪ ೮೧ ೯೧ ೧೨೩ ೧೪೫ ೧೪೬ ೧೫೧ ೧೫೨ ೧೬೫
ಭಾರತಂಕಿಳಿಪ್ಪಾಟ್ಟು (ಮಹಾಭಾರತಕಿಳಿಪ್ಪಾಟ್ಟು) ೭೭ ೭೮
ಭಾವಾರ್ಥರಾಮಾಯಣ ೯೨
ಮಲಾರ್‌ರಾಗ್ ೧೧೬
ಮಹಾಭಾಗವತ ೧೨
ಮಹಾಭಾರತ ೬ ೫೨ ೬೩ ೬೪ ೭೧ ೭೭ ೭೮ ೮೧ ೧೫೧
ಮಹಾಭಾರತ ತಾತ್ಪರ್ಯ ನಿರ್ಣಯ ೮೫
ಮಹಾಭಾಷ್ಯ ೧೩೮
ಮೀರಾ ಕೀ ಗರ್‌ವೀ ೧೧೬
ಮುಕುಂದ ಮಾಲಾ (ಲೆ) ೨೬ ೧೫೩
ಮೋಹನತರಂಗಿಣಿ ೭೯
ರಸಕೃಷ್ಣಮಾಧುರೀ ೧೬೫
ರಾಗ್ ಗೋವಿಂದ್ ೧೧೬
ರಾಗ್ ಸೋರಠಾಕಾ ಪದ್ ೧೧೬
ರಾಧಾಮಾನ ತರಂಗಿಣಿ ೧೬೫
ರಾಧಾರಹಸ್ಯ ೧೬೫
ರಾಧಾವಿನೋದ ೧೬೫
ರಾಧಾರಸಸುಧಾನಿಧಿ ೧೬೫
ರಾಧಾ ಸೌಂದರ್ಯಮಂಜರೀ ೧೬೫
ರಾಮಚರಿತ ೭೧
ರಾಮಚರಿತಮಾನಸ ೧
ರಾಮಾಯಣ ೫೨ ೬೩ ೭೧ ೭೭ ೮೧
ರಾಸಕಲ್ಪ ಸಾರತತ್ವ ೧೬೫
ರುಕ್ಮಿಣೀ ಮಂಗಲ್ ೧೧೬
ರುಕ್ಮಿಣೀ ಸ್ವಯಂವರ್ ೯೨
ರುದ್ರಸೂಕ್ತ ೬
ವ್ರಜವಿಹಾರ ೧೬೫
ವಿಷ್ಣುಧರ್ಮೋತ್ತರ ಪುರಾಣ ೨೮
ವಿಷ್ಣು ಪುರಾಣ ೧೫೧ ೧೫೨ ೧೬೫
ಶಿರಿಯ ತಿರುಮಡಲ್ ೩೦
ಶಿವತತ್ವಸಾರ ೧೧
ಶಿವಸರ್ವಸ್ವಸಾರ ೧೭
ಶಿಕ್ಷಾಷ್ಟಕ ೧೪೨ ೧೪೬
ಶ್ರೀಕೃಷ್ಣಕರ್ಣಾಮೃತ (ಕೃಷ್ಣಕರ್ಣಾಮೃತ) ೧೫೩ ೧೬೨ ೧೬೪
ಶುಕಾಷ್ಟಕ ೯೨
ಸತಭಾಮಾಣಾಂ ರೂಸಣಂ ೧೧೬
ಸಂಗೀತ ಸಂಪ್ರದಾಯ ಪ್ರದರ್ಶಿನಿ ೬೦
ಸಂಗೀತ ಸುಧಾ ೬೦
ಸಂತಾನ ಗೋಪಾಲಂ ೭೯
ಸಾಹಿತ್ಯಲಹರಿ ೧೩೫
ಸ್ವಾತ್ಮಸುಖ ೯೨
ಸುಂದರ ದಾಮೋದರ ೧೬೫
ಸೂರ ಸಾಗರ ೧೩೫
ಸೂರ ಸಾರಾವಲೀ ೧೩೫
ಸಿಂಹಗಿರಿವಚನಗಳು ೧೧
ಸ್ಫುಟ್ ಪದ್ ೧೧೬
ಹರಿನಾಮಸಂಕೀರ್ತನಮ್ ೧೨
ಹರಿಭಕ್ತಿರಸಾಮೃತ ಸಿಂಧು ೬
ಹರಿವಂಶ ೧೫೧ ೧೫೨ ೧೬೫
ಹಸ್ತಾಮಲಕ ೯೨





ಮೈಸೂರು ನಗರದ ಅದರಲ್ಲೂ ಸರಸ್ವತೀಪುರ-ಕುವೆಂಪು ನಗರ ಬಡಾವಣೆಗಳ ಕಲಾಭಿಮಾನಿಗಳಿಗೆ ಚಿರಪರಿಚಿತವಾಗಿರುವ ಗಾನಭಾರತೀ (ರಿ) ಸಂಸ್ಥೆಗೆ ೧೯೯೦ ಫೆಬ್ರವರಿ ೨ನೇ ತಾರೀಕಿಗೆ ಹನ್ನೆರಡು ವರ್ಷಗಳು ತುಂಬುತ್ತವೆ. ಕಳೆದ ವರ್ಷಗಳಲ್ಲಿ ಈ ಸಂಸ್ಥೆ ನಡೆಸಿಕೊಂಡು ಬಂದಿರುವ ಮಾಸಿಕ ಸಂಗೀತ ಕಛೇರಿಗಳು, ಶ್ರೀಕೃಷ್ಣಜಯಂತೀ ಸಂಗೀತೋತ್ಸವ, ಶ್ರೀ ಪುರಂದರ ತ್ಯಾಗ ರಾಜ ಆರಾಧನೋತ್ಸವ, ತರುಣಭಾರತೀ ಪ್ರತಿಭಾಪ್ರದರ್ಶನ, ಸಂಗೀತ ಸ್ಪರ್ಧೆ, ಸಂಗೀತ ವಿಷಯದ ಪ್ರಬಂಧ ಮಂಡನೆ ಹಾಗೂ ಪ್ರಾತ್ಯಕ್ಷಿಕೆ, ಸವಿ ಸಂಚಿಕೆ ಮತ್ತು ಗ್ರಂಥಪ್ರಕಟಣೆ, ಕಲಾವಿದರಿಗೆ ಸನ್ಮಾನ, ಸಹಾಯಾರ್ಥ ಪ್ರದರ್ಶನಗಳು ಮುಂತಾದವು ಕಲಾರಸಿಕರ ಗಮನವನ್ನು ವಿಶೇಷವಾಗಿ ಸೆಳೆದಿವೆ.

ಕಲಾವಿದರು ಹಾಗೂ ಕಲಾಪ್ರೇಮಿಗಳ ಕೈಗೂಸಾಗಿದ್ದ ಗಾನಭಾರತೀ ತನ್ನ ಯೌವ್ವನಾವಸ್ಥೆಗೆ ಕಾಲಿಡುತ್ತಿರುವ ಈ ಸಂದರ್ಭದಲ್ಲಿ ನೂರಾರು ಸದಸ್ಯರ ಪೋಷಕರ ಪ್ರೀತಿ ಆತ್ಮೀಯತೆಗಳನ್ನುಂಡು ಬೆಳೆಯುತ್ತಾ ಪ್ರವರ್ಧಮಾನಕ್ಕೆ ಬರುತ್ತಿದೆ. ತತ್ಫಲವಾಗಿ ಸ್ವಂತ ನಿವೇಶನವನ್ನು ಖರೀದಿಸಿದ್ದು, ಅಲ್ಲಿ 'ವೀಣೆ ಶೇಷಣ್ಣ ಭವನ' ವ್ಯೈತಾಳುತ್ತಿದೆ. ಕಟ್ಟಡದ ನಿಧಿಗೆ ಸಹೃದಯರ ಸಹಾಯಹಸ್ತ ಸದ್ದಿಲ್ಲದೆ ದೊರೆಯುತ್ತಿದೆ. ಬಹುಶಃ ಮುಂದಿನ ವರ್ಷ, ೧೯೯೧, ಗಾನಭಾರತೀ ತನ್ನ ಸ್ವಂತ ಕಟ್ಟಡ 'ವೀಣೆಶೇಷಣ್ಣ ಭವನ'ದಲ್ಲಿಯೇ ಕಾರ್ಯಕ್ರಮಗಳನ್ನು ನಡೆಸಲು ಸಮರ್ಥವಾಗುತ್ತದೆ.

ಈಗಾಗಲೇ ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ 'ಕಲ್ಲುಸಕ್ಕರೆ' (೧೯೮೦) 'ಕನಕಸಂಪುಟ' (೧೯೮೨), 'ಹರಿದಾಸವಾಙ್ಮಯ' (೧೯೮೫) ಕೃತಿಗಳನ್ನು ಪ್ರಕಟಿಸಿರುವ ಗಾನಭಾರತೀ ಈಗ 'ದಾಸಸಾಹಿತ್ಯ ಸಂಧೆ' ಎಂಬ ಪುಸ್ತಕವನ್ನು ಪ್ರಕಟಿಸುತ್ತಿದೆ. ಹನ್ನೊಂದು ವಿಮರ್ಶಾತ್ಮಕ ಪ್ರಬಂಧಗಳ ಸಂಕಲನವಿದು. ಇದರ ಪ್ರಕಟಣೆಗೆ ತಿರುಮಲೆ ತಿರುಪತಿ ದೇವಸ್ಥಾನದಿಂದ ಆರ್ಥಿಕ ಸಹಾಯ ದೊರೆತಿದೆ.

ರೂ. ೧೦

ಗಾನಭಾರತೀ (ರಿ) ೩೫೮ ಪುನರ್ವಸು, ನವಿಲು ರಸ್ತೆ, ಕುವೆಂಪುನಗರ
ಮೈಸೂರು ೫೭೦೦೨೩
ವಿತರಣೆ : ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿಪುರ ಮೈಸೂರು
೫೭೦೦೦೪